# ದಿವಾಣ ಸ್ಪಂದಿಸಿದ



ದಿವಾಣ ಭೀಮ ಭಟ್ಟ
ಜನ್ಮ ಶತಮಾನ ಸ್ಮೃತಿ ಸಂಚಯ




ಸಂಪಾದಕರು
ಡಾ. ಎಂ. ಪ್ರಭಾಕರ ಜೋಶಿ
ಹಿರಣ್ಯ ವೆಂಕಟೇಶ್ವರ ಭಟ್ಟ

# ದಿವಾಣ ಸಂಪದ

## ದಿವಾಣ ಭೀಮ ಭಟ್ಟ
## ಜನ್ಮ ಶತಮಾನ
## ಸ್ಮೃತಿ ಸಂಚಯ

ಸಂಪಾದಕರು

**ಡಾ. ಎಂ. ಪ್ರಭಾಕರ ಜೋಶಿ**

**ಹಿರಣ್ಯ ವೆಂಕಟೇಶ್ವರ ಭಟ್ಟ**

**2015**

**ದಿವಾಣ ಭೀಮ ಭಟ್ಟ ಜನ್ಮ ಶತಮಾನೋತ್ಸವ ಸಮಿತಿ**

'ಅನನ್ಯ' ಕುಂಟಲ್ಪಾಡಿ, ಶಕ್ತಿನಗರ

ಮಂಗಳೂರು – 575 016, ದಕ್ಷಿಣಕನ್ನಡ



# DIVANA SAMPADA

## ದಿವಾಣ ಸಂಪದ


Birth Centenary Commemoration Volume in Honour of the Great Yakshagana Artist Divana Bhima Bhat

Published by :
**Divana Bhima Bhat Janma Shatamanotsava Samithi**
'Ananya' Kuntalpady, Shaktinagar
Mangaluru - 575 016, Dakshinakannada
Mob : 9448367645

Editors :
**Dr. M. Prabhakar Joshy, Hiranya Venkateshwara Bhat**





First Edition : 2015 Pages : xvi+200+8 Price : Rs. 300

Copies : 1000 Paper used : 80 gsm maplitho Size : Demy 1/8

Cover Design :
**Dinesh Holla**

Designed & Printed at :
**Aakrithi Prints**
Light House Hill Road, Mangaluru - 575 001
Tel. : 0824 2443002



**ದಿವಾಣ ಸಂಪದ**

ದಿವಾಣ ಭೀಮ ಭಟ್ಟ

ಜನ್ಮ ಶತಮಾನ ಸ್ಮೃತಿ ಸಂಚಯ

ಈ ಸಂಸ್ಮರಣ ಗ್ರಂಥದ

ಮುದ್ರಣ ಪ್ರಾಯೋಜಕರು

---

**ಅನನ್ಯ ಫೀಡ್ಸ್**

ಚೆಂಡೆ ಮಾರ್ಕಿನ

ಅತ್ಯುತ್ತಮ ಪಶು ಆಹಾರ ತಯಾರಕರು

ತಾರಿಹಾಳ

ಇಂಡಸ್ಟ್ರಿಯಲ್ ಏರಿಯಾ

ಹುಬ್ಬಳ್ಳಿ

ದೂರವಾಣಿ : 0836 2310645

# ಶ್ರೀ ಮಜ್ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಮ್

ಶ್ರೀಮದ್ರಾಮಚಂದ್ರಾಪುರ ಮಠ, ಹೊಸನಗರ.



ಶ್ರೀ ಮಜ್ಜಗದ್ಗುರು ಶಂಕರಾಚಾರ್ಯ
ಮಹಾಸಂಸ್ಥಾನಾಧೀಶ್ವರರಾದ, ಗೋಕರ್ಣಮಂಡಲಾಧೀಶ್ವರ

**ಶ್ರೀ ಶ್ರೀ ಶ್ರೀ ರಾಘವೇಶ್ವರ ಭಾರತೀ ಮಹಾಸ್ವಾಮಿಗಳವರು**

ಶ್ರೀ ದಿವಾಣ ಭೀಮ ಭಟ್ಟ ಜನ್ಮಶತಮಾನೋತ್ಸವ
ಮತ್ತು
ಸರಣಿ ಕಾರ್ಯಕ್ರಮಗಳಿಗೆ
ಆಶೀರ್ಮಂತ್ರಾಕ್ಷತೆಗಳನ್ನು ನೀಡಿ ಅನುಗ್ರಹಿಸಿರುತ್ತಾರೆ.

ಶ್ರೀ ಎಡನೀರು ಮಠ
ಎಡನೀರು

ಕಾಸರಗೋಡು, ದ. ಭಾರತ
ದಿನಾಂಕ : 14 ಜನವರಿ 2015

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣಪಾರಾವಾರಪಾರೀಣ
ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣಸಮಾಧಿಮುಖ್ಯಾಷ್ಟಾಂಗಯೋಗನಿರತ
ತಪಶ್ಚಕ್ರವರ್ತ್ಯನಾದ್ಯಂತಗುರುಭೂಮಂಡಲಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ
ವೈದಿಕಮಾರ್ಗ ಪ್ರವರ್ತಕ ವೇದವೇದಾಂತಪಾರಗ ಷಣ್ಮತೋದ್ಧಾರಕ ತತ್ವಮಸಿಮಹಾವಾಕ್ಯಾರ್ಥ
ನಿರ್ಣಾಯಕ ಡಂಭಾಬ್ಧಿ ಕುಂಭೋದ್ಭವ ಉಪಣತ್ರಯಾದಿವಿಷಯಕಲ್ಪಾಂತರುದ್ರಾವತಾರ
ಶ್ರೀಮಚ್ಛಂಕರಾಚಾರ್ಯಮುಖ್ಯಶಿಷ್ಯ ಶ್ರೀತೋಟಕಾಚಾರ್ಯಪರಂಪರಾಗತ
ಶ್ರೀಕಂಬರಪಟ್ಟಿಮಠಾಧಿವಾಸ ಶ್ರೀದಕ್ಷಿಣಾಮೂರ್ತಿಗೋಪಾಲಕೃಷ್ಣ ದೇವಪಾದ
ಪದ್ಮಾರಾಧಕ ಶ್ರೀಮದದ್ವೈತಮತಾವಲಂಬಿ ಶಿವಳ್ಳಿದೇಶೀಯವಿದ್ಯಾಚಾರವಿಚಾರಕ
ಶ್ರೀ ಯೆಡನೀರು ಮಠಾಧಿಪ ಶ್ರೀಮದೀಶ್ವರಾನಂದಭಾರತೀಕರಕಮಲಸಂಜಾತರಾದ

# ಶ್ರೀ ಕೇಶವಾನಂದ ಭಾರತೀ ಶ್ರೀಪಾದಂಗಳವರು

ನಮ್ಮ ಸಂಸ್ಥಾನದ ಮುಖ್ಯಾಭಿಮಾನಿಗಳಾದ ........ ದಿವಾಣ ಗೋವಿಂದ ಭಟ್ಟ ........ರಿಗೆ ಮಾಡುವ ಶ್ರೀಮನ್ನಾರಾಯಣಸ್ಮರಣೆಗಳು. ನಾವು ಶ್ರೀ ದಕ್ಷಿಣಾಮೂರ್ತಿ ಗೋಪಾಲಕೃಷ್ಣ ದೇವರ ಪೂಜಾ ಜಪವ್ಯಾಖ್ಯಾನಾದಿ ಸ್ವಾಶ್ರಮೋಚಿತ ಧರ್ಮಾನುಷ್ಠಾನ ನಿರತರಾಗಿ ಕುಶಲಿಗಳು. ನಿಮ್ಮ ಸುಕ್ಷೇಮಾತಿಶಯಗಳನ್ನು ತಿಳಿಸುತ್ತಾ ನಮ್ಮ ಮನಸ್ಸಂತೋಷಪಡಿಸುತ್ತಿರಬೇಕು. ಸಾಂಪ್ರತ

ತೆಂಕುತಿಟ್ಟಿನ ಯಕ್ಷಗಾನ ರಂಗವು ಕಂಡ ಅಪ್ರತಿಮ ಹಿಮ್ಮೇಳ ಕಲಾವಿದರಲ್ಲಿ ದಿವಾಣ ಭೀಮ ಭಟ್ಟರು ಓರ್ವರು. ಶ್ರೀಮಠದ ಅಭಿಮಾನಿಗಳಾಗಿ, ಶ್ರೀಗುರು ಪೀಠದ ಕುರಿತಾಗಿ ಅತ್ಯಂತ ಗೌರವಾಭಿಮಾನಗಳನ್ನು ಹೊಂದಿದ್ದರು.

ಶ್ರೀಮಠದ ಯಕ್ಷಗಾನ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರಲ್ಲದೆ ಶ್ರೀ ಮಠದ ಸೇವೆಯನ್ನೂ ಗೈದವರು. ನಮಗೆ ಅವರಲ್ಲಿ ಅತ್ಯಂತ ಪ್ರೀತಿ ಮತ್ತು ಅಭಿಮಾನವಿತ್ತು. ಹಿಮ್ಮೇಳವಾದನದಲ್ಲಿ ಅಪ್ರತಿಮವಾದ ಸಿದ್ಧಿಯನ್ನು ಹೊಂದಿದ್ದರು. ತಾಳ, ಲಯ, ಶ್ರುತಿಗಳೇ ಅವರ ಉಸಿರಾಗಿತ್ತು. ಯಾವಾಗಲೂ ಆ ಕುರಿತೇ ಅವರ ಮನಸ್ಸು ಚಿಂತಿಸುತ್ತಿತ್ತು. ಇದರಿಂದಾಗಿ ವಾದನದಲ್ಲಿ ಹೊಸ ಹೊಸ ಕ್ರಮಗಳನ್ನು ಅವರು ಅಳವಡಿಸುತ್ತಿದ್ದರು. ಅವರ ಇಂತಹ ಚಿಂತನೆಯ ಫಲಿತಾಂಶವು ಅರ್ಥವಾಗದೇ ಇದ್ದ ಇತರರು ಅವರನ್ನು ವಿಷಮವಾದಕರೆಂದು ಗುರುತಿಸಲು ತೊಡಗಿದರು. ಆದರೆ ಅವರ ವಾದನವು ವಿಷಮವಾಗಿರದೇ ವಿಶೇಷವಾದ ಸಮತೆಯನ್ನು ಹೊಂದಿತ್ತು. ಇಂತಹ ಅಪ್ರತಿಮ ಹಿಮ್ಮೇಳ ಕಲಾವಿದ 'ತಾಳ ಲಯಾಂತರಂಗ ಶೋಧಕ' ದಿವಾಣ ಭೀಮ ಭಟ್ಟರ ಕುರಿತಾಗಿ ಸಮಾಜಕ್ಕೆ ಅವರ ಸಾಧನೆಯು ಪರಿಚಯವಾಗುವಂತೆ ವಿವಿಧ ಕಾರ್ಯಕ್ರಮಗಳೊಂದಿಗೆ ಶತಮಾನೋತ್ಸವವನ್ನು ಆಚರಿಸುತ್ತಿವುದು ಅತ್ಯಂತ ಸಂತೋಷವನ್ನು ಉಂಟು ಮಾಡಿದೆ. ಈ ಶತಮಾನೋತ್ಸವ ಸಮಾರಂಭದ ಆಚರಣೆಯಿಂದ ಅಸ್ಮದತ್ಯಂತ ಪ್ರಿಯ ಶಿಷ್ಯರಾಗಿದ್ದ ದಿವಾಣ ಭೀಮ ಭಟ್ಟರ ಹೆಸರು, ಸಾಧನೆ ಮತ್ತು ಸಿದ್ದಿಗಳು ಚಿರಸ್ಥಾಯಿಯಾಗಿ ಉಳಿಯಲಿ. ಕಲಾವಿದರೂ, ಕಲಾಭಿಮಾನಿಗಳೂ ಅವರ ಕುರಿತಾಗಿ ತಿಳಿಯುವಂತಾಗಲಿ.

ಸಮಾರಂಭವು ಯಶಸ್ವಿಯಾಗಿ ನೆರವೇರಲಿ ಎಂದು ನಮ್ಮ ಆರಾಧ್ಯ ದೇವರಾಗಿರುವ ಶ್ರೀ ಗೋಪಾಲಕೃಷ್ಣ ದಕ್ಷಿಣಾಮೂರ್ತಿ ಸನ್ನಿಧಾನದಲ್ಲಿ ಸಂಪ್ರಾರ್ಥಿಸುತ್ತೇವೆ.

ಇತಿ

ಶ್ರೀಮನ್ನಾರಾಯಣ ಸ್ಮರಣೆಗಳು

ಶ್ರೀ ಕೇಶವಾನಂದ ಭಾರತೀ ಶ್ರೀಪಾದಂಗಳವರು

ಶ್ರೀ ಎಡನೀರು ಮಠ

**ಶ್ರೀ ಟಿ. ಶಾಮ ಭಟ್ಟ**
ಆಯುಕ್ತರು, ಬೆಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ,
ಬೆಂಗಳೂರು

## ಚೆಂಡೆ ಮದ್ದಳೆ ವಾದನ ತಪಸ್ವಿ

ಶ್ರೇಷ್ಠ ಕಲಾವಿದ ಶ್ರೀ ದಿವಾಣ ಭೀಮ ಭಟ್ಟರ ಜನ್ಮ ಶತಮಾನೋತ್ಸವವು ಆಚರಿಸಲ್ಪಡುತ್ತಿರುವುದು ಅತ್ಯಂತ ಸಂತೋಷದ ವಿಷಯ. ವರ್ಷಪಿಡೀ ಅವರ ಸಂಸ್ಮರಣೆ, ಕಲಾವಿದರ ಸನ್ಮಾನ ಮತ್ತು ತಾಳಮದ್ದಳೆಗಳು ನಡೆದು ಜನ್ಮ ಶತಮಾನೋತ್ಸವವು ವಿವಿಧ ಕಾರ್ಯಕ್ರಮಗಳೊಂದಿಗೆ ಸಮಾರೋಪವಾಗುತ್ತಿದೆ. ಇದು ಇಂದಿನ ಕಲಾವಿದರಿಗೆ ಅವರ ನೆನಪನ್ನೂ, ಸ್ಫೂರ್ತಿಯನ್ನು ತಂದುಕೊಟ್ಟೀತೆಂದು ಭಾವಿಸುತ್ತೇನೆ.

ತೆಂಕುತಿಟ್ಟು ಯಕ್ಷಗಾನ ಕ್ಷೇತ್ರದ ಕಂಡ ಹಲವು ಅಗ್ರಗಣ್ಯ ಹಿಮ್ಮೇಳವಾದಕರಲ್ಲಿ ದಿವಾಣ ಭೀಮ ಭಟ್ಟರು ಓರ್ವರು. ಸರಳ ಜೀವನ, ಹಿತಮಿತವಾದ ಮಾತು ಮತ್ತು ಯಕ್ಷಗಾನ ಹಿಮ್ಮೇಳದಲ್ಲಿದ್ದ ಅಪ್ರತಿಮವಾದ ಜ್ಞಾನ ಅವರನ್ನು ಎತ್ತರಕ್ಕೆ ಏರಿಸಿದೆ. ಚೆಂಡೆ ಮತ್ತು ಮದ್ದಳೆಗಳ ವಾದನ ಅವರಿಗೊಂದು ತಪಸ್ಸೇ ಆಗಿತ್ತು. ಅವರು ನಿತ್ಯಾಭ್ಯಾಸಿಗಳಾಗಿದ್ದರು. ಸಂಶೋಧಕರಾಗಿದ್ದರು. ವಿಷಮವಾದಕರೆಂದೇ ಪ್ರಸಿದ್ಧರಾದ ಶ್ರೀ ಭೀಮ ಭಟ್ಟರು ನಮ್ಮ ಕೈರಂಗಳದ ಯಕ್ಷಗಾನ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು.

ಯಕ್ಷಗಾನ ರಂಗದ ಪರಿಪೂರ್ಣ ಜ್ಞಾನವನ್ನು ಹೊಂದಿದ್ದ ಅವರನ್ನು 'ಯಕ್ಷಗಾನ ಕಲಾಯೋಗಿ' ಎಂದು ಕರೆದರೂ ಅತಿಶಯೋಕ್ತಿ ಯಾಗಲಾರದು. ಅವರ ಜನ್ಮ ಶತಮಾನೋತ್ಸವ ಸಮಾರೋಪ ಸಮಾರಂಭವು ಯಶಸ್ವಿಯಾಗಲೆಂದು ಹಾರೈಸುತ್ತೇನೆ.

## ಸಂಪಾದಕೀಯ

# ಶ್ರೀ ಭೀಮಸ್ಮೃತಿ ಯೋಗ

ಯಕ್ಷಗಾನ ರಂಗದಲ್ಲಿ ಇಪ್ಪತ್ತನೆಯ ಶತಕದ ಶ್ರೇಷ್ಠ ಹಿಮ್ಮೇಳ ಕಲಾವಿದರಲ್ಲಿ ಓರ್ವರಾದ ಶ್ರೀ ದಿವಾಣ ಭೀಮ ಭಟ್ಟರ ಜನ್ಮಶತಮಾನೋತ್ಸವ ಸಂದರ್ಭದ ಈ ಸಂಚಯದ ಸಂಪಾದಕತ್ವವು ನಮಗೊದಗಿದ ಒಂದು ಗೌರವವೆಂದು ಭಾವಿಸುತ್ತೇವೆ. ಅದಕ್ಕಾಗಿ ಶತಮಾನೋತ್ಸವ ಸಮಿತಿಗೆ ನಾವು ಕೃತಜ್ಞರಾಗಿದ್ದೇವೆ.

ಶ್ರೀ ಭೀಮ ಭಟ್ಟರ ಕಲೆಗಾರಿಕೆ ಮತ್ತು ವ್ಯಕ್ತಿತ್ವಗಳ ವಿವಿಧ ಮುಖಗಳ ಕುರಿತಾಗಿಯೂ, ಯಕ್ಷಗಾನ ಕಲೆಯ ಕೆಲವು ವಿಚಾರಗಳ ಬಗೆಗೂ ಭಟ್ಟರ ನಿಕಟವರ್ತಿಗಳು, ಬಂಧುಗಳು, ಅಭಿಮಾನಿಗಳು, ಶಿಷ್ಯರು, ಕಲಾತಜ್ಞರು ನಮ್ಮ ವಿನಂತಿಯನ್ನು ಮನ್ನಿಸಿ ಬರಹಗಳನ್ನು ನೀಡಿ ಉಪಕರಿಸಿದ್ದಾರೆ. ಅಂತೆಯೇ ಕೆಲವರು ಮಾಹಿತಿಗಳನ್ನು, ಭಾವಚಿತ್ರಗಳನ್ನು ಒದಗಿಸಿದ್ದಾರೆ. ಇವರೆಲ್ಲರಿಗೆ ನಾವು ಆಭಾರಿಗಳು.

ಶ್ರೀ ಭೀಮ ಭಟ್ಟರ ಕುರಿತಾಗಿ ಹಿಂದೆ ಪ್ರಕಟಿತವಾದ ಲೇಖನಗಳನ್ನು ಒಂದನೆಯ ಭಾಗದಲ್ಲಿ ಮಿತ್ರ, ಸಹವರ್ತಿಗಳ, ಅಭಿಮಾನಿಗಳ ಬರಹಗಳನ್ನು ಎರಡನೆಯ ಭಾಗದಲ್ಲಿ, ಯಕ್ಷಗಾನ ಕಲೆಯ ಕೆಲವು ವಿಷಯಗಳಿಗೆ ಸಂಬಂಧಿಸಿದ ಬರಹಗಳನ್ನು ಮೂರನೆಯ ಭಾಗವಾಗಿ, ಒಂದು ಕ್ರಮದಿಂದ ಅಳವಡಿಸಿದ್ದೇವೆ. ನಾಲ್ಕನೆಯ ಭಾಗವಾದ ಅನುಬಂಧದಲ್ಲಿ ಸಮಿತಿಯ ಮತ್ತಿತರ ವಿವರಗಳಿವೆ.

ಗ್ರಂಥದ ಸಿದ್ಧತೆಯ ವಿವಿಧ ಹಂತಗಳಲ್ಲಿ ಕರಡಚ್ಚು ತಿದ್ದುವಿಕೆ, ಪರಿಷ್ಕರಣೆಗಳಲ್ಲಿ ನೆರವಾದ ಕಲಾವಿದ ಮಿತ್ರರಾದ ಶ್ರೀ ಸೇರಾಜೆ ಸೀತಾರಾಮ ಭಟ್ ಮತ್ತು ಕೆ. ನಿತ್ಯಾನಂದ ಕಾರಂತ ಪೊಳಲಿ–ಇವರ ವಿಶೇಷ ಸಹಕಾರಕ್ಕೆ ನಾವು ಋಣಿಗಳು.

ಕಲಾಪೂರ್ಣವಾದ ರಕ್ಷಾಕವಚವನ್ನು ರಚಿಸಿದ ಕವಿ, ಕಲಾವಿದ, ಪರಿಸರ ಚಳವಳಿಗಾರ, ಮಿತ್ರ ದಿನೇಶ ಹೊಳ್ಳರು ಗ್ರಂಥವನ್ನು ಬೆಳಗಿಸಿದ್ದಾರೆ. ಅವರಿಗೆ ಧನ್ಯವಾದಗಳು.

ಗ್ರಂಥದ ಮುದ್ರಣ ವಿನ್ಯಾಸಗಳನ್ನು ಗೈದಿರುವವರು, ಮುದ್ರಣ ಕ್ಷೇತ್ರದಲ್ಲಿ ಕಲಾತ್ಮಕತೆಗೆ ಹೆಸರಾದ ಮುದ್ರಣ ಕಲಾವಿದ ಶ್ರೀ ಕಲ್ಲೂರು ನಾಗೇಶ ಅವರು. ಅವರಿಗೂ, ಅವರ ಬಳಗಕ್ಕೂ ನಮ್ಮ ವಂದನೆಗಳು.

ಗ್ರಂಥದಲ್ಲಿ ಉಳಿದಿರುವ ಅರೆಕೊರೆಗಳಿಗೆ ಕ್ಷಮೆಕೋರುತ್ತ, ಭೀಮ ಕಲಾವಿದನ ಭೀಮಸ್ಮೃತಿ ಕಲಾಕ್ಷೇತ್ರಕ್ಕೆ ಸದಾ ಸ್ಫೂರ್ತಿ ನೀಡುತ್ತಿರಲೆಂದು ಹಾರೈಸುತ್ತೇವೆ.

ಮಂಗಳೂರು

**ಡಾ. ಎಂ. ಪ್ರಭಾಕರ ಜೋಶಿ**
**ಹಿರಣ್ಯ ವೆಂಕಟೇಶ್ವರ ಭಟ್ಟ**

# ಸಂಪದ ಸಂಪನ್ನವಾಯಿತು

ಯಕ್ಷಗಾನ ಹಿಮ್ಮೇಳ ವಾದನದಲ್ಲಿ ಓರ್ವ ಶ್ರೇಷ್ಠ ಕಲಾವಿದರಾಗಿ ಇತಿಹಾಸ ನಿರ್ಮಿಸಿದ ಶ್ರೀ ದಿವಾಣ ಭೀಮ ಭಟ್ಟರ ಜನ್ಮ ಶತಮಾನೋತ್ಸವದಲ್ಲಿ ಪಾಲ್ಗೊಂಡು, ಸರಣಿ ಕಾರ್ಯಕ್ರಮಗಳನ್ನು ನಡೆಸಿ, ಇದೀಗ ಈ ಗ್ರಂಥದ ಲೋಕಾರ್ಪಣೆಯ ಮೂಲಕ, ಈ ಶತಮಾನೋತ್ಸವ ಸಮಾರೋಪ – ಈ ಕಾರ್ಯಕ್ರಮಗಳನ್ನು ಆಯೋಜಿಸಿ ಆ ಮಹಾನ್ ಕಲಾವಿದನ ಸ್ಮೃತಿಗೆ ಗೌರವ ಸಲ್ಲಿಸುವ ಸಂದರ್ಭವು ನಮಗೆ ದೊರೆತ ಹೆಮ್ಮೆಯ ಅವಕಾಶ.

ಈ ಕಾರ್ಯಕ್ರಮದ ವಿವಿಧ ಹಂತಗಳಲ್ಲಿ ಸಹಕರಿಸಿದ ಭೀಮಭಟ್ಟರ ಅಭಿಮಾನಿಗಳಿಗೆ, ಬಂಧುಗಳಿಗೆ, ಕಲಾವಿದರು, ಕಲಾ ಸಂಘಟನೆಗಳಿಗೆ ಸಮಿತಿಯು ಕೃತಜ್ಞವಾಗಿದೆ.

ಈ ಸ್ಮೃತಿ ಸಂಚಯ ಗ್ರಂಥದ ಸಂಪಾದಕರಿಗೆ ಈ ಸತ್ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ ಶ್ರೀ ಡಾ.ಎಂ. ಪ್ರಭಾಕರ ಜೋಶಿ ಮತ್ತು ಹಿರಣ್ಯ ವೆಂಕಟೇಶ್ವರ ಭಟ್ಟ ಇವರಿಗೆ ನಮ್ಮ ವಿಶೇಷ ಧನ್ಯವಾದಗಳು.

ಗ್ರಂಥದ ಮುದ್ರಣಕಾರ್ಯವನ್ನು ಸೊಗಸಾಗಿ ನಿರ್ವಹಿಸಿದ ಆಕೃತಿ ಪ್ರಿಂಟ್ಸ್‌ನ ಶ್ರೀ ಕಲ್ಲೂರು ನಾಗೇಶ ಮತ್ತು ಬಳಗಕ್ಕೆ ನಾವು ಋಣಿಗಳು.

ಶತಮಾನೋತ್ಸವ ಸರಣಿ ಮತ್ತು ಸಮಾರೋಪ ಸಮಾರಂಭಗಳಲ್ಲಿ ಪ್ರತ್ಯಕ್ಷ ಪರೋಕ್ಷ ಸಹಕಾರವಿತ್ತ ಸಕಲರಿಗೆ ವಂದನೆಗಳು.

**ಬಿ. ರಮಾನಾಥ ರೈ**
ಗೌರವಾಧ್ಯಕ್ಷರು

**ಎಸ್. ಪ್ರದೀಪ ಕುಮಾರ್ ಕಲ್ಕೂರ**
ಅಧ್ಯಕ್ಷರು

**ದಿವಾಣ ಗೋವಿಂದ ಭಟ್**
ಕಾರ್ಯದರ್ಶಿ

**ಸರ್ವ ಸದಸ್ಯರು**
ದಿವಾಣ ಭೀಮ ಭಟ್ಟ ಜನ್ಮ ಶತಮಾನೋತ್ಸವ ಸಮಿತಿ

# ದಿವಾಣ ಹೂರಣ

ಭಾಗ III



ಅನುಬಂಧ

# ಭಾಗ ೧

ದಿವಾಣ ಭೀಮ ಭಟ್ಟರು ಸಜ್ಜನ, ಸರಳ,
ನಿಷ್ಕಪಟ ಹೃದಯಿ, ಆತ್ಮಾಭಿಮಾನಿ,
ಸ್ನೇಹಜೀವಿ.
ಯಕ್ಷಗಾನದ ಕುರಿತು, ವಾದನದ ಕುರಿತು
ನಿತ್ಯಚಿಂತಕ. ವಾದನವನ್ನು, ರಂಗವನ್ನು
ಹೇಗೆ ಇನ್ನಷ್ಟು ಬೆಳೆಸಬಹುದೆಂಬುದರ
ಕುರಿತು ಸದಾ ಯೋಚನೆ ಮತ್ತು
ಪ್ರಯೋಗಗಳಲ್ಲಿ ನಿರತರು. ಅವರೊಂದಿಗೆ
ಯಕ್ಷಗಾನ ಶಿಕ್ಷಕನಾಗಿ
(ಕಟೀಲು, ಕಿನ್ನಿಗೋಳಿ, ಸುರತ್ಕಲ್ಲುಗಳಲ್ಲಿ
ಹಾಗೂ ಹಲವು ಕಮ್ಮಟಗಳಲ್ಲಿ)
ನಾನು ಬಹಳ ಸಂತೋಷಪಟ್ಟಿದ್ದೇನೆ.
ಕಲಿತಿದ್ದೇನೆ ಕೂಡ.
ಪ್ರದರ್ಶನದ ರಸಾಸ್ವಾದನೆಯಲ್ಲೂ
ಅವರು ಓರ್ವ ಆದರ್ಶ
ಸಹಕಲಾವಿದರಾಗಿದ್ದವರು.

ದಿ। ವಿದ್ವಾನ್ ಮಂದಾರ ಕೇಶವ ಭಟ್ಟರು
ಮಂಗಳೂರಿನಲ್ಲಿ ಭಾಷಣವೊಂದರಲ್ಲಿ.
(ಮಂದಾರರು ಭಾಗವತ, ಅರ್ಥಧಾರಿ,
ತುಳು ಮಹಾಕವಿ, ಕನ್ನಡ ಶಿಕ್ಷಕರು,
ದಿವಾಣರೊಂದಿಗೆ ಹಲವೆಡೆ
ಹಿಮ್ಮೇಳ ಪಾಠ ಮಾಡಿದ್ದರು)



# ದಿವಾಣ ಭೀಮ ಭಟ್ಟರು

**ಪು. ಶ್ರೀನಿವಾಸ ಭಟ್ಟ**
ಲೇಖಕ, ಸಂಶೋಧಕ
'ಪಂಚವಟಿ', ಕಟೀಲು

**ಮರಳಿ ಕರೆಯಿತು ಕಲೆ**

ಯಕ್ಷಗಾನ ಕಲಾಸಕ್ತರಿಗೆಲ್ಲರಿಗೂ, ದಿವಾಣ ಭೀಮ ಭಟ್ಟರು ಚಿರಪರಿಚಿತರು. ಚೆಂಡೆವಾದಕರಲ್ಲಿ ಅವರೂ ಒಬ್ಬರು. ಅವರ ವಾದನವನ್ನಾಲಿಸುವುದೆಂದರೆ ಅದೊಂದು ಉತ್ತಮ ರಸನಿಮಿಷ. ಹಿಮ್ಮೇಳವಾದಕರು ಕ್ರಮವತ್ತಾಗಿದ್ದರೆ ಮಾತ್ರ ರಂಗಭೂಮಿಯ ನಟರ ಕೆಲಸ ಉತ್ಸಾಹಪೂರಿತವಾಗುವುದು. ನಟರನ್ನು ಬೆಳಗಿಸುವುದರಲ್ಲಿ ಹಿಮ್ಮೇಳವಾದಕರ ಕೈವಾಡವೂ ಅಡಕವಾಗಿದೆ. ಸಾಮಾನ್ಯ ಕಲಾವಿದರಿಂದೊಡಗೂಡಿದ ಪ್ರದರ್ಶನವನ್ನಾದರೂ ಭಾಗವತರು ಮತ್ತು ವಾದಕರ ಜಾಣ್ಮೆಯಿಂದ ಜಯಭೇರಿ ಮೊಳಗಿಸುವಂತೆ ಮಾಡಿದ ಪ್ರಸಂಗಗಳು ಹಲವಾರು. ನಮ್ಮ ಭೀಮ ಭಟ್ಟರು ಕೆಲಕಾಲ ಕಲಾಸೇವೆ ನಡೆಸಿ, ಬಳಿಕ ಕಾರಣಾಂತರಗಳಿಂದ ಅದನ್ನು ಬಿಟ್ಟು ಮನೆಯಲ್ಲೇ ಇದ್ದರು. ಆದರೆ ಅವರ ಜೊತೆಯಲ್ಲಿ ಅಭ್ಯಾಸ ಮಾಡುತ್ತಿದ್ದ ಕೆಲವರು ಆಗ ಸರಿಯಾಗಿ ಮದ್ದಳೆಯಲ್ಲಿ ಛಾಪು ಹಾಕಲಿಕ್ಕೂ ಪ್ರಯಾಸ ಪಡುತ್ತಿದ್ದು, ಅವ್ಯಾಹತ ಅಭ್ಯಾಸಬಲದಿಂದ ಚೆಂಡೆ, ಮದ್ದಳೆವಾದಕರೆಂದು ಖ್ಯಾತರಾದುದನ್ನು ಕಂಡು, ತಾನು ಕಲಾ ಸೇವೆಯನ್ನು ಬಿಡಬಾರದಿತ್ತು ಎಂಬ ಭಾವನೆ ಒಡಮೂಡಿತ್ತು. ಮೃದಂಗ ವಾದನದಲ್ಲಿ ಈಗ ಸಾಕಷ್ಟು ಪರಿಣತರಾಗಿರುವವರಾದರೂ, ಅವರ ಒಲವು ಚೆಂಡೆ ಬಾರಿಸುವ ಕಡೆಗೆ ವಿಶೇಷವಾಗಿತ್ತು. ತನ್ನ ಮನಸ್ಸಿನಲ್ಲಿ ಉದ್ಭವಿಸಿದ ಭಾವನೆಯನ್ನು ಕಾರ್ಯಗತಗೊಳಿಸಬೇಕೆಂಬ ಹಟವೂ ಆರಂಭವಾಯಿತು. ತಾನು ಮೊದಲು ಕಲಿತು, ಮರೆತುದನ್ನು ನೆನಪಿಗೆ ತಂದುಕೊಂಡು, ಚೆಂಡೆ ವಾದನದ ಅಭ್ಯಾಸವನ್ನು ಆರಂಭಿಸಿಯೇ ಬಿಟ್ಟರು. ಅವರ ಪರಿಶ್ರಮವು

ತಕ್ಕುದಾದ ಫಲವನ್ನು ಕೊಟ್ಟಿತು. ಕಲಾದೇವಿ ಅವರಿಗೆ ಪೂರ್ಣವಾಗಿ ಒಲಿದಳು. ಚೆಂಡೆವಾದನದಲ್ಲಿ ಅವರು ಸಿದ್ಧಹಸ್ತರಾದರು. ಈ ವಿಚಾರವನ್ನು ತಿಳಿದ ದಿವಂಗತ ಕೆ. ಕೊರಗ ಶೆಟ್ಟರು ಅವರನ್ನು ತನ್ನ ಇರಾ ಶ್ರೀ ಸೋಮನಾಥೇಶ್ವರ ಯಕ್ಷಗಾನ ಮಂಡಳಿಗೆ ಕರೆದೊಯ್ದರು. ಹೀಗೆ ಭಟ್ಟರು ಮತ್ತೊಮ್ಮೆ ಕಲಾ ಪ್ರಪಂಚಕ್ಕೆ ಕಾಲಿಟ್ಟು, ಕಲಾ ಪ್ರಿಯರಿಗೆ ಸಂತಸವನ್ನೀಯುತ್ತಿದ್ದರು.

## ಹಾಡು ಕಲಿತು – ಚೆಂಡೆ ಬಾರಿಸಿದರು

ಅವರಿಗೆ ಸಾಧಾರಣ 14–15 ವರ್ಷ ಪ್ರಾಯವಾದಾಗಲೇ ತಂದೆ ತಾಯಿ ತೀರಿಹೋದರು. ತಂದೆಯ ಹೆಸರು ಅಣ್ಣಪ್ಪ ಯಾನೆ ಶಂಕರ ಭಟ್ಟ, ತಾಯಿ ದ್ರೌಪದಿಯಮ್ಮ. ತಂದೆಯ ತಂದೆ ಆ ಕಾಲದಲ್ಲಿ ಒಳ್ಳೆಯ ವಾಗ್ಮಿಯಾಗಿ ಯಕ್ಷಗಾನ ಕೂಟಗಳಲ್ಲಿ ಭಾಗವಹಿಸಿ ಕೀರ್ತಿ ಪಡೆದಿದ್ದರು. ಚಿಕ್ಕ ತಂದೆ ಚೆಂಡೆ ಬಾರಿಸುವುದರಲ್ಲಿ ಪಳಗಿದ್ದರು. ಈ ಪರಿಸರದ ಪ್ರಭಾವದಿಂದ ನಮ್ಮ ಭಟ್ಟರಿಗೂ ಯಕ್ಷಗಾನ ಕಲೆಯ ಮೇಲೆ ಅಭಿಮಾನ ಅಂಕುರಿಸಿತ್ತು. ಯಕ್ಷಗಾನ ಕಲೆಯಿಂದ ಆಕರ್ಷಿತರಾದವರನ್ನು ಮತ್ತೆ ಅದು ಕೈಬಿಡುವುದಿಲ್ಲ. ಅದೊಂದು ರೀತಿಯ ಚಟದಿಂದ ಬೆನ್ನು ಹಿಡಿಯುತ್ತದೆ. ಯಾಕೆಂದರೆ ಅದರಿಂದ ಒಂದು ರೀತಿಯ ಆತ್ಮಾನಂದವೂ ಇದೆ. ನಮ್ಮ ವೈಯಕ್ತಿಕ ಜಂಜಾಟಗಳನ್ನು ಮರೆಸಿ, ಮನಸ್ಸನ್ನು ಪ್ರಶಾಂತ ವಾಗಿರಿಸಲು ಯಕ್ಷಗಾನಾದಿ ಲಲಿತ ಕಲೆಗಳು ಪ್ರಧಾನ ಪಾತ್ರವನ್ನು ವಹಿಸುತ್ತವೆ. ಹೀಗೆ ಕಲಾ ಪ್ರಪಂಚಕ್ಕೆ ಪಾದಾರ್ಪಣ ಮಾಡಲು ಮನ ಮಾಡಿದ ಭಟ್ಟರು ತನ್ನ ಕುಟುಂಬದವರಾದ ಶ್ರೀಕೃಷ್ಣ ಭಟ್ಟರೆಂಬವರಲ್ಲಿ ಹಾಡುಗಾರಿಕೆಯ ಅಭ್ಯಾಸವನ್ನು ಮೊದಲು ಮಾಡಿದರು. ಕೆಲವು ಸಮಯದ ವರೆಗೆ ನಿರಂತರ ಅಭ್ಯಾಸವೂ ಸಾಗಿತು. ಅದೇ ಅಭ್ಯಾಸ ನಿರಂತರ ಸಾಗುತ್ತಿದ್ದರೆ ನಮ್ಮ ಭಟ್ಟರು ಉತ್ತಮ ಭಾಗವತರೆಂದು ಖ್ಯಾತಿಗೆ ಬರುತ್ತಿದ್ದರೋ ಏನೋ? ಆದರೆ ಅವರು ಚೆಂಡೆವಾದಕರಾಗಿಯೇ ಪ್ರಕಾಶಕ್ಕೆ ಬರಬೇಕೆಂದು ಕಲಾಮಾತೆಯ ಆಶಯ ವಿರಲು ಅದನ್ನು ತಪ್ಪಿಸಲು ಸಾಧ್ಯವೇ? ಅವರ ಅಭ್ಯಾಸದ ಈ ಅವಧಿಯಲ್ಲಿ ಒಮ್ಮೆ ವಿಪರೀತ ಜ್ವರಬಂದು, ಸುಶ್ರಾವ್ಯವಾದ ಕಂಠಶ್ರೀಯು ಮರೆಯಾಯಿತು. ಹೀಗೆ ಭಟ್ಟರು ಭಾಗವತರಾಗುವ ಹಂಬಲವನ್ನು ಬಿಟ್ಟುಬಿಡಬೇಕಾಯಿತು. ಆ ತಕ್ಷಣವೇ ಅವರು ಆ ಗುರುವಿನಿಂದಲೇ ಮೃದಂಗ ಬಾರಿಸಲು ಕಲಿಯಲಾರಂಭಿಸಿದರು. ಶ್ರದ್ಧಾಪೂರ್ವಕವಾದ ಕಲಿಯುವಿಕೆಯಿಂದಲೂ, ಮೊದಲೇ ತಾಳ ಜ್ಞಾನವಿದ್ದುದರಿಂದಲೂ ಕೇವಲ ಒಂದು ತಿಂಗಳಲ್ಲಿ ಸಾಧಾರಣ ಮದ್ದಳೆ ಬಾರಿಸಲು ಕಲಿತು, ಯಕ್ಷಗಾನ ಕೂಟಗಳಲ್ಲಿ ಭಾಗವಹಿಸಲಾರಂಭಿಸಿದರು. ಹೀಗೆ ಭಾಗವತರಾಗಲು ಹೊರಟ ಭಟ್ಟರು ಮೃದಂಗವಾದಕ ರಾಗಿ, ತಾನು ಬಯಸಿದ ಕಲಾ ಸೇವೆಯ ಗುರಿಯನ್ನು ತಲುಪುವಲ್ಲಿ ಯಶಸ್ವಿಯಾದರು.

## ಬಲಿಪರಲ್ಲಿ ಪಳಗಿದ ಕಲಿ

ಅದು ಯಕ್ಷಗಾನಕ್ಕೆ ಪ್ರತಿ ವಿಶ್ವಾಮಿತ್ರನಂತಿದ್ದ ದಿ। ಬಲಿಪ ಭಾಗವತರು ಪ್ರಖ್ಯಾತರಾಗಿ ಮೆರೆಯುತ್ತಿದ್ದ ಕಾಲ. ಆಗ ವಿಟ್ಲದ ಪೇಟೆಯ ಶ್ರೀ ಪುರಂದರ ಕೆದ್ಲಾಯರಲ್ಲಿ ಯಕ್ಷಗಾನ ಕೂಟಗಳು ಜರಗುತ್ತಿದ್ದುವು. ಒಮ್ಮೆ ಬಲಿಪ ಭಾಗವತರು ಹಾಡುತ್ತಿದ್ದಾಗ ಕಾರಣಾಂತರ

ಗಳಿಂದ ಸ್ವಲ್ಪ ಹೊತ್ತು ನಮ್ಮ ಭಟ್ಟರಿಗೆ ಮದ್ದಳೆ ಬಾರಿಸುವ ಅವಕಾಶ ಲಭಿಸಿತು. ಇವರ ಉತ್ಸಾಹ ಮತ್ತು ಅಲ್ಪಾವಧಿಯಲ್ಲಿ ಗಳಿಸಿಕೊಂಡ ಅನುಭವದಿಂದ ಪ್ರಭಾವಿತರಾದ ಭಾಗವತರು ಸಂತೋಷಗೊಂಡರು. ಇವರನ್ನು ತನ್ನ ಗರಡಿಯಲ್ಲಿ ಪಳಗಿಸಿ, ಕಲಾದೇವಿಯ ಸೇವೆಗೆ ಅನುವು ಮಾಡಬೇಕೆಂದು ಬಗೆದರು. ಮರುವರ್ಷ ಕದ್ರಿ ಮೇಳಕ್ಕೆ ಒತ್ತು ಮದ್ದಳೆಗೆ ಕರೆದೊಯ್ದರು. ಮುಂದೆ ತನ್ನ ಜೊತೆಗೆನೇ ಯಕ್ಷಗಾನ ಕಲಾ ಸಂಪ್ರೀತೆಯಾದ ಕಟೀಲು ಶ್ರೀ ದುರ್ಗಾ ಪರಮೇಶ್ವರೀ ಮೇಳಕ್ಕೆ ಕರೆದುಕೊಂಡು ಬಂದರು. 5 ವರ್ಷ ಬಲಿಪರ ಸಂಪರ್ಕದಲ್ಲಿಯೇ ಕಟೀಲು ಮೇಳದಲ್ಲಿ ತಿರುಗಾಟ ಮಾಡಿದರು. ಬಲಿಪರ ಕೈಕೆಳಗೆ ಪಳಗಿದ ಕಲಾವಿದನಲ್ಲಿ ಮತ್ತೆ ಕೆತ್ತಲು ಮೆತ್ತಲು ಏನೂ ಇಲ್ಲ. ಬಲಿಪ ಭಾಗವತರೆಂದರೆ ಯಕ್ಷಗಾನದ ಬಗ್ಗೆ ಅಧಿಕಾರವಾಣಿಯಿಂದ ನುಡಿಯತಕ್ಕವರಾಗಿದ್ದರು. ಭಟ್ಟರ ವಾದನ ಚಾತುರ್ಯವು ಬೆಳೆಯಿತು. ಮುಂದೆ ತನ್ನ ವೈಯಕ್ತಿಕ ಕಾರಣಗಳಿಂದ 15 ವರ್ಷ ಕಾಲ ಕಲಾ ಪ್ರಪಂಚದಿಂದ ದೂರ ಉಳಿದರೂ ಕಲೆಯ ಕರೆ ಮರಳಿ ಬಂದುದರಿಂದ ಅವರು ಮತ್ತೊಮ್ಮೆ ರಂಗಪ್ರವೇಶ ಮಾಡಿದರು. ಮೂಲ್ಕಿ, ಕೂಡ್ಲು, ಇರಾ ಈ ಮೇಳಗಳಲ್ಲಿ ಹಲವು ತಿರುಗಾಟಗಳನ್ನು ಮಾಡಿ, ಕೆಲವು ಜೋಡಾಟಗಳಲ್ಲಿ ಭಾಗವಹಿಸಿರುವರು. ಬಲಿಪರಲ್ಲಿ ತರಬೇತಿ ಹೊಂದಿದ ವ್ಯಕ್ತಿಯಾದುದರಿಂದ ಶಾಸ್ತ್ರೀಯವಾದ ವಾದನಗಾಂಭೀರ್ಯವನ್ನು ನಾವಿಂದು ಅವರಿಂದ ಆಲಿಸಬಹುದಾಗಿದೆ. ಚೆಂಡೆ ಬಾರಿಸುವುದರಲ್ಲಿ ಮಾತ್ರವಲ್ಲದೆ, ಮೃದಂಗದಲ್ಲೂ ತನ್ನ ಕೈಚಳಕ ತೋರಿಸಬಲ್ಲರು. ಈ ಕಾಲದ ಉತ್ತಮ ಮತ್ತು ಹಿರಿಯ ಭಾಗವತರಾದ ಅಗರಿ ಶ್ರೀನಿವಾಸ ಭಾಗವತರೊಂದಿಗೆ ಅವರು ಕೂಡಿದರೆ ಅದೊಂದು ರಸದೂಟ. ದಿ। ಬಲಿಪ ಭಾಗವತರ ಬಳಿಕ ಭಾಗವತರೆಂಬ ಬಿರುದಿಗೆ ಅಗರಿಯವರೇ ಸಲ್ಲುವರೆಂದು ಅವರ ಬಿಚ್ಚು ಮನಸ್ಸಿನ ಅಭಿಪ್ರಾಯ.

**ಸರಳ ನಿರಾಡಂಬರ ವ್ಯಕ್ತಿತ್ವ**

ಇಂತಹ ಘನ ವ್ಯಕ್ತಿತ್ವವುಳ್ಳ ಭಟ್ಟರು ನಿರಾಡಂಬರ ವ್ಯಕ್ತಿಯಾಗಿರುವರು. ಮಾತಾಡಿಸಿದವರಲ್ಲಿ ಸಂತೋಷದಿಂದ ಸಂಭಾಷಿಸುವರು. ಕಟೀಲು ಶ್ರೀ ದುರ್ಗಾ ಪರಮೇಶ್ವರಿಯ ಅನನ್ಯ ಭಕ್ತರಿದ್ದು ಶ್ರೀ ಕೃಷ್ಣಾಷ್ಟಮಿಯ ಮರುದಿನದ ಆಟಕ್ಕೆ ತಪ್ಪದೆ ಬರುತ್ತಿರುವರು. ಅವರ ಜೀವನ ವಿಚಾರಗಳನ್ನು ತಿಳಿಯಲು ಅವರೊಡನೆ ಮಾತಾಡಿದಾಗ ನಮ್ಮ ಯೋಜನೆಯ ಬಗ್ಗೆ ಸಂತಸವನ್ನು ವ್ಯಕ್ತಪಡಿಸಿ ಬೇಕಾದ ಸಂಗತಿಗಳನ್ನು ವಿವರವಾಗಿ ತಿಳಿಸಿರುವರು. ಯಕ್ಷಗಾನದಲ್ಲಿ ಅವರಿಗೆ ಅಪಾರವಾದ ಮಮತೆಯಿದೆ. ಯಕ್ಷಗಾನ ಕಲಾವಿದರಲ್ಲಿ ಶ್ರೀ ಕದ್ರಿ ವಿಷ್ಣು, ಅಳಿಕೆ ರಾಮಯ್ಯ ರೈ ಇವರೆಲ್ಲರನ್ನೂ ಬಹಳವಾಗಿ ಮೆಚ್ಚುವರು ಶ್ರೀ ದೇವಿ, ಕೈಕೆ, ಅಂಬೆ ಈ ಪಾತ್ರಗಳನ್ನು ವಹಿಸುವುದರಲ್ಲಿ ಶ್ರೀ ಕೆ. ಪುರುಷೋತ್ತಮ ಭಟ್ಟರೂ, ಅಶೋಕವನದ ಸೀತೆ, ಕುಶಲವರ ಕಾಳಗದ ಸೀತೆ, ದೇವಕಿ ಈ ಪಾತ್ರಗಳನ್ನು ವಹಿಸುವುದರಲ್ಲಿ ಕರ್ಗಲ್ಲು ಸುಬ್ಬಣ್ಣ ಭಟ್ಟರೂ ಸಮರ್ಥರಿದ್ದರೆಂದೂ ಅವರದೊಂದು ಅಭಿಪ್ರಾಯ. ಉಳಿದವರು ಕಡಿಮೆಯೆಂದಲ್ಲ. ಕಲಾವಿದನಲ್ಲಿ ಒಡಮೂಡುವ ಭಾವನೆಯು ಪ್ರೇಕ್ಷಕರಲ್ಲಿ ಪರಿಣಾಮವನ್ನೆಬ್ಬಿಸಬೇಕು. ನಟನು ತನ್ಮಯನಾದರೆ ಸಾಲದೆಂದು ಅವರ ಸೂಚನೆ. ಹಿರಿಯ ಭಾಗವತರುಗಳ ಜೊತೆಯಲ್ಲಿ ಅನುಭವ ಗಳಿಸಿದ ಭಟ್ಟರ ಹಿರಿಯ

ಮಗನು ಚೆಂಡೆ ವಾದನದಲ್ಲಿ ಸಾಕಷ್ಟು ಪರಿಣತ. ಒಂದು ಸಂದರ್ಭದಲ್ಲಿ ಶ್ರೀ ಮದ್ರಾಮಚಂದ್ರಾಪುರ ಮಠದ ಶ್ರೀಗಳವರು ಮಜಿ ಛತ್ರಕ್ಕೆ ಚಿತ್ತೈಸಿದಾಗ ಕಟೀಲು ಶ್ರೀ ದುರ್ಗಾಪರಮೇಶ್ವರೀ ಶಾಲಾ ಬಾಲಕರಿಂದ ಯಕ್ಷಗಾನ ಬಯಲಾಟವು ಜರಗಿಸಲ್ಪಟ್ಟಿತ್ತು. ಅಲ್ಲಿಗೆ ಬಂದಿದ್ದ ಭಟ್ಟರ ಪುತ್ರ ಶಂಕರ ಭಟ್ಟರು ಶ್ರೀ ದೇವಿಯ ಸೇವಾಸಕ್ತಿಯಿಂದ ಚೆಂಡೆ ಬಾರಿಸಿ ಸರ್ವರಿಂದಲೂ ಸೈ ಸೈ ಎನ್ನಿಸಿದ್ದರು. ದಿವಾಣ ಭೀಮ ಭಟ್ಟರು ಒಬ್ಬ ಸಮರ್ಥ ಹಿಮ್ಮೇಳ ವಾದಕ.

(ಲೇಖಕರು ಈಗ ದಿವಂಗತರು. ಅವರು ಬರೆದ ಯಕ್ಷಗಾನ ಕಲಾವಿದರು, ಯುಗಪುರುಷ ಪ್ರಕಟಣೆ, ಭಾಗ–೧ರಲ್ಲಿರುವ ಲೇಖನ)



# ಚೆಂಡೆ ಪ್ರಚಂಡ
# ದಿವಾಣ ಭೀಮ ಭಟ್ಟರು

**ಎಂ. ಪ್ರಭಾಕರ ಜೋಶಿ**
'ಹರಿಭಕ್ತಿ'
ಪಿಂಟೋ ಲೇನ್, ಕದ್ರಿಕಂಬಳ
ಮಂಗಳೂರು – 575 004

ತಮ್ಮ ವಿಶಿಷ್ಟ ವಾದನ ಶೈಲಿಯಿಂದಲೂ, ಗಟ್ಟಿಯಾದ ಅನುಭವದಿಂದಲೂ, ಶ್ರೀ ದಿವಾಣ ಭೀಮ ಭಟ್ಟರು ಓರ್ವ ಮಹತ್ತ್ವದ ಕಲಾವಿದ. ಸುಮಾರು ನಾಲ್ಕು ದಶಕಗಳ ಕಾಲ ಅಗ್ರಪಂಕ್ತಿಯ ಚೆಂಡೆ ಮದ್ದಳೆ ವಾದಕರಾಗಿ ಭೀಮ ಭಟ್ಟರು ತೆಂಕುತಿಟ್ಟಿನ ಚೆಂಡೆ ಮದ್ದಳೆಗಳ ಶೈಲಿಯ ಸೊಗಸು ಗಾಂಭೀರ್ಯಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ್ದಾರೆ. ಮಾತ್ರವಲ್ಲ ಶ್ರೀಮಂತಗೊಳಿಸಿದ್ದಾರೆ.

ಹಲವರಂತೆ, ಭೀಮ ಭಟ್ಟರಿಗೂ ಯಕ್ಷಗಾನದ ಗೀಳು ಮನೆಯಲ್ಲೆ ಅಂಟಿದ್ದು. ಯಕ್ಷಗಾನದ ಅಭಿರುಚಿ ತೀವ್ರವಾಗಿ ಇರುವ ಹವ್ಯಕ ಸಮಾಜದಲ್ಲಿ ಭೀಮ ಭಟ್ಟರು ಬಾಲ್ಯದಲ್ಲೆ ಅದರ 'ಹುಚ್ಚು' ಅಂಟಿಸಿಕೊಂಡದ್ದು ವಿಶೇಷವೇನಲ್ಲ. ಇವರ ಚಿಕ್ಕಪ್ಪ ಕೇಶವ ಭಟ್ಟರು ಮದ್ದಳೆಗಾರರಾಗಿದ್ದವರು. ಅಜ್ಜ ದಿವಾಣ ಕೃಷ್ಣ ಭಟ್ಟರು ಭೀಮ ಭಟ್ಟರ ಗುರು. ಕೃಷ್ಣ ಭಟ್ಟರು ಭಾಗವತರೂ, ಅರ್ಥದಾರಿಯೂ ಆಗಿದ್ದವರು.

ಭೀಮ ಭಟ್ಟರು ಅಜ್ಜನಿಂದ ಮೊದಲು ಕಲಿತದ್ದು ಭಾಗವತಿಕೆ, ಅರ್ಥಗಾರಿಕೆ. ಆ ಮೇಲೆ ಮದ್ದಳೆ, ನಂತರ ತಾನಾಗಿ ಕಲಿತದ್ದು ಚೆಂಡೆ. ಹಿರಿಯ ತಲೆಮಾರಿನ ಅನೇಕರಂತೆ, ದಿವಾಣರು ದಿವಂಗತ ಬಲಿಪ ಭಾಗವತರನ್ನು 'ಗುರು'ಗಳೆಂದು ಪೂಜ್ಯಭಾವದಿಂದ ಸ್ಮರಿಸುತ್ತಾರೆ. ಅವರಿಂದ ತನಗೆ ವಾದ್ಯವಾದನ, ರಂಗಪದ್ಧತಿಗಳ ಮರ್ಮವೂ, ಆಳವೂ ಅರಿವಿಗೆ ಬಂತು ಎನ್ನುತ್ತಾರೆ. ಚೆಂಡೆ ಮದ್ದಳೆಗಳಲ್ಲಿ ಸೀಮಾ ಪುರುಷರೆನಿಸಿದ್ದ ದಿವಂಗತ ಕುದ್ರೆಕೊಡ್ಲು ರಾಮ ಭಟ್ಟರ ಮತ್ತು ಇನ್ನೋರ್ವ ಹಿರಿಯ ಅನುಭವಿ ಕಲಾವಿದ ಶ್ರೀ ನೆಡ್ಲೆ ನರಸಿಂಹ ಭಟ್ಟರ ಸಹವಾಸದಲ್ಲಿ ತಾನು ಕಲಿತದ್ದು ಬಹಳ

ಇದೆ ಅನ್ನುತ್ತಾರವರು. ಶ್ರೀ ನೆಡ್ಲೆ ಅವರಂತೂ ಭೀಮ ಭಟ್ಟರ ಭಾವ. "ಭಾವನ ಚೆಂಡೆ ಮದ್ದಳೆ ಕೇಳಿದವರು, ನೋಡಿ ಕೇಳಿಯೇ ಬಹಳಷ್ಟು ಕಲಿಯಬಹುದು. ಅಂತಹ ಪ್ರಭಾವ ಅವರ ವಾದನಕ್ಕೆ ಇದೆ" ಅನ್ನುವ ಭಟ್ಟರು. ಎಲ್ಲ ಹಿರಿಯ, ಕಿರಿಯ ಕಲಾವಿದರಲ್ಲಿ ಏನಾದರೊಂದು ವೈಶಿಷ್ಟ್ಯ ಇದ್ದೇ ಇರುತ್ತದೆ. ಅವನ್ನು ಗ್ರಹಿಸುವ ಕಣ್ಣು, ಕಿವಿ ನಮಗೆ ಇರಬೇಕು ಅನ್ನುತ್ತಾರೆ.

ತೆಂಕಿನ ಪ್ರಮುಖ ಮೇಳಗಳಲ್ಲೆಲ್ಲ ಸಂಚಾರ ಮಾಡಿರುವ ದಿವಾಣರ ವಾದ್ಯವಾದನ ವೈಖರಿ ಬಹಳಷ್ಟು ಮೆರೆದದ್ದು ಹಿರಿಯ ಭಾಗವತ ಅಗರಿ ಅವರ ಜೊತೆಗಾರಿಕೆಯಲ್ಲಿ. ಅಗರಿ ಅವರ ಶೈಲಿಯನ್ನು ಭೀಮ ಭಟ್ಟರು ಕರಗತ ಮಾಡಿಕೊಂಡಂತೆ ಕಾಣುತ್ತದೆ.

ತೆಂಕುತಿಟ್ಟಿನ ಸಂಪ್ರದಾಯವನ್ನು ಚೆನ್ನಾಗಿ ಅಭ್ಯಸಿಸಿ, ಹಿರಿಯ ಕಲಾವಿದರ ಗುಣಾಂಶಗಳನ್ನು ಹೀರಿಕೊಂಡು ಬೆಳೆದರೂ ಭೀಮ ಭಟ್ಟರ ಶೈಲಿ ಯಾರ ಅನುಕರಣೆಯೂ ಅಲ್ಲ. ಅದರಲ್ಲಿ ಎದ್ದು ಕಾಣುವ ಸ್ವಂತಿಕೆ ಇದೆ. ಹಿಮ್ಮೇಳದಲ್ಲಿ ಪರಿಶ್ರಮ ಇಲ್ಲದ ಪ್ರೇಕ್ಷಕನಿಗೂ, ಅದರ ಸ್ವಾರಸ್ಯವನ್ನು ಅವರು ಮುಟ್ಟಿಸಬಲ್ಲರು. ಇಡಿಯ ಸಭಾ ವೃಂದವನ್ನು ಹಿಮ್ಮೇಳದತ್ತ ತೊಡಗಿಸಬಲ್ಲ ಚೆಂಡೆ ವಾದನದಲ್ಲಿ ಇವರಿಗೆ ಮೊದಲ ಸ್ಥಾನ ಸಲ್ಲಬೇಕು. ತಾವು ವಾದನದಲ್ಲಿ ಸಾಧಿಸಿರುವ ಮಗ್ನತೆಯನ್ನು ಕೇಳುಗನಿಗೆ ವರ್ಗಾಯಿಸುವ ಸಿದ್ಧಿ ಭೀಮ ಭಟ್ಟರಿಗಿದೆ.

ಭೀಮ ಭಟ್ಟರ ಶೈಲಿ ಅವರ ಹೆಸರಿನಂತೆ ಭೀಮವೇ. ಒಳ್ಳೆಯ ತ್ರಾಣದ, ಗಡುಸಾದ ಓಜಸ್ಸಿನ ಪೆಟ್ಟುಗಳು, ವೈವಿಧ್ಯ ಮತ್ತು ವಿನ್ಯಾಸದಲ್ಲಿ ಭೀಮ ಭಟ್ಟರ ಸಾಧನೆ ಅದ್ವಿತೀಯ ವಾದದ್ದು. ಒಂದೇ ತಾಳದಲ್ಲಿ ಅವರು ಸಾಧಿಸಿ ತೋರುವ ವೈವಿಧ್ಯಗಳು, ಚಮತ್ಕಾರಗಳೂ ಆಶ್ಚರ್ಯಕರವಾಗಿವೆ. ಪ್ರದರ್ಶನದ ಮೊದಲು ಬಾರಿಸುವ 'ಪೀಠಿಕೆ'ಯಲ್ಲಿ ಎಲ್ಲ ತಾಳಗಳ ನಡೆಗಳನ್ನು ಏಕತಾಳಕ್ಕೆ ಹೊಂದಿಸಿ ಬಾರಿಸಬೇಕಾದುದು ಅವಶ್ಯ ಎಂದು ಅವರ ಸಿದ್ಧಾಂತ. ಅದನ್ನವರು ಮಾಡಿ ತೋರಿಸಬಲ್ಲರು. ಯಕ್ಷಗಾನದಲ್ಲಿ ಭೀಮ ಭಟ್ಟರಿಗೆ "ವಿಷಮ ವೀರ"ರೆಂಬ ಖ್ಯಾತಿಯೇ ಇದೆ. ಈ ಖ್ಯಾತಿಗೆ ತಕ್ಕ ಅರ್ಹತೆ ಅವರಿಗೆ ಇದೆ. ಏಕೆಂದರೆ ಅವರು ವಿಷಮ ನಡೆಗಳನ್ನು, ಸಮಕ್ಕಿಂತ ಸಲೀಸಾಗಿ ಬಾರಿಸಬಲ್ಲವರು. ಒಂದೊಂದು ಸಲ ಇಡೀ ಪದ್ಯದ ದಸ್ತು ಮುಕ್ತಾಯ ಬಡಿತಗಳನ್ನೆಲ್ಲ ವಿಷಯದಲ್ಲೆ ಬಾರಿಸುವುದಿದೆ. ಅದು ಅವರಿಗೆ ಲೀಲಾಜಾಲ, ತಾಳದ ವಿಶಿಷ್ಟ ನುಡಿಕಾರಗಳನ್ನು ಖಂಡಖಂಡವಾಗಿ ಯಾ ಇಡಿಯಾಗಿ ಕೊನೆಯಿಂದ ಆರಂಭಕ್ಕೆ (ಉಪರಾಟ ಪೆಟ್ಟು) ಸಹ ಬಾರಿಸಬಲ್ಲ ತಾಕತ್ತು ಅವರದ್ದು. "ಚೆಂಡೆ ಮದ್ದಳೆಗಳಲ್ಲಿ ಇಷ್ಟೊಂದು ಕೆಲಸ ಮಾಡಲು ಸಾಧ್ಯ ಎಂದು ತೋರಿಸಿಕೊಟ್ಟದ್ದು ಅವರ ವೈಶಿಷ್ಟ್ಯ" ಎಂದು ಹಿರಿಯ ಮದ್ದಳೆಗಾರ ಹಿರಿಯಡ್ಕ ಗೋಪಾಲರಾಯರ ಅಭಿಪ್ರಾಯ. ವಿಷಮವಾದನಕ್ಕೆ ಬೇಕಾದ ಅದ್ಭುತ ಲಯ ಸಿದ್ಧಿ ಅವರ ಪ್ರಾವೀಣ್ಯದ ಮುಖ್ಯ ಅಂಶ. ಅದನ್ನಾಧರಿಸಿ ಅವರು ಬಹಳಷ್ಟು ಹೊಸ ನಡೆಗಳನ್ನು, ಬಿಡಿತ ಮುಕ್ತಾಯಗಳನ್ನು ತಯಾರಿಸಿದ್ದಾರೆ. ಆದರೆ ವಿಷಮ ವಾದನ ಪ್ರವೀಣನೆಂದಷ್ಟೆ ಅವರನ್ನು ಹೇಳಿದರೆ, ಅವರನ್ನು ಅರ್ಥ ಮಾಡಿಕೊಂಡಂತೆ ಆಗಲಿಲ್ಲ. ಸಮವಾಗಿ ಸರಳವಾದ ಬಾರಿಸುವಿಕೆಯಲ್ಲೂ ಯಕ್ಷಗಾನ ಶೈಲಿಯ ಸೊಗಸನ್ನು ಇಡಿಪೆಟ್ಟುಗಳ ಮೂಲಕ ಮತ್ತು ಸೊಗಸಾದ ಉರುಳಿಕೆಗಳ ಮೂಲಕ ಮದ್ದಳೆಯಲ್ಲೂ, ಚೆಂಡೆಯಲ್ಲೂ ತೋರಿಸಬಲ್ಲವರು ಭೀಮ ಭಟ್ಟರು. ಸದ್ಯ ದಕ್ಷಿಣಾದಿ ಮೃದಂಗದ ಹಾವಳಿಯಿಂದ

ಮಾಯವಾಗಿರುವ ಅನೇಕ ವಾದನ ಕ್ರಮಗಳನ್ನು ಭೀಮ ಭಟ್ಟರಲ್ಲಿ ನಾವು ಕಾಣಬಹುದು. "ವಿಷಮ ವಾದನ ನನ್ನಿಂದ ಹೆಚ್ಚು ಬೇರೆ ಕೆಲವರಲ್ಲಿದೆ. ಆದರೆ ವಿಷಮದವನೆಂದು ಕರೆಸಿಕೊಳ್ಳುವ ಯೋಗ ನನಗೆ ಅಷ್ಟೆ" ಎಂದು ಅವರು ವಿನೋದವಾಗಿ ಹೇಳುವುದಿದೆ.

ಮದ್ದಳೆ – ಚೆಂಡೆಗಳಲ್ಲಿ ಸೃಜನಶೀಲನೊಬ್ಬ ಕೆಲಸ ಮಾಡಿದಾಗ ಎಷ್ಟೊಂದು ಸೃಷ್ಟಿಯ ಸಾಧ್ಯತೆ ಇದೆ ಎಂಬುದನ್ನು ದಿವಾಣರು ತೋರಿಸಿಕೊಟ್ಟಿದ್ದಾರೆ. ಮಾಮೂಲಿ ಪೆಟ್ಟುಗಳಿಂದ 'ಸುಧಾರಿಸುತ್ತ' ಹೋಗುವ ಬದಲು ಸದಾ ಹೊಸ ರಚನೆಗಳ ಬಗೆಗೆ ಅವರ ಚಿಂತನ. ಇವರ ನಾವೀನ್ಯ ದೃಷ್ಟಿ ಮತ್ತು ವಿನ್ಯಾಸಗಳಿಂದ ರಂಗದಲ್ಲಿ ಭಾಗವತರಿಗೂ, ನರ್ತಕರಿಗೂ ತೊಂದರೆಯಾಗುವುದೂ, ಅದರಿಂದಾಗಿ ಕೆಲವೊಮ್ಮೆ ವಿರಸಗಳು ತಲೆದೋರಿದುದೂ ಉಂಟು. ಆದರೆ ಭೀಮ ಭಟ್ಟರ ವಿನ್ಯಾಸಗಳು ಪೈಪೋಟಿಗಾಗಿ ಅಲ್ಲ. ಅದು ಅವರ ಶೈಲಿಯ ಸ್ವಭಾವದಿಂದ ಬರುವಂತಹದು. ಜೋಡಾಟಕ್ಕಂತೂ ಭೀಮ ಭಟ್ಟರು ಹೇಳಿ ಮಾಡಿಸಿದ ಚೆಂಡೆಗಾರ. ದ್ವಂದ್ವ ಚೆಂಡೆ ವಾದನದ ವಿಶ್ವರೂಪ ದರ್ಶನವಾಗಬೇಕಾದರೆ ದಿವಾಣ–ಚಿಪ್ಪಾರು ಬಲ್ಲಾಳರ ದ್ವಂದ್ವವಾದನ ಕೇಳಬೇಕು. ಚೆಂಡೆ ವಾದನದಲ್ಲಿ ಸಂಗೀತದ ಗಾಂಭೀರ್ಯವನ್ನೂ, ಶಾಸ್ತ್ರೀಯ ಸಂಗೀತದ ವಾದ್ಯಗಳಂತೆ ವೈವಿಧ್ಯವನ್ನೂ ತಂದು, ಕಲೆಗೆ ಕೊಡುಗೆ ನೀಡಿದ ಇವರು "ಯಕ್ಷಗಾನದ ವಾದ್ಯಗಳ ವಾದನದಲ್ಲಿ ಆದಷ್ಟು ಸುಧಾರಣೆ, ಹೊಸ ರಚನೆ ಉಳಿದ ವಿಭಾಗಗಳಲ್ಲಿ ಆಗಿಲ್ಲ" ಅನ್ನುತ್ತಾರೆ.

ಭೀಮ ಭಟ್ಟರ ವಾದನದಲ್ಲಿ ಇರುವ ಗಡಸು ಮತ್ತು ವಿಷಮಗಳೇ ಅವರ ಗುಣವೂ ಹೌದು, ದೋಷವೂ ಅದೇ. ಸ್ವತಃ ಒಳ್ಳೆಯ ರಸಜ್ಞರಾದರೂ ಬಾರಿಸುವಾಗ ಅವರ ಲಕ್ಷ್ಯ ನಾದ ಮತ್ತು ಜಾಣ್ಮೆಯ ಕಡೆಗೇ ಹೆಚ್ಚು. ನಾಜೂಕಿನ ಕಡೆಗೆ ಕಡಿಮೆ. "ಚಿಪ್ಪಾರು ಬಲ್ಲಾಳರ ನಾಜೂಕಾಗಲಿ, ನರಸಿಂಹ ಭಟ್ಟರ ಮಾರ್ದವವಾಗಲಿ ನನ್ನ ಬಾರಿಸುವಿಕೆಯಲ್ಲಿ ಇಲ್ಲ" ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ಅವರು, ಅದೇ ನನ್ನ ವೈಶಿಷ್ಟ್ಯ ಎನ್ನುತ್ತಾರೆ.

ಅವರ ಶೈಲಿಯಲ್ಲಿ ಗಟ್ಟಿಪೆಟ್ಟು ಮತ್ತು ಲೆಕ್ಕಾಚಾರದ ವೈವಿಧ್ಯಕ್ಕೇ ಹೆಚ್ಚು ಮಹತ್ವ ಏಕೆ ಎಂಬುದಕ್ಕೆ ಅವರೇ ಕಾರಣ ಹೇಳುತ್ತಾರೆ. "ನಾನು ಮದ್ದಳೆ ಕಲಿತ ಮೇಲೆ ಚೆಂಡೆ ವಾದನ ಕಲಿತದ್ದು. ಮೂವತ್ತು ವರ್ಷ ಪ್ರಾಯ ಆದ ಮೇಲೆ, ಚೆಂಡೆ ಕೋಲಿನಲ್ಲಿ ಚಾಪೆ ಹುಡಿ ಮಾಡಿ ಅಭ್ಯಾಸ ಮಾಡಿದ್ದು. ಹಾಗಾಗಿ ಗಟ್ಟಿ ಪೆಟ್ಟು ಹೆಚ್ಚಿಗೆ. ಬಹುಶಃ ನಾಜೂಕಿನ ಕೊರತೆ ತುಂಬಲು ವಿನ್ಯಾಸಗಳ ವಿಷಮಗಳ ಕಡೆ ನನ್ನ ಮನಸ್ಸು ಹೋಗಿರಬೇಕು" ಎಂತಹ ಪ್ರಾಮಾಣಿಕ ಕಥನ!

ರಂಗತಂತ್ರ, ಭಾಗವತಿಕೆ, ಅರ್ಥಗಾರಿಕೆ ಈ ಬಗೆಗೂ ಭೀಮ ಭಟ್ಟರಿಗೆ ಆಳವಾದ ಆಸಕ್ತಿ ಇದೆ. ತನ್ನ ಅನಿಸಿಕೆಯನ್ನು ನೇರವಾಗಿ, ಸೋದಾಹರಣವಾಗಿ ಹೇಳುವ ಸಾಮರ್ಥ್ಯ ವಿದೆ. ತಾನು ಸೃಷ್ಟಿಸಿದ ಪೆಟ್ಟುಗಳನ್ನು ಅವರು ಬಾಯಿತಾಳ ಹೇಳಿ, ಲೆಕ್ಕ ಹಾಕಿ ತೋರಿಸಬಲ್ಲರು. ಸಂಶಯಗಳನ್ನು ನಿವಾರಿಸಬಲ್ಲರು. ಯಕ್ಷಗಾನದ ವಿವಿಧ ಅಂಶಗಳ ಚರ್ಚೆ ಅಂದರೆ ಎಲ್ಲಿಲ್ಲದ ಉತ್ಸಾಹ. ಕಾರ್ಯಕ್ರಮಕ್ಕೆ ಬಂದಾಗ, ಬಿಡುವಿನಲ್ಲಿ ಯಾವುದಾದರೊಂದು ಮೂಲೆಯಲ್ಲಿ ತಾಳ ಹಾಕುತ್ತ, ಚರ್ಚಿಸುತ್ತ ನಗುತ್ತ ನಗಿಸುತ್ತ ಇರುವ ಭೀಮ ಭಟ್ಟರನ್ನು ಕಾಣಬಹುದು. ಆತ್ಮೀಯವಾಗಿ ಚರ್ಚಿಸುವವರು ಸಿಕ್ಕಿದಾಗ ಅವರ ಆಸಕ್ತಿ ಗರಿಗೆದರುತ್ತದೆ. ಭೀಮನ ಬತ್ತಳಿಕೆ ಅಕ್ಷಯ. ರಂಗದಲ್ಲೂ, ಹೊರಗೂ.

ಕೆಲವು ಸಲ ಅವರು, ಅರ್ಥಗಾರಿಕೆ ಬಗ್ಗೆ, ಹಿಮ್ಮೇಳದ ಬಗ್ಗೆ ಕೆಲವು ವಿಚಿತ್ರ ಸಮಸ್ಯೆಗಳನ್ನು ಎತ್ತಿ ಹಾಕುವುದಿದೆ. "ಇದು ಭೀಮ ಭಟ್ಟರ ಪೆದಂಬು" ಎಂದು ನಾವು ತಮಾಷೆ ಮಾಡುವುದಿದೆ. ಆದರೆ ಅವರ ಪ್ರಶ್ನೆ ಕೆಣಕುವುದಕ್ಕಾಗಿ ಯಾ ಸೋಲಿಸುವುದಕ್ಕಲ್ಲ. ಆ ವಿಚಾರದಲ್ಲಿ ಒಂದು ಗಂಭೀರವಾದ ಚರ್ಚೆ ಆಗಲಿ ಎಂಬುದಕ್ಕಾಗಿ, ಚರ್ಚೆಗೆ ಅವರೊಬ್ಬ ದಿವಾನರೇ ಹೌದು. ಭೀಮ ಭಟ್ಟರು ಭಾಷಣಗಾರರಲ್ಲ. ಆದರೆ ಒಳ್ಳೆಯ ಸಂಭಾಷಣಕಾರರು. ರುಚಿಕಟ್ಟಾಗಿ, ವಿವರವಾಗಿ ಸಾರಗ್ರಾಹಿಯಾಗಿ ಚರ್ಚಿಸಬಲ್ಲವರು. ಯಕ್ಷಗಾನದ ಆಟ, ಕೂಟಗಳ ತಿರುಗಾಟಗಳ ಸಿಹಿ ಕಹಿಗಳನ್ನು ಹೇಳುವಾಗ, ಬರಿಯ ವರದಿ ಅಲ್ಲ, ಅದು ಒಳ್ಳೆಯ ವಿಮರ್ಶೆಯೂ ಆಗಿರುತ್ತದೆ. ಬಲಿಪರಂತಹ ಹಿರಿಯರಲ್ಲಿ ಅವರಿಗೆ ಅಪಾರ ಗೌರವವಿದ್ದರೂ ಅವರ ಗುಣ ದೋಷಗಳೆರಡನ್ನೂ ಅವರು ಹೇಳುವವರೇ. ಯಾರನ್ನೂ, ಯಾವುದನ್ನೂ ವಿಶೇಷವಾಗಿ ಹೊಗಳದೆ, ದೂರದೆ ವಸ್ತುನಿಷ್ಠವಾಗಿ ಹೇಳಬಲ್ಲವರು ಶ್ರೀ ಭಟ್ಟರು. ಅವರಲ್ಲಿ ಹಿಂದಿನ ಅನುಭವಗಳ, ನೆನಪುಗಳ ಭಂಡಾರವೇ ಇದೆ. ಘಟನೆಗಳ ರಾಶಿಯೇ ಇದೆ. ಅವನ್ನು ನೆನಪಿಟ್ಟು ಹೇಳುವ ಆಸಕ್ತಿ ಇದೆ. ಹಿಂದಿನದನ್ನು ಮಾತ್ರ ಅತಿರಂಜನೆ ಮಾಡಿ, ಹೊಸಬರನ್ನು ಅಷ್ಟಕ್ಕಷ್ಟೆ ಎನ್ನುವವರು ಅವರಲ್ಲ. ಯಾವನೇ ಒಬ್ಬ ಹೊಸ ಕಲಾವಿದರನ್ನು ಕಂಡಾಗ ಆಸಕ್ತಿಯಿಂದ ಪರಿಶೀಲಿಸುತ್ತಾರೆ.

ವೈಯಕ್ತಿಕವಾಗಿ ತುಂಬ ಸರಳ ಸ್ನೇಹಶೀಲರಾದ ಭೀಮ ಭಟ್ಟರ ಮಾತಿನಲ್ಲಿ ಹಳ್ಳಿಯ ಮಾತುಗಾರಿಕೆಯ ಹೊಗರು ಧಾರಾಳ ಇದೆ. ಅವರ ಸಂಭಾಷಣೆ ಜೀವಂತವಾಗಬೇಕಾದರೆ ಅವರೊಂದಿಗೆ ಅವರ ಮನೆ ಮಾತಾದ ಹವ್ಯಕರ ಕನ್ನಡದಲ್ಲಿ ಮಾತಾಡಬೇಕು. ಭಟ್ಟರ ತಮಾಷೆ, ವಿನೋದಗಳು ಯಾರನ್ನೂ ನೋಯಿಸುವಂಥವುಗಳಲ್ಲ. ಅವರ ವಿಮರ್ಶೆ ಆಳವಾದರೂ, ಸೌಮ್ಯವಾದದ್ದು, ತೆರೆದ ಮನಸ್ಸಿನದ್ದು.

ನೋಡಿದರೆ, ಹುಟ್ಟು ಕೃಷಿಕನಂತೆ ಕಾಣುವ ದಿವಾಣರು ಕಷ್ಟ ಜೀವಿ. ಸಾಹಸಿ. ತನ್ನ ವೈಯಕ್ತಿಕ ಕಷ್ಟಗಳನ್ನು ಹೇಳಿಕೊಳ್ಳಲು ಆಸಕ್ತಿಯೇ ಇಲ್ಲ. ಅವರ ಮಾತಿನ ಲಹರಿಯೆಲ್ಲ ಕಲೆಯ ಬಗೆಗೇ, ಅವರ ಸಂತೋಷದ ಬಗೆಗೇ. ಈ ನಿಟ್ಟಿನಲ್ಲಿ ಅವರು ದಿವಂಗತ ಕುದ್ರೆಕೊಡ್ಲು ಅವರನ್ನು ನೆನಪಿಗೆ ತರುತ್ತಾರೆ. ಕಾರ್ಯಕ್ರಮಕ್ಕೆ ಬಂದಿರುವ ಸಭೆ ಎಷ್ಟೇ ಚಿಕ್ಕದಿರಲಿ, ಕಲಾವಿದರು ಯಾರೇ ಆಗಿರಲಿ, ಭೀಮ ಭಟ್ಟರ ಉತ್ಸಾಹ, ತಲ್ಲೀನತೆ, ಏಕ ಪ್ರಕಾರ, ಉದಾಸೀನವಿಲ್ಲ. 'ಅಷ್ಟು ಸಾಕು', ಎಂಬ ಭಾವನೆ ಇಲ್ಲ. ಭೀಮ ಭಟ್ಟರ ಉಮೇದು ಕಲಾವಿದರಿಗೆ ಅನುಕರಣೀಯ. ಚಿಕ್ಕ ಹಿಡುವಳಿಯ ಕೃಷಿಕರಾದ ಭೀಮ ಭಟ್ಟರಿಗೆ ಸ್ವತಃ ದುಡಿಮೆಯಲ್ಲೂ ಆಸಕ್ತಿ, ಅವರ ಮಾತಿನ ಬದುಕಿನ ಶೈಲಿ ಹಳ್ಳಿಯ ಸುಸಂಸ್ಕೃತ ಶೈಲಿ. ರಂಗದಲ್ಲಿ ಅವರು ಇದ್ದರೆ, ಎಲ್ಲರಲ್ಲಿ ಉತ್ಸಾಹ, ಲವಲವಿಕೆ ತುಂಬಿಸಿ ವಾತಾವರಣವನ್ನು ಜೀವಂತವಾಗಿರಿಸುವ ಕ್ರಮ ವಿಶಿಷ್ಟವಾದುದು. ಶ್ರೀಮಂತರಲ್ಲವಾದರೂ, ತೃಪ್ತ ಜೀವಿ ದಿವಾಣರು. ಅವರ ಹಿರಿಯ ಮಗ ದಿವಾಣ ಶಂಕರ ಭಟ್ಟ ಚೆಂಡೆ ವಾದಕರಾಗಿ ವ್ಯವಸಾಯಿಯಾಗಿದ್ದಾರೆ. ಅರುವತ್ತೆಂಟರ ದಿವಾಣ ಹಿರಿಯ ಪ್ರಚಂಡ ಕಲಾವಿದ. ಅನುಭವಿ. ಅವರ ಅನುಭವದ ಲಾಭವನ್ನು ರಂಗವು ಪಡೆದುಕೊಳ್ಳಬೇಕು.

(1982ರಲ್ಲಿ ಉದಯವಾಣಿ ದಿನಪತ್ರಿಕೆಯ ಲಲಿತರಂಗ ವಿಭಾಗದಲ್ಲಿ ಪ್ರಕಟಿತವಾದ ಬರಹ)

# ಭಾಗ ೨



ಭೀಮಣ್ಣ ಇದ್ದರೆ
ಸುತ್ತ ಎಲ್ಲ ಉಮೇದು, ಉಲ್ಲಾಸ.
ಸದಾ ಹೊಸನತಕ್ಕೆ ಹಾರೈಸುತ್ತಿದ್ದರು.
ಮೇಳದ ತಿರುಗಾಟದ
ಒಳವಿಚಾರಗಳ ಬಗೆಗೆ
ಅರಿವಿದ್ದರೂ ಎಂದೂ
ಯಾರಲ್ಲೂ ಹೇಳುವವರಲ್ಲ.

ದಿ। ಡಾ. ಶೇಣಿ ಗೋಪಾಲಕೃಷ್ಣ ಭಟ್ಟರು
(ಮಹಾನ್ ಕಲಾವಿದರು,
ಭೀಮಭಟ್ಟರ ಒಡನಾಡಿ)

# ವಿಷಮಲಯ ವೀರ ದಿವಾಣ ಭೀಮ ಭಟ್ಟರು

**ಪ್ರೊ. ಅಮೃತ ಸೋಮೇಶ್ವರ**
**ಸಾಹಿತಿ, ಸಂಶೋಧಕ, ಕಲಾಭಿಜ್ಞ**
'ಒಲುಮೆ'
ಅಡ್ಕ, ಕೋಟೆಕಾರು
ಮಂಗಳೂರು – 575 022

ಕೆಲ ದಶಕಗಳ ಹಿಂದಣ ಯಕ್ಷಗಾನ ರಂಗದಲ್ಲಿ ಭಾಗವತ ಶ್ರೇಷ್ಠರಾದ ಅಗರಿ ಶ್ರೀನಿವಾಸ ಭಾಗವತರು ಭಾಗವತರಾಗಿಯೂ ದಿವಾಣ ಭೀಮ ಭಟ್ಟರು ಮೃದಂಗ ವಾದಕರಾಗಿಯೂ ಇದ್ದಾಗ, ಅದೊಂದು ದರ್ಶನೀಯ ದೃಶ್ಯವಾಗಿತ್ತು. ಇಬ್ಬರೂ ಗುಲಾಬಿ ಬಣ್ಣದ ಮುಂಡಾಸು ಕಟ್ಟಿಕೊಂಡು ಹಿಮ್ಮೇಳವನ್ನು ನಿರ್ವಹಿಸುತ್ತಿದ್ದ ದೃಶ್ಯ ಈಗಲೂ ಕಣ್ಣಿಗೆ ಕಟ್ಟಿದಂತಿದೆ.

ದಿವಾಣ ಭೀಮ ಭಟ್ಟರು ಸದಾ ಪ್ರಸನ್ನವದನರಾಗಿ ಭಾಗವತರ ಭಾವಪೂರ್ಣ ಹಾಡುಗಾರಿಕೆಯನ್ನು ಆಸ್ವಾದಿಸು ವಂತಿತ್ತು. ಕೆಲವರು ಮದ್ದಳೆಗಾರರು ನಿರ್ಭಾವುಕರಾಗಿ ಕರ್ತವ್ಯ ಬದ್ಧರಾಗಿರುವುದು ದುರದೃಷ್ಟಕರ.

ದಿವಾಣ ಭೀಮ ಭಟ್ಟರು ವಿಷಮಲಯದಲ್ಲಿ ಮದ್ದಳೆ ಬಾರಿಸುತ್ತಾರೆಂದು ಕೆಲವರು ಆತಂಕದ ಧ್ವನಿಯಿಂದಲೂ ಇನ್ನು ಕೆಲವರು ಪ್ರಶಂಸಾತ್ಮಕವಾಗಿಯೂ ಪ್ರತಿಕ್ರಿಯಿಸುತ್ತಿದ್ದುದುಂಟು. ವಿಷಮಲಯದ ವಿಚಾರದಲ್ಲಿ ಕೆಲವರಿಗೆ ಆತಂಕವೇಕೆಂದರೆ ಆ ರೀತಿಯು ತೀರಾ ವಿರಳವಾದುದರಿಂದ ಎನ್ನಬೇಕು. ಬೇರೆ ಯಾರೂ ವಿಷಮಲಯವನ್ನು ಬಳಸುವ ಗೋಜಿಗೆ ಹೋಗದೆ ಇದ್ದುದರಿಂದ ಈ ಅವಜ್ಞೆ ಉಂಟಾಗಿರಬೇಕೆನಿಸುತ್ತದೆ. ಇದು ಕೇಳುಗರ ಮಿತಿಯೇ ಹೊರತು ಪ್ರಯೋಗಶೀಲರಾದ ದಿವಾಣ ಭೀಮಭಟ್ಟರದ್ದಲ್ಲ.

ವಿಷಮಲಯದಲ್ಲಿ ಮೃದಂಗವಾದನ ಮಾಡುವುದು ಸುಲಭವಾದ ಮಾತಲ್ಲ. ಮೃದಂಗವಿದ್ಯೆಯಲ್ಲಿ ಪರ್ಯಾಪ್ತವಾದ ಪರಿಣತಿ ಪಡೆದವರಿಗೆ ಮಾತ್ರ ವಿಷಮಲಯದಲ್ಲಿ ಮೃದಂಗ

ವಾದನ ಮಾಡುವುದು ಸಾಧ್ಯ. ಹಾಗೆಂದು ಯಾವಾಗಲೂ ವಿಷಮಲಯದಲ್ಲಿ ವಿಹರಿಸುವ ಗೀಳೂ ಅವರದ್ದಲ್ಲ. ಭಾಗವತರ ತಾಳ ತಪ್ಪಿಸುವುದೂ ಅವರ ಉದ್ದೇಶವಲ್ಲ. ಎಷ್ಟೇ ವಿಷಮಲಯದಲ್ಲಿ ಮದ್ದಳೆ ಬಾರಿಸಿದರೂ ಕೆಲವು ಆವರ್ತಗಳಾದ ಬಳಿಕ ತಾಳದ ಸಮಗತಿಗೆ ಹೊಂದಿಕೆ ಆಗಿಯೇ ಆಗುತ್ತದೆ. ಈ ಲಯವಿಲಾಸವನ್ನು ಗಮನಿಸುವುದರಲ್ಲೆ ಒಂದು ಸುಖವಿದೆ. ಜಾಣರಾದ ಮದ್ದಳೆಗಾರರಿಗೆ ಇದೊಂದು ಲೀಲೆಯೆನ್ನಬಹುದು. ಅನುಭವಸ್ಥ ಭಾಗವತರು ಹೆಜ್ಜೆ ತಪ್ಪುವುದೂ ಇಲ್ಲ.

ಯಾವುದೋ ವಿಚಾರದಲ್ಲಿ ಏಕತಾನತೆಯೆನ್ನುವುದು ಬೇಸರಕ್ಕೆ ಕಾರಣವಾಗುವುದು ಅನುಭವವೇದ್ಯ. ನಡುವೆ ಭಿನ್ನಲಯದ ವಿಲಾಸವನ್ನು ಪ್ರಕಟಿಸಿ ರಸಾನಂದವನ್ನುಂಟು ಮಾಡಬಹುದು. ಎಲ್ಲ ಸೃಜನಶೀಲ ಕಲೆಗಳಲ್ಲೂ ಇಂಥ ಪ್ರಯೋಗ ಸಹಜ.

ಸಾಹಿತ್ಯದ ನಡೆ ಮಾತ್ರ ಪ್ರತ್ಯೇಕ. ಹಳೆಗನ್ನಡ ಪದ್ಯ ಸಾಹಿತ್ಯದಲ್ಲಾಗಲೀ, ನಡುಗನ್ನಡ, ಹೊಸಗನ್ನಡ ಪದ್ಯ ಸಾಹಿತ್ಯದಲ್ಲಾಗಲೀ ವಿಷಮ ರಚನೆಯೆಂದು ನಮಗೆ ತೋರುವ, ಎರಡನೆಯ ಅಕ್ಷರವು 'ಗುರು'ವಾಗಿರುವ ಪದ್ಯರಚನೆಗಳು ಸಾಮಾನ್ಯವಾಗಿ ನಮಗೆ ದೊರಕಲಾರವು. ವಾಡಿಕೆಯ ಸುಗಮವಾದ ಪದ್ಯವಾಚನಕ್ಕೆ ಅಂಥವು ತೊಡಕಾಗುವುದೆಂದು ಅನ್ನಿಸುವುದೇ ಈ ಆತಂಕಕ್ಕೆ ಕಾರಣ. ಆದರೆ ಮೃದಂಗ ವಾದನದಂಥ ಕಲೆಯಲ್ಲಿ ವಿಷಮಗತಿಯ ಪ್ರಯೋಗ ನಿಷಿದ್ಧವಲ್ಲ.

ವಿಶಾಲವಾದ ಸಾಹಿತ್ಯ ರಾಶಿಯಲ್ಲಿ ಎರಡನೆಯ ಅಕ್ಷರವು 'ಗುರು'ವಾಗಿರುವ ಪದ್ಯಗಳು ಸಾಮಾನ್ಯವಾಗಿ ಕಾಣಿಸದೆ ಹೋದರೂ, ಯಕ್ಷಗಾನದಲ್ಲಿ ಅದರಲ್ಲೂ ಹಾಸ್ಯಗಾರನ ಪದದಲ್ಲಿ, ಅಂಥ ಪ್ರಯೋಗ ಕಂಡುಬರುವುದುಂಟು. ಉದಾ: 'ಬಭ್ರುವಾಹನ ಕಾಳಗ'ದಲ್ಲಿ ದೂತನಿಗಾಗಿ ಇರುವ ಪದ ಹೀಗಿದೆ : 'ಸಲಾಮು ತಕ್ಕೋ ಮಣಿಪುರ ದೊರೆಯೇ! ಗುಲಾಮ ನಿನ್ಮಗ ದಿವಾಳಿ ಹನುಮ'

ದಿವಾಣ ಭೀಮ ಭಟ್ಟರು ಮದ್ದಳೆ ವಾದನದಲ್ಲಿ ಸೀಮಾಪುರುಷರಾದರೆ ಹಿಂದೆ ಕೆಮ್ಮಣ್ಣು ನಾರ್ಣಪ್ಪನವರು ಚೆಂಡೆವಾದನದಲ್ಲಿ ತಕ್ಕಮಟ್ಟಿಗೆ ವಿಷಮಲಯವನ್ನು ಜೋಡಿಸಿಕೊಳ್ಳುತ್ತಿದ್ದರು. ಅಂತಹ ಏಕತಾನತೆಯನ್ನು ಮುರಿದು ವೈವಿಧ್ಯದ ರುಚಿ ಸುಖವನ್ನು ಕಾಣಿಸುವುದೇ ವಿಷಮಗತಿಯ ಉದ್ದೇಶ. ಭೀಮ ಭಟ್ಟರಂಥ ಸಿದ್ಧ ಹಸ್ತರ ಕೈಯಲ್ಲಿ ಮಾತ್ರ ಈ ಅಸ್ತ್ರ ಪರಿಣಾಮಕಾರಿಯಾಗಿತ್ತು.



# ಚೆಂಡೆ ಮದ್ದಳೆಯ ನಿಧಿ

**ಬಲಿಪ ನಾರಾಯಣ ಭಾಗವತ**
ನೂಯಿಮನೆ, ಮಾರೂರು ಗ್ರಾಮ
ವಯಾ ಮೂಡುಬಿದಿರೆ
ದಕ್ಷಿಣಕನ್ನಡ

ದಿ| ದಿವಾಣ ಭೀಮ ಭಟ್ಟರು ಅಗ್ರಪಂಕ್ತಿಯ ಮದ್ದಳೆಗಾರರಲ್ಲಿ ಒಬ್ಬರು. ಯಕ್ಷಗಾನದಲ್ಲಿ ಮದ್ದಳೆಗಾರ ಎಂಬ ಹೆಸರು. ಚೆಂಡೆ ಮದ್ಲೆ ಒಂದೇ ಸಮಾನ ನುಡಿಸುವವನಿಗೆ ಮಾತ್ರ, ಇವೆರಡನ್ನು ಪದ್ಯದ ಭಾವ, ಏರಿಳಿತ ತಿಳಿದು ಚೆಂಡೆ ಮದ್ಲೆ ನುಡಿಸುವವನಾಗಿರ ಬೇಕು. ಸಮಯೋಚಿತ ಭಾವಗಳನ್ನು ತಿಳಿದಿರಬೇಕು. ಕಾಲಾಕಾಲ ಗಳನ್ನು ತಿಳಿದಿರಬೇಕು. ಅದನ್ನೆಲ್ಲಾ ಬಲ್ಲವರೆಂದರೆ ದಿ. ದಿವಾಣ ಭೀಮ ಭಟ್ಟರು. ಶ್ರುತಿ ಬಾರಿಸಿ ಪದ ಹೇಳುವ ಭಾಗವತರಿದ್ದಾರೆ. ಶ್ರುತಿಗೆ ಪದ ಸೇರುವುದಿಲ್ಲ. ಹಾಗೆ ಚೆಂಡೆ ಮದ್ಲೆ ಶ್ರುತಿ ಮಾಡುವ ಮತ್ತು ಬಾರಿಸುವ, ಬಡಿಯುವ, ನುಡಿಸುವ ಮದ್ಲೆಗಾರರಿದ್ದಾರೆ. ಪದ ಹೇಳುವಾಗ ಘಾತ, ಶ್ರುತಿ ಪೆಟ್ಟು, ಏರಿಳಿಪೆಟ್ಟು ಗಳು ಸಿಗುವುದಿಲ್ಲ. ಹೀಗೆ ಹಲವರಿದ್ದಾರೆ. ಉತ್ತಮರೂ ಇದ್ದಾರೆ. ಭೀಮ ಭಟ್ಟರ ಮದ್ದಳೆ ಚೆಂಡೆ ನುಡಿಯುವ, ಮಾತಾಡುವ ರೀತಿಯ ವಾದನವಾಗಿದೆ ಎಂದು ನಾನು ಹೇಳುತ್ತೇನೆ.

ದಿ| ಭೀಮ ಭಟ್ಟರು ತನ್ನ ಮದ್ದಳೆ, ಚೆಂಡೆ ಸ್ಥಾನದ ವಾದನಕ್ಕಾಗಿ ಕದಲದ ಮದ್ದಳೆಗಾರರು. ಭಾಗವತನಾಗಲಿ, ಪಾತ್ರಧಾರಿಯಾಗಲಿ, ಇತರೆ ಹಿರಿಯ ಮದ್ದಳೆಗಾರರಾಗಲಿ, ಅವರಿಗೆ ಹೊಂದಿ ಹೋಗದ ಖಚಿತ ಮದ್ದಳೆಗಾರರು ಭೀಮ ಭಟ್ಟರು. ಯಾಕೆಂದರೆ, ತನ್ನ ನಿಲುಮೆ ಖಚಿತವಾಗಿದೆ ಎಂದು ಅವರಿಗೆ ಗೊತ್ತಿದೆ. ಇತರೇ ಹಿರಿಯ ಮದ್ಲೆಗಾರರಿಗೂ ಭೀಮ ಭಟ್ಟರು ಸರಿಯಿದ್ದಾರೆಂದು ಗೊತ್ತಿರುವುದರಿಂದ ಅವರ ವಾದನದ ಬಗ್ಗೆ ಮಾತಾಡುವ ಶಕ್ತಿ ಇರಲಿಲ್ಲ. ಇತರೇ ಮದ್ಲೆಗಾರರು ಭಾಗವತನಿಗೆ, ಮದ್ಲೆಗಾರನಿಗೆ, ಪಾತ್ರಧಾರಿಗೆ, ಪ್ರೇಕ್ಷಕರಿಗೆಲ್ಲಾ ರಮ್ಯವಾಗುವಂತೆ, ತನ್ನನ್ನು ಹೊಗಳು

ವಂತೆ ಹೊಂದಾಣಿಕೆಯಾಗುತ್ತಿದ್ದರು. ಆದರೆ ಭೀಮ ಭಟ್ಟರು ಯಾರ ಸ್ನೇಹ, ಹೊಗಳಿಕೆಗೆ ಬದ್ಧರಾಗಿರಲಿಲ್ಲ. ಅವರೇ ಹೇಳುತ್ತಿದ್ದರು. "ನನ್ನನ್ನು ತಿಳಿದವ ಮೆಚ್ಚಿದರೆ ಸಾಕು" ಎಂದು. ಅಲ್ಲದೆ ಅವರು ಚೆಂಡೆ ಮದ್ದಲೆಯ ನಿಷ್ಠಾವಂತ ಮದ್ದಲೆಗಾರರು.

ನನಗೂ ದಿ। ಭೀಮ ಭಟ್ಟರಿಗೂ ಮೇಳದಲ್ಲಿ ಮೂರು ನಾಲ್ಕು ತಿರುಗಾಟಗಳಾಗಿವೆ. ಅಲ್ಲದೆ ತಾಳಮದ್ದಲೆ ಇತ್ಯಾದಿ ಯಕ್ಷಗಾನ ಕೂಟಗಳಲ್ಲಿಯೂ ಒಡನಾಟವಿದೆ. ನಾನು ಇತರರನ್ನು ಸ್ವಲ್ಪ ಹೊಂದಾಣಿಸುತ್ತಿದ್ದೆ. ನಾನೇನು ಮಾಡಿದರೂ ಅದಕ್ಕೆ ಭೀಮ ಭಟ್ರು ಬಿಡದೆ ನನ್ನನ್ನು ಅವರ ಸ್ಥಾನಕ್ಕೆ ಎಳೆದುಕೊಂಡು ಮತ್ತೆ ಹೇಳುತ್ತಿದ್ದರು. "ತಿಳಿಯದವರು ಏನೂ ಮಾಡಲಿ, ಅವರ ಜತೆ ನೀವು ಹೋಗಲೇಬಾರದು. ನೀವು ಸ್ಥಿರವಾಗಿಯೇ ಇರಬೇಕು. ನೀವು ಒಬ್ಬರು ಈಗ ಭಾಗವತರೂಂತ ಇರುವುದು. ನೀವೇ ದಾರಿತಪ್ಪಿದರೆ ಇದನ್ನು ಉಳಿಸುವವರ್‍ಯಾರು. ಯಾರಿಗೂ ಆಗಲಿ, ಆಗದಿರಲಿ. ನೀವು ಎಳ್ಳಷ್ಟೂ ತಪ್ಪಿ ಹೋಗ ಬಾರದೆಂದೇ" ಹೇಳುತ್ತಿದ್ದರು. ಅದು ನನಗೆ ಎಚ್ಚರಿಕೆ.

ದಿ। ಭೀಮ ಭಟ್ಟರಿಗೆ ವಿಷಮ ಮದ್ದಲೆಗಾರರೆಂಬ ಹೆಸರು ಕೆಲವು ಜನರದ್ದು. ಮತ್ತು ಕಲಾವಿದರದ್ದಿತ್ತು. ಅವರು ಚೆಂಡೆ ಬಾರಿಸಿದರೆ ಕಲಾವಿದರಿಗೆ ಭಯ. ಇವರ ಕುಣಿತಕ್ಕೆ ಅವರ ಚೆಂಡೆ ಸಿಗುತ್ತಿಲ್ಲವೆಂಬ ಖೇದ. ಅದು ಹಾಗಲ್ಲ. ಅವರು ಚೆಂಡೆ ಸರಿಯಾಗಿಯೇ ಬಾರಿಸುತ್ತಿದ್ದರು. ರೀತಿ ಸರಿಯೇ ಇದೆ. ಪಾತ್ರಧಾರಿಗೆ ಜ್ಞಾನ ಸಾಕಾಗದುದರಿಂದ ಅವರಿಗೆ ವಿಷಮವಾಗಿ ಕಾಣುತ್ತಿತ್ತಷ್ಟೇ. ವಿಷಮವೆಂದರೆ. ಏಕತಾಳಕ್ಕೆ ನಾವು 3 ಪೆಟ್ಟು ಬಾರಿಸುತ್ತೇವೆ. ।।। ಹೀಗೆ. ಇದರಲ್ಲಿ ।।।/।।। ಈ ಮೇಲಿನ ಸ್ಥಾನವಾದರೆ ವಿಷಮವಾಗುತ್ತದೆ. ಭೀಮ ಭಟ್ಟರು ಸಮಸ್ಥಾನಗಳಲ್ಲಿ ಕೊನೇಗೆ ಹೊರತುಳಿದ ಸ್ಥಾನಗಳಿಗೆ ಘಾತ ಕೊಡುತ್ತಿದ್ದರು. ಅದು ಪದ್ಯ ಕೊನೇವರೆಗೂ ಹಾಗೇ ಬಾರಿಸುತ್ತಿದ್ದರು. ಎಡೆಯಲ್ಲಿ ಬದಲಾಯಿಸುತ್ತಿರಲಿಲ್ಲ. ಹಾಗೆ ಪದ್ಯ ಬಂದರೆ ಹಾಗೆ, ಸಮ ಬಂದರೆ ಸಮ. ಹೀಗೆ ದಾರಿ ತಪ್ಪದೆ ನುಡಿಸಿದುದನ್ನು ತಪ್ಪಾಗಿ ವಿಷಮವೆಂದು ಹೇಳುತ್ತಿದ್ದರು. ಅಷ್ಟೇ.

ಈ ಮದ್ದಲೆಗಾರರಿಗೆ ಸುಗಮ, ವಿಷಮ ಗೊತ್ತಿತ್ತು. ತಿತ್ತಿತ್ತೈಗೆ ಬಿಡಿತ ಮುಕ್ತಾಯ, ಉಡಾಪೆಗೆ ಬಿಡಿತ ಮುಕ್ತಾಯ, ತ್ರೈತಕ್ಕೆ ಬಿಡಿತ ಮುಕ್ತಾಯ, ಮೂರು ನಾಲ್ಕು ಪೀಠಿಕೆವಾದನಗಳನ್ನು ತೈತಿತ್ತಿ, 'ತೊಂತನದಿದ್ದನ' ಸಪ್ತತಾಳಗಳಿಗೆ ಸಪ್ತತಾಳಗಳ ಧಿತ್ತಗಳು. ಎಲ್ಲವನ್ನೂ ಸ್ವಯಂ ಕಲ್ಪಿಸಿ ನಿಘಂಟಾಗಿ ತಯಾರಿಸಿದ ಕವಿ ಮದ್ದಲೆಗಾರರು ದಿವಾಣ ಭೀಮ ಭಟ್ಟರು. ತಾಳದ ಮಟ್ಟಿಗೆ ಅಲುಗಾಡಿಸಲು, ಬೋಧನೆ ಮಾಡಲು ಇನ್ನೊಬ್ಬ ಮದ್ದಲೆಗಾರನಿಲ್ಲ. ಪದ್ಯದ ತೂಕ ಮೀರಿದ ಪೆಟ್ಟು ಬಾರಿಸುವುದಾಗಲಿ, ಪದ್ಯ ಮಾಸುವ ರೀತಿಯ ಚೆಂಡೆ ಮದ್ದಲೆಯಾಗಲಿ ಭೀಮ ಭಟ್ಟರಲ್ಲಿಲ್ಲ. ಅವರ ಜಾಗೆಯಲ್ಲಿ ಮಾತ್ರ ಅದ್ಭುತವಾಗಿ ಬಾರಿಸುತ್ತಿದ್ದರು. ಇದು ನಾನು ಅನುಭವಿಸಿ ತಿಳಿದ ವಿಚಾರ.

ಆದುದರಿಂದ ದಿ। ಭಟ್ಟರಿಗೆ ನನ್ನಜ್ಜ ದಿ। ಬಲಿಪ ನಾರಾಯಣ ಭಾಗವತರೆಂದರೆ ಬಹು ಇಷ್ಟ. ನನ್ನಜ್ಜನು ಹೆಚ್ಚಿಗೆ ಕೆಲವೆಡೆಗೆ ಭೀಮ ಭಟ್ಟರನ್ನೇ ಕರೆದುಕೊಳ್ಳುತ್ತಿದ್ದರು. ನಾನೂ ಭೀಮ ಭಟ್ಟರನ್ನೇ ಚೆಂಡೆ ಮದ್ದಲೆಗೆ ಕೂಟಗಳಲ್ಲಿ ಭಾಗವಹಿಸಲು ಹೇಳಿ ಕರೆಸಿದ್ದೆ. ನಮಗೆ ತುಂಬಾ ಕಾರ್ಯಕ್ರಮಗಳು ನಡೆದಿವೆ. ಅವರನ್ನು ತಾಳಬ್ರಹ್ಮರೆಂದೇ ಹೇಳಬಹುದು. ಅವರಿಗೆ ನನ್ನಲ್ಲಿ ಭಾಗವತಿಕೆಯ ಬಗ್ಗೆ ಕೊನೆಯವರೆಗೂ ಅಭಿಮಾನವಿತ್ತು.

ದಿವಾಣರಿಗೆ ಕೆಲ ಕೆಲವು ಯಕ್ಷಗಾನ ಪದ್ಯಗಳು ಹೀಗೆಯೇ ಆಗಬೇಕೆಂಬ ಜ್ಞಾನವಿತ್ತು. ಮಾಮೂಲಾಡುತ್ತಿದ್ದ ಪ್ರಸಂಗ ನಡೆಯುವ ರಂಗ ಮಾಹಿತಿಯೂ ಚೆನ್ನಾಗಿಯೇ ಇತ್ತು. ಹಲವಾರು ವೇಷಗಳ ನಿಲುಮೆಗಳೂ ಸ್ಥಾನಗಳೂ ದಸ್ತು, ಗತ್ತು ಇತ್ಯಾದಿಗಳೂ ಮದ್ದೆಗಾರರಿಗೆ ಬೇಕಾದಷ್ಟು ಗೊತ್ತಿತ್ತು.

ಮೇಳದಲ್ಲಿ ಖಾಯಂ ತಿರುಗಾಟದ ಮದ್ದೆಗಾರರು ಭೀಮ ಭಟ್ಟರು ಆಗಿ ಇದ್ದರೆ ದಿನಂಪ್ರತಿ ಚೌಕಿಯಲ್ಲಿ ವೇಷದ ಲೀಸ್ಟು ನೋಡಿ ಯಾರ್‍ಯಾರು ಯಾವ್ಯಾವ ವೇಷವೆಂದು ತಿಳಿದು ಪ್ರವೇಶ, ಯುದ್ಧದ ರೀತಿ ಯಾವ್ಯಾವ ಯುದ್ಧ ಹೇಗೆ? ಅಥವಾ ಹೀಗೆ ಎಂಬ ವಿಚಾರ ವಿನಿಮಯ ಮಾಡಿ ನಿಗಂಟು ಮಾಡುತ್ತಿದ್ದರು. ನನ್ನ ಜತೆ ತಿರುಗಾಟದಲ್ಲಿ ನೋಡಿದ್ದೇನೆ. ಭೀಮ ಭಟ್ಟರು ಹಣಕ್ಕಾಗಿ ತಿರುಗಾಟ ಮಾಡಿದವರಲ್ಲ. ಕಲಾಭಿಮಾನಕ್ಕಾಗಿ ಮೇಳಕ್ಕೆ ಹೋದವರು. ಕೆಲವೆಡೆ ಅವರು ಇತರ ತಾಳಮದ್ದೆಗೆ ಹೋಗಿ ಭಾಗವಹಿಸಿ ಬರುವಾಗ ದಾರಿಯಲ್ಲಿ ನಾನಿದ್ದ ಆಟ (ಮೇಳ) ವಿದ್ದಲ್ಲಿ ನಿಲ್ಲಿಸಿ ಬಂದು ಸ್ವಲ್ಪ ಮದ್ದಳೆ, ಸ್ವಲ್ಪ ಚೆಂಡೆ ಬಾರಿಸದೆ ಹೋದದ್ದೇ ಇಲ್ಲ. ಅದಕ್ಕೆ ಮೇಳದ ಯಜಮಾನ ಹಣಕೊಟ್ಟರೆ ತೆಗೆದುಕೊಳ್ಳದೆ "ನಾನು ಎರಡು ಪದ್ಯಕ್ಕೆ ಭಾಗವತರ ಜತೆ ಸೇವೆ ಮಾಡಿದ್ದು. ನಾನು ಹೋಗುತ್ತೇನೆ. ಮುಂದೆ ಕಾಣುವ ಎಂದು ಹೇಳಿ ಹೋಗುತ್ತಿದ್ದರು." ನಾನು ಪ್ರತ್ಯಕ್ಷ ಕಂಡ ಸಂಗತಿಯಿದು.

ನಾನಾ ರೀತಿಯ, ನಾನಾ ವಿದ್ಯೆಯ, ನಾನಾ ರೂಪದ ಮದ್ದೆಗಾರರು, ಚೆಂಡೆ ವಾದನದವರು, ಅನುಭವಿಗಳು, ವಿಮರ್ಶಕರು ಹುಟ್ಟಿ ದಿವಂಗತರಾಗಿದ್ದಾರೆ. ಪ್ರತ್ಯಕ್ಷದಲ್ಲೂ ಇದ್ದಾರೆ. ಇನ್ನು ಮುಂದಕ್ಕೂ ಹುಟ್ಟಿ ಬರಬಹುದು. ಆದರೆ ದಿ। ದಿವಾಣ ಭೀಮ ಭಟ್ಟರ ರೀತಿಯ ಸಮ ಕೈ ಚಳಕದ ಮದ್ದೆಗಾರ ಬರುವುದನ್ನು ಮುಂದೆ ನಿರೀಕ್ಷಿಸೋಣ.



# ಗೆಳೆಯ ದಿವಾಣರ ನೆನಪು

**ಹಿರಿಯಡ್ಕ ಗೋಪಾಲ ರಾವ್**
**ಕಲಾವಿದರು, ಹಿರಿಯಡ್ಕ**

ಶ್ರೀ ದಿವಾಣ ಭೀಮ ಭಟ್ಟರ ಭೇಟಿ ಹಿರಿಯಡ್ಕದಲ್ಲಿ. ಇವರ ಹೆಸರು ಕೇಳಿದ್ದೆ ವಿನಹ ಮುಖತಃ ಪರಿಚಯವಿರಲಿಲ್ಲ.

ಹಿರಿಯಡ್ಕಕ್ಕೆ ಯಾವುದೇ ಯಕ್ಷಗಾನ ಮೇಳ ಬಂದರೆ ದೇವಸ್ಥಾನದ ವಠಾರದಲ್ಲಿ ಇರುವ ಭೋಜನ ಶಾಲೆಯಲ್ಲೇ ಅಡುಗೆ, ಊಟ. ಈ ಭೋಜನ ಶಾಲೆಯ ಹತ್ತಿರವೇ ನನ್ನ ಮನೆ ಇದ್ದಿತ್ತು.

ಇದು ಕೆಲವು ದಶಕಗಳ ಹಿಂದಿನ ವಿಷಯ. ಯಾವುದೋ ಒಂದು ಯಕ್ಷಗಾನ ಮೇಳ ಹಿರಿಯಡ್ಕದಲ್ಲಿ ಆಟ ಆಡಲು ಬಂದಾಗ ಆ ಮೇಳದಲ್ಲಿ ಮದ್ದಳೆಗಾರರಾಗಿ ಭೀಮ ಭಟ್ಟರು ಇದ್ದರು. ಅವರು ನಮ್ಮ ವೀರಭದ್ರ ದೇವಸ್ಥಾನದ ಭೋಜನ ಶಾಲೆಯ ಅಡಿಗೆ ಭಟ್ಟರಾದ ವಿಠಲ ಭಟ್ಟರಲ್ಲಿ, ನನ್ನ ಹೆಸರನ್ನ ಹೇಳಿ, ಅವರ ಮನೆ ಎಲ್ಲಿದೆ? ಎಂದು ಕೇಳಿದಾಗ, ಅವರು ಹತ್ತಿರವಿರುವ ನನ್ನ ಮನೆಯನ್ನು ತೋರಿಸಿಕೊಟ್ಟರು.

ಹಾಗಾಗಿ ಶ್ರೀ ದಿವಾಣ ಭೀಮ ಭಟ್ಟರು ನನ್ನ ಮನೆಗೆ ಬರುವಂತಾಯಿತು. ನಾನು ಅವರಿಗೆ ನಮಸ್ಕಾರ ಮಾಡಿ ಬರಮಾಡಿಕೊಂಡೆ. ಆಗ ನಮ್ಮ ಮನೆಯಲ್ಲಿ ಆಸನಗಳು ಇರಲಿಲ್ಲ. ಜಗಲಿಯಲ್ಲಿ ಕುಳಿತುಕೊಂಡು ಸಂಭಾಷಣೆಗೆ ತೊಡಗಿಕೊಂಡೆವು. ಚರ್ಚೆಯ ವಿಷಯ ಪದ್ಯ ಹೇಳುವ ರೀತಿ. ಅದಕ್ಕೆ ಚಂಡೆ, ಮದ್ದಳೆಗಳನ್ನು ಹೊಂದಿಸಿಕೊಳ್ಳುವ ಕ್ರಮ. ಅವರು ತೆಂಕಿನ ಪದ್ಧತಿಯನ್ನು ಸರಿಯಾಗಿ ವಿವರಿಸಿದರು.

ಚೆಂಡೆಯ ಉರುಳಿಕೆ ಗತ್ತು (ಉರುಳಿಕೆಯ ಭಾಷೆ) ಇದನ್ನು ಕೇಳಿದಾಗ ನನಗೆ ಕುತೂಹಲ ಕೆರಳಿತು. (ತರಿಕಿಟತಕ)ಎಂಬಿ ನುಡಿತ ನನಗೆ ಹೇಳಿಕೊಡುತ್ತೀರಾ ಎಂದು ಅವರಲ್ಲಿ ಕೇಳಿದೆ. ಅದಕ್ಕೆ ಕಲಿಯಲು ಬಹಳ ಸಮಯ ಬೇಕಾದೀತು ಎಂದಾಗ ಆಗಲಿ

ಅದರ ಸ್ಥೂಲ ಪರಿಚಯ ಕಲಿಸಿಕೊಡಿ ಎಂದೂ, ನನ್ನಲ್ಲಿ ಇರುವ ಎರಡು ಕೋಲು ಕೊಟ್ಟೆ. ಅದನ್ನು ತೆಗೆದುಕೊಂಡು ಅಲ್ಲಿ ನೆಲದಲ್ಲಿ ಆ ಕೋಲಿನಿಂದ 'ತರಿಕಿಟತಕ' ಬಾರಿಸಿ ತೋರಿಸಿದರು. ನಾನು ಪ್ರಯತ್ನ ಮಾಡಿದೆ. ನಡೆ ಬಹಳ ನಿಧಾನ ಗತಿಯಲ್ಲಿ ಇತ್ತು. ಹೀಗೆ ಸಾಧಾರಣ ಒಂದು ಘಂಟೆಯ ತನಕ ಅವರು ಬಾರಿಸಿ ತೋರಿಸುವುದು, ನಾನು ಬಾರಿಸಲು ಹೋರಾಟ ಮಾಡುವುದು. ಹೀಗೆ ಚೆಂಡೆ ಪಾಠ ಹೇಳುತ್ತಿರುವಾಗಲೆ, ಊಟಕ್ಕೆ ವೇಳೆಯಾಯಿತೆಂದು ಒಬ್ಬ ವ್ಯಕ್ತಿ ಬಂದು ಸೂಚನೆ ಕೊಟ್ಟಾಗ, ಅವರಿಗೆ ನಮಸ್ಕರಿಸಿ ಬೀಳ್ಕೊಟ್ಟೆ.

ಬಹಳ ಸಜ್ಜನ ವ್ಯಕ್ತಿ, ತಾನು ಕಲಿತುದನ್ನು ಇನ್ನೊಬ್ಬರಿಗೆ ಕಲಿಸಬೇಕು ಎನ್ನುವ ಮನಸ್ಸು ಉಳ್ಳವರು ಎಂದು ತಿಳಿದುಕೊಂಡೆ. ಆಮೇಲೆ ನಮ್ಮಿಬ್ಬರ ಬಾಂಧವ್ಯ ಬೆಳೆದು ಬಂತು.

ಶ್ರೀ ಭೀಮ ಭಟ್ಟರು ಮದ್ದಳೆ ನುಡಿಸುವಾಗ ಮದ್ದಳೆಯಲ್ಲಿ ಹೊರಡುವ ನಾದ ನುಡಿತದ ಸ್ಪಷ್ಟತೆ ಕಿವಿಗೆ ಕೇಳಿಸುತ್ತಿತ್ತು. ಚಾಪು, ಕಪಾಲ, ಮುಚ್ಚುಗುಂಪು, ಗುಂಪು, ಉರುಳಿಕೆ ಇವುಗಳು ಮದ್ದಳೆಯಲ್ಲಿ ಸಂಪೂರ್ಣ ನಾದವನ್ನು ಸ್ವಚ್ಛವಾಗಿ ಹೊರ ಹೊಮ್ಮಿಸುತಿತ್ತು. ಈ ಮೂಲಕ ಮದ್ದಳೆಯ ಭಾಷೆ ನಿರ್ಮಾಣವಾಗುತ್ತಿತ್ತು. ಇದರಿಂದ ನಾನು ಸಂತೋಷ ಪಟ್ಟಿದ್ದೇನೆ.

ಶ್ರೀ ಅಂಬಾತನಯ ಒಂದು ದಿನ ಭೇಟಿಯಾದಾಗ ಎಡನೀರು ಮಠದಲ್ಲಿ ಯಕ್ಷಗಾನ ಸಪ್ತಾಹ ತಾಳಮದ್ದಳೆಯು ನಡೆಯಲಿದೆ. ನೀವು ಬನ್ನಿ. ಜೊತೆಯಲ್ಲಿ ಹೋಗೋಣ ಎಂದು ತಿಳಿಸಿದರು. ನನಗೆ ಎಡನೀರು ಮಠ ಎಲ್ಲಿದೆ ಎಂದು ಗೊತ್ತಿರಲಿಲ್ಲ. ಅಂಬಾತನಯರ ಮಾರ್ಗದರ್ಶನದಲ್ಲಿ, ನಾವಿಬ್ಬರೂ ಜೊತೆಯಲ್ಲಿ ಹೊರಟು ಯೆಡನೀರು ಮಠವನ್ನು ತಲುಪಿದೆವು.

ಆ ದಿನದ ತಾಳಮದ್ದಳೆಗೆ ತಾಳಮದ್ದಳೆಕೂಟದ ಹೆಸರಾಂತ ಮದ್ದಳೆಗಾರ ನರಸಿಂಹ ಭಟ್ಟರು, ದಿವಾಣ ಭೀಮ ಭಟ್ಟರು ಸೇರಿದ್ದರು. ನನಗೆ ಇಂತಹ ಮೇರು ಕಲಾವಿದ ವಿದ್ವಾಂಸರೊಂದಿಗೆ ಯಕ್ಷಗಾನದ ಕುರಿತು ಮಾತಾಡುವ ಅವಕಾಶ ಸಿಕ್ಕಿತು. ನನ್ನ ಸ್ನೇಹಿತ ಭೀಮ ಭಟ್ಟರೊಂದಿಗೆ ಬಹಳಷ್ಟು ಮಾತನಾಡಿದೆ. ರಾತ್ರಿ ಊಟ ಮುಗಿಸಿದ ಮೇಲೆ, ತಾಳಮದ್ದಳೆ. ನರಸಿಂಹ ಭಟ್ಟರು ಬಯಲಾಟದಲ್ಲಿ ಬಾರಿಸುವ ಪೀಠಿಕೆಯನ್ನು ಜೋಡಿ ಚೆಂಡೆಯಲ್ಲಿ ಬಾರಿಸತೊಡಗಿದರು.

ವಿಶೇಷ ಅಂದರೆ ಒಬ್ಬರು ಒಂದು ತುಂಡು ಬಾರಿಸಿ ಇನ್ನೊಬ್ಬರಿಗೆ ಬಾರಿಸಲು ಬಿಡುವುದು. ತಾಳಗಳಿಗೆ ಬಾರಿಸುವ ವೈವಿಧ್ಯ. ಹೀಗೆ ಯಕ್ಷಗಾನದಲ್ಲಿ ಬಳಸುವ ಎಲ್ಲಾ ತಾಳಗಳಲ್ಲಿ ಎಲ್ಲಾ ನಡೆಗಳಲ್ಲಿ ಬಾರಿಸಿ (ಚತುರಶ್ರ, ಮಿಶ್ರ, ಖಂಡ) ಒಂದೊಂದೇ ನಡೆಯನ್ನು ಬಾರಿಸಿ ಇಬ್ಬರು ಹಂಚಿಕೊಳ್ಳುವುದು (ಥೈಕು ಥೈಕು ದಿತ್ತಾ ಕಿಟ ದಿನ್ನಾ) ಎಂಬ ನುಡಿತವನ್ನು ಬಾರಿಸಿದ ಮೇಲೆ ಇಬ್ಬರೂ ಒಂದಾಗಿ ಜೊತೆಯಲ್ಲಿ ಬಾರಿಸಿದರು. ಇದು ನನ್ನ ಮನಸ್ಸನ್ನು ತಾಳ, ಲಯಗಳ ಸಾಗರದಲ್ಲೇ ತೇಲಿಸಿತು. ಇಂತಹ ಸಮಯ ಹಿಂದೆ ಸಿಕ್ಕಿಲ್ಲ. ಮುಂದೆ ಕೇಳಲಿಕ್ಕೆ ಇಲ್ಲ.

ಶ್ರೀಯುತ ಭೀಮ ಭಟ್ಟರು ಮದ್ದಳೆ ನುಡಿಸುವಾಗ, ಅಂದರೆ ಮದ್ದಳೆಯ ಬಾಯಿಗೆ,

ಹಸ್ತದಿಂದ ತಾಡನ ಮಾಡಿ ಸ್ವರ ಎಬ್ಬಿಸುವಾಗ, ಎಲ್ಲಿಯೂ (ಚಕ್ ಚಕ್) ಎಂದು ಚರ್ಮ ಸ್ವರ ಬರುವುದಿಲ್ಲ. ಶುದ್ಧವಾದ ಮದ್ದಳೆಯ ನಾದ ಹೊರ ಹೊಮ್ಮುತ್ತಿತ್ತು. ಹೀಗೆ ಮದ್ದಳೆಯಲ್ಲಿ ಇರುವ ಸಂಪೂರ್ಣ ಸ್ವರವನ್ನು ಹೊರಡಿಸಿ ಬಾರಿಸುವವರನ್ನು ನನ್ನ ಈ ವಯಸ್ಸಿನವರೆಗೆ, ಯಾರನ್ನೂ ಕಂಡಿಲ್ಲ. ಕೇಳಲಿಲ್ಲ. ಅಂತೆಯೇ ನಾದ ಬ್ರಹ್ಮ, ಲಯ ಬ್ರಹ್ಮನಲ್ಲಿ ಲೀನವಾದ ಭೀಮ ಭಟ್ಟರನ್ನು ಶತಮಾನೋತ್ಸವ ನಡೆಸುವ ವೇಳೆ ಸ್ಮರಿಸಿ ವಂದಿಸುತ್ತೇನೆ.

ಅವರು ಮತ್ತು ನಾನು ಅನೇಕ ಯಕ್ಷಗಾನ ಶಿಬಿರ, ಕಮ್ಮಟಗಳಲ್ಲಿ ಭಾಗವಹಿಸಿದ್ದೇವೆ. ಅವರ ವಿಶ್ವಾಸಕ್ಕೆ ಪಾತ್ರನಾಗಿ ಇರುವುದರಿಂದಲೇ ಅವರ ಮಕ್ಕಳು ಭೀಮ ಭಟ್ಟರ ಹೆಸರಿನ ಪ್ರಶಸ್ತಿಯನ್ನು ನನಗೆ ಕೊಡಲು ತೀರ್ಮಾನಿಸಿರಬೇಕು. ಕೋಡ ಪದವಿನಲ್ಲಿ ನಡೆದ ಆ ಪ್ರಶಸ್ತಿ ಪ್ರದಾನದ ನೆನಪು, ಅಲ್ಲಿ ದೊರೆತ ಅವರ ಆತಿಥ್ಯ, ಇನ್ನೂ ಮನಸ್ಸಿನ ಅಂಗಳದಲ್ಲಿ ಹಸಿರಾಗಿ ನೆಲೆಸಿದೆ.



# ನಗುಮುಖದ ಮೃದುಹೃದಯಿ

ಡಾ. ಏರ್ಯ ಲಕ್ಷ್ಮೀನಾರಾಯಣ ಆಳ್ವ
ಸಾಹಿತಿ, ಸಾಂಸ್ಕೃತಿಕ ಮುಂದಾಳು
ಮೊಡಂಕಾಪು, ಬಂಟ್ವಾಳ

ನಾನು ಯಕ್ಷಗಾನಪಟುವೂ ಅಲ್ಲ, ವಿಮರ್ಶಕನೂ ಅಲ್ಲ. ಆದರೆ ಕಡಲಕರೆಯ ಕರ್ನಾಟಕದ ಗಂಡುಕಲೆ, ಪರಿಪೂರ್ಣ ಕಲಾ ಪ್ರಕಾರವಾದ ಯಕ್ಷಗಾನದ ಆಸಕ್ತ, ಅಭಿಮಾನಿ. ಪ್ರೇಕ್ಷಕನಾಗಿ ಕೂತು ನೋಡಿ ಆನಂದ ಪಟ್ಟುದಷ್ಟೇ ಯಕ್ಷಗಾನ ಕ್ಷೇತ್ರದಲ್ಲಿ ನನ್ನ ಅನುಭವದ ಸೀಮೆ. ಆ ಅನುಭವದ ಸೀಮೆ ಸ್ವಲ್ಪ ವಿಸ್ತರಿಸಿ ಕೊಂಡುದು ಶಿವರಾಮ ಕಾರಂತರ ಬಯಲಾಟ ಕೃತಿಯ ಓದಿನ ನಂತರ ಆ ಕ್ಷೇತ್ರದಲ್ಲಿ ನಾನು ಸ್ವಲ್ಪ ಒಳಹೊಕ್ಕು ನೋಡುವ ಪ್ರಯತ್ನಪಟ್ಟುದು ಕಾರಂತರು ಕುಂಬಳೆಯ ಪಾರ್ತಿಸುಬ್ಬನನ್ನು ಬ್ರಹ್ಮಾವರಕ್ಕೆ ಹೊತ್ತು ಸಾಗಿಸುವ ಪ್ರಯತ್ನಪಟ್ಟುದನ್ನು ಕಂಡು. ಜೊತೆಗೆ ಕಾರಂತರ ಈ ಪ್ರಯತ್ನವನ್ನು ಎದುರಿಸಲು ಒಮ್ಮೆಲೆ ಎದ್ದುನಿಂತ ತೆಂಕುತಿಟ್ಟಿನ ಪರಿಣತರ ಗುಂಪಿನ ಬರಹಗಳ ಓದಿನ ನಂತರ. ಆದರೂ ಆ ಕ್ಷೇತ್ರದಲ್ಲಿ ನನ್ನ ಅರಿವಿನ ಮಿತಿ ಬಹಳ ಸೀಮಿತವಾದುದು. ಹೀಗಾಗಿ ಯಕ್ಷಗಾನ ಕ್ಷೇತ್ರದ ಕಲಾದಿಗ್ಗಜರ ಪರಿಚಯವೂ ಅಷ್ಟಕಷ್ಟೆ. ಒಬ್ಬ ಸಹೃದಯಿ ಪ್ರೇಕ್ಷಕನಾಗಿ ಯಕ್ಷಗಾನ ವನ್ನು ನೋಡಿ ಸಂತೋಷ ಪಡುವುದರಲ್ಲಿ ನನಗೆ ಹೆಚ್ಚಿನ ಸಂತೋಷ.

ಸುಮಾರು 1978–79ರ ಕಾಲ ಎಂದು ನನ್ನ ನೆನಪು. ಯಕ್ಷಗಾನಕ್ಕೆ ಸಂಬಂಧಿಸಿದಂತೆ ಒಂದು ಸಂಸ್ಥೆಯನ್ನು ಹುಟ್ಟು ಹಾಕುವ, ಅದರ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಒತ್ತಡ ನನ್ನ ಮೇಲೆ ಬಂತು. ಕನ್ನಡ ನಾಡು ಎಂದೆಂದೂ ಮರೆಯದ ಇಪ್ಪತ್ತನೆಯ ಶತಮಾನದ ಪ್ರಾರಂಭದ ದಿನಗಳಲ್ಲಿ ಬಾಳಿದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರ ಎರಡನೆಯ ಮಗ ಮುಳಿಯ ಮಹಾಬಲ ಭಟ್ಟರು, ಮಂಗಳೂರು ಕಾಳಿಕಾಂಬಾ ದೇವಾಲಯದ

ಆಡಳಿತ ಮೊಕ್ತೇಸರರಾಗಿದ್ದ ಚಂದ್ರಯ್ಯ ಆಚಾರ್ಯರು ಮತ್ತು ಇನ್ನು ಕೆಲವು ಮಿತ್ರರು ಜೊತೆ ಸೇರಿ ಯಕ್ಷಗಾನದ ವಿಮರ್ಶೆ, ಶಿಬಿರ ಪ್ರಾತ್ಯಕ್ಷಿಕೆ ಮತ್ತು ಸಂಶೋಧನೆಗಳಿಗಾಗಿ ಒಂದು ಸಂಸ್ಥೆಯನ್ನು ಹುಟ್ಟುಹಾಕುವ ಸಾಹಸಕ್ಕೆ ಕೈ ಹಾಕಿದೆವು. ಈ ಆಸಕ್ತ ವಲಯದಲ್ಲಿ ನಾನೂ ಒಬ್ಬನಾಗಿದ್ದೆ. ಹಾಗೆ ಹುಟ್ಟಿದ ಸಂಸ್ಥೆ 'ಯಕ್ಷಗಾನ ಪರಿಷತ್ತು' ಅದರ ಅಧ್ಯಕ್ಷನಾಗಿ ನಿಲ್ಲಬೇಕಾಗಿ ಬಂದುದು ಗೆಳೆಯರ ಪ್ರೀತಿಯ ಒತ್ತಡದಿಂದ. ಬದಲು ಈ ಕ್ಷೇತ್ರದಲ್ಲಿ ನನ್ನ ಪರಿಣತಿಯ ಮೂಲಕವಲ್ಲ.

ಆ ಸಂಸ್ಥೆಯ ಆಶ್ರಯದಲ್ಲಿ ನಾವು ಪರಂಪರೆಗೆ ಅನುಗುಣವಾದ ಪ್ರದರ್ಶನಗಳನ್ನು, ಪ್ರಾತ್ಯಕ್ಷಿಕೆಗಳನ್ನು, ಚಿಂತನ ಶಿಬಿರಗಳನ್ನು, ವಿಮರ್ಶಾಗೋಷ್ಠಿಗಳನ್ನು ನಡೆಸಿದೆವು. ಆಗೆಲ್ಲ ನಮಗೆ ಸಂಪನ್ಮೂಲ ವ್ಯಕ್ತಿಗಳಾಗಿ ಇದ್ದವರಲ್ಲಿ, ದಿವಾಣ ಭೀಮ ಭಟ್ಟರು ಒಬ್ಬರು. ಅವರು ಸದಾ ನಮಗೆ ನೆರವಾಗುತ್ತ ಬಂದವರು. ಅವರು ಹಿಮ್ಮೇಳದ ಕಲಾವಿದರಾಗಿದ್ದರೂ ಅವರಿಗೆ ಯಕ್ಷಗಾನದ ಎಲ್ಲಾ ಕ್ಷೇತ್ರಗಳಲ್ಲೂ ಪರಿಣತಿ ಇತ್ತು. ಇಂತಹ ಸಂದರ್ಭಗಳ ಮೂಲಕ ಭೀಮ ಭಟ್ಟರ ಪರಿಚಯ ಆತ್ಮೀಯವಾಗಿ ಬೆಳೆಯಿತು. ಆ ಸಂಪರ್ಕ, ಸಂಬಂಧ ಗಳೂ ದೀರ್ಘಕಾಲಿಕವಾಗಿರಲಿಲ್ಲವಾದರೂ ಇದ್ದಷ್ಟು ಕಾಲ ಗಾಢವಾಗಿತ್ತು, ಪ್ರಿಯವಾಗಿತ್ತು.

ಹಲವು ದಶಮಾನಗಳ ಬಳಿಕ ಇಂದು ನನಗೆ ದಿವಾಣ ಭೀಮ ಭಟ್ಟರೆಂದೊಡನೆ ನೆನಪಿಗೆ ಬರುವುದು ಬೊಚ್ಚು ಬಾಯಿಯ ಸದಾ ಮುಗುಳುನಗೆ ಸೂಸುತ್ತಿರುವ ಮಗುವಿನಂತ ಮುದ್ದು ಮುಖ. ಹೆಗಲಲ್ಲೋ ಸಾಮಾನ್ಯ ಶಾಲು, ಇಸ್ತ್ರೀ ಕಾಣದ ಆದರೆ ಸ್ವಚ್ಛ ನೆಹರೂ ಶರ್ಟು, ಕೆಳಗೊಂದು ಮುಂಡು. ಈ ಸರಳತೆಯಲ್ಲಿ ಎದ್ದು ಕಾಣುವ ಮುಗ್ಧತೆ. ಆ ಕಾಲದಲ್ಲಿ ಹಿಮ್ಮೇಳದ ಅಗ್ರಮಾನ್ಯರಲ್ಲಿ ಭೀಮ ಭಟ್ಟರು ಒಬ್ಬರು. ಆದರೆ ಸಾಮಾನ್ಯ ವೇಷಧಾರಿ ಯನ್ನಾದರೂ ಹೊಂದಿಸಿ ಮುನ್ನಡೆಸುವ ಹೃದಯವಂತಿಕೆ. ಅವರೊಡನೆ ವ್ಯವಹರಿಸು ವಾಗಲೂ ಅವರೆಂದೂ ಹಮ್ಮು ಬಿಮ್ಮು ತೋರಿದವರಲ್ಲ. ನಗೆ ಬೆರೆತ ಮಾತು ಹಿತಮಿತವಾದುದು.

ಆ ಕಾಲದಲ್ಲಿ ಯಕ್ಷಗಾನ ಕ್ಷೇತ್ರದಲ್ಲಿ ಕಲಾಸೇವೆ ಸಲ್ಲಿಸುವವರಿಗಿದ್ದ ಸಂಬಳವೂ ಸೀಮಿತವಾದುದು. ಸಾಮಾಜಿಕ ಗೌರವವೂ ಅಷ್ಟಕಷ್ಟೆ. ಇಂತಹ ಕಾಲ ಸ್ಥಿತಿಯಲ್ಲೂ ತನ್ನ ಬೇನೆ ಬವಣೆಗಳನ್ನು ಭೀಮ ಭಟ್ಟರು ಎಲ್ಲೂ ಯಾರೊಡನೆಯೂ ಹೇಳಿಕೊಂಡವರಲ್ಲ. ತನ್ನ ನೋವ ತಾನೇ ನುಂಗಿ ಹೊರಗೆಲ್ಲ ನಗುನಗುತ ಬಾಳಿದವರು. ತಮ್ಮ ಅರೆಕೊರೆಗಳ ಕುರಿತು ಎಲ್ಲೂ, ಯಾರೊಡನೆಯೂ ತಿಳಿಸಿದವರಲ್ಲ. ಬಂದುದು ತನ್ನ ಭಾಗ್ಯ ಎಂದುಕೊಂಡವರು. ಹಸೆ ಇದ್ದಷ್ಟೆ ಕಾಲು ಚಾಚಿದವರು. ಯಕ್ಷಗಾನ ಕ್ಷೇತ್ರದ ಸೇವೆಯನ್ನು ಆರಾಧನೆ ಎಂದು ನಂಬಿ, ನಡೆಸಿಕೊಂಡು ಬಂದವರು. ಅಷ್ಟರಲ್ಲೇ ಸುಖ ಸಂತೋಷವನ್ನು ಪಡೆದವರು.

ಯಕ್ಷಗಾನ ಕಲಾಸೇವೆಯಲ್ಲೆ ಸುಖ ಸಂತೋಷಗಳನ್ನು ಕಂಡುಕೊಂಡ ದುರ್ವ್ಯಸನ ಗಳಿಂದ ದೂರವಾದ, ಸರಳ ಸಜ್ಜನಿಕೆಯ, ನಗುಮುಖದ, ಪ್ರಬುದ್ಧತೆ ಇದ್ದೂ ಮುಗ್ಧತೆಯ ದಿವಾಣ ಭೀಮ ಭಟ್ಟರಂತಹ ಕಲಾವಿದರನ್ನು ಇಂದು ಕಾಣುವುದು ಕಷ್ಟ ಸಾಧ್ಯ. ಹಾಗಾಗಿಯೇ ಬಲ್ಲವರ ಮನದಲ್ಲಿ ಅವರು ಅಮರರು.

# ಶಿಸ್ತಿನ ಸಜ್ಜನ ದಿವಾಣ

**ವಿದ್ವಾನ್ ಪುಚ್ಚೆಕೆರೆ ಕೃಷ್ಣ ಭಟ್ಟ**
ಕಲಾವಿದ
ನಿವೃತ್ತ ಮುಖ್ಯೋಪಾಧ್ಯಾಯ
ಪುಚ್ಚೆಕೆರೆ, ಮಂಚಿ
ಬಂಟ್ವಾಳ ತಾಲೂಕು, ದಕ್ಷಿಣಕನ್ನಡ

ನಾನು ಚಿಕ್ಕವನಾಗಿದ್ದಾಗ ನಮಗೆ ಸುಲಭ ಸಾಧ್ಯವಾಗಿದ್ದ ಮನೋರಂಜನ ಮಾಧ್ಯಮ ಯಕ್ಷಗಾನವೊಂದೇ. ಅಲ್ಲೊಮ್ಮೆ ಇಲ್ಲೊಮ್ಮೆ ನಾಟಕಗಳನ್ನು ನೋಡಿದ್ದುಂಟು. ನಾನು ಅಧ್ಯಾಪಕನಾಗಿ ಸೇರಿ ಮುಖ್ಯೋಪಾಧ್ಯಾಯನಾಗಿ ನಿವೃತ್ತನಾದದ್ದೂ ಕಟೀಲಿನ ಶಾಲೆಯಲ್ಲಿ. ಅವರು ನನ್ನ ಬಂಧುಗಳೂ, ಖ್ಯಾತ ಮದ್ದಳೆಗಾರ, ಹಿಮ್ಮೇಳವಾದನದ ಗುರು ದಿವಂಗತ ನೆಡ್ಲೆ ನರಸಿಂಹ ಭಟ್ಟರು. ಈ ಎಲ್ಲಾ ಕಾರಣಗಳಿಂದ ಯಕ್ಷಗಾನವು ನನ್ನ ಜೀವನದ ಅವಿಭಾಜ್ಯ ಅಂಗವಾಯಿತು. ನಾನು ಹವ್ಯಾಸಿ ವೇಷಧಾರಿಯಾಗಿ ರಂಗಸ್ಥಳದ 'ಹುಡಿಹಾರಿಸಿದ್ದು' ಇದೆ. ಯಕ್ಷಗಾನದ ತವರುಮನೆ ಯೆಂಬ ಖ್ಯಾತಿ ಶ್ರೀ ಕ್ಷೇತ್ರ ಕಟೀಲಿಗಿದೆ. ಆದುದರಿಂದಲೇ ಯಕ್ಷಗಾನ ಕಲಾವಿದರೆಲ್ಲರಿಗೂ ಇದೊಂದು ಶ್ರದ್ಧಾಕೇಂದ್ರ. ಕಟೀಲಿನಲ್ಲಿ 'ಸೇವೆ' ಮಾಡದ ವೇಷಧಾರಿಗಳೇ ಇಲ್ಲ. ಇದು ನನ್ನ ಹಾಗೂ ಯಕ್ಷಗಾನ ಕಲಾವಿದರೆಲ್ಲರ ಒಡನಾಟದ ವೇದಿಕೆಯೂ ಆಯಿತು.

ದಿವಾಣ ಭೀಮ ಭಟ್ಟರ ಹಾಗೂ ನನ್ನ ಸ್ನೇಹ ಆತ್ಮೀಯತೆಯ ಹಂತಕ್ಕೆ ತಲುಪಿದ್ದು ಇಲ್ಲಿಯೇ. ಆಗಾಗ ಇಲ್ಲಿಗೆ ಬರುತ್ತಿದ್ದ ಗಂಭೀರ ವ್ಯಕ್ತಿತ್ವದ ಅವರು ನನಗೆ ತೀರಾ ಸಮೀಪವರ್ತಿಯಾದುದು ಕಟೀಲಿನ ಯಕ್ಷಗಾನ ಕಮ್ಮಟದಲ್ಲಿ. ದಿವಂಗತ ಮುಳಿಯ ಮಹಾಬಲ ಭಟ್ಟರು, ಡಾ. ಜೋಶಿ ಮತ್ತು ವಿದೇಶೀ ಮಹಿಳೆಯಾದ ಮಾರ್ಥಾ ಆಸ್ಟಿನ್ ರವರ ಮುಂದಾಳತ್ವದ ಆ ಕಮ್ಮಟದಲ್ಲಿ ದಿವಾಣರ ಮದ್ದಳೆಗಾರಿಕೆ ಅನಾವರಣಗೊಂಡಿತು. ತಾಳ-ಲಯ ಗಳ ಕುರಿತಾದ ಅವರ ಖಚಿತತೆ ಅಸದೃಶ. ಅವರು ಹೇಳುವುದು

(ಬಾಯಿ ತಾಳ) ಹಾಗೂ ಮದ್ದಳೆಯಲ್ಲಿ ಅದನ್ನು ನುಡಿಸಿ ತೋರಿಸುವುದು ಅಷ್ಟು ಸ್ಪಷ್ಟ. ಮಂಚಿಯಲ್ಲೂ ಇಂತಹ ಕಮ್ಮಟ ನಡೆದಿತ್ತು. ಅಲ್ಲಿಯೂ ಭೀಮಣ್ಣ ತನ್ನ ಛಾಪನ್ನು ಬೀರಿದ್ದರು. ಈ ಕಾರಣದಿಂದಲೇ ಇವರೊಬ್ಬ ಸಂಪನ್ಮೂಲ ಹಿಮ್ಮೇಳವಾದಕರಾದರು.

ಕಟೀಲಿನಲ್ಲಿ ಯಕ್ಷಗಾನ ಪರಿಷತ್ತು ಮತ್ತು ಕಟೀಲು ಕ್ಷೇತ್ರದ ಜಂಟಿ ಯೋಜನೆ – ಹಿಮ್ಮೇಳ ಶಿಬಿರ. ನಾನು ಅದರ ಸಂಚಾಲಕ. ಒಂದು ತಿಂಗಳ ಕಾಲ ನಡೆದಿತ್ತು. ಆಗ ಗುರುಗಳಾಗಿದ್ದವರು ಭೀಮ ಭಟ್ಟರು. ಅಂತೆಯೇ ನಮ್ಮ ಹಿರಿಯ ಆತ್ಮೀಯರಾದ ಮಂದಾರ ಕೇಶವ ಭಟ್ಟರು. ಆಗಿನ ಅವರ ಪಾಠ ಕ್ರಮ, ಅವರ ವಿನೋದ ಸಂಭಾಷಣೆ ಅನುಭವ ಕಥನ ಅವಿಸ್ಮರಣೀಯ. ಆಸಕ್ತರಿಗೆ ಭಾಗವತಿಕೆ ಹಾಗೂ ಹಿಮ್ಮೇಳವಾದನವನ್ನು ಕಲಿಸುತ್ತಿದ್ದರು. ಮೊತ್ತಮೊದಲು ಬಾಯಿ ತಾಳವನ್ನು ವಿದ್ಯಾರ್ಥಿಗೆ ಕಂಠಪಾಠ ಮಾಡಿಸುವುದು ಅವರ ಕ್ರಮ. ಅದನ್ನು ತಪ್ಪಿಲ್ಲದೆ ಬಾಯಿಪಾಠ ಹೇಳಿದವನಿಗೆ ಮಾತ್ರ ಮದ್ದಳೆವಾದನವನ್ನು ಕಲಿಸುತ್ತಿದ್ದರು. ಬಾಯಿಯಲ್ಲಿ ಬಾರದಿದ್ದರೆ ಕೈಯಲ್ಲಿ ಬಾರಿಸಲು ಬರುವುದಿಲ್ಲವೆಂಬುದು ಅವರ ದೃಢ ನಿಲುಮೆ.

ಜೋಡಾಟಗಳಲ್ಲಿಯೂ ನೆಡ್ಲೆಯವರೊಂದಿಗೆ ಸ್ಪರ್ಧಿಸಿದ ಭೀಮಣ್ಣನದ್ದು 'ಗಟ್ಟಿ ಪೆಟ್ಟಿನ' ಚೆಂಡೆವಾದನ. ಪರಂಪರೆಯ ತಾಳ–ಲಯಗಳ ವಿಷಯದಲ್ಲಿ ರಾಜಿಯಾಗದ 'ಕಡ್ಡ' ವ್ಯಕ್ತಿತ್ವ ಅವರದ್ದು. ಅವರ ಜನ್ಮಶತಮಾನೋತ್ಸವವನ್ನು ಆಚರಿಸುತ್ತಿರುವುದು ಸೂಕ್ತವೂ ಹೌದು, ಸಂತೋಷದಾಯಕವೂ ಹೌದು.



# ದಿವಾಣದವರ ನೆನಪು ಸದಾ ಇದೆ

**ವಿದ್ವಾನ್ ಕೆ. ಬಾಬು ರೈ**
**ಮೃದಂಗ ಕಲಾವಿದರು**
ಬೆಳಿಂಜಗುತ್ತು,
ರಾಮದಾಸ ನಗರ ಅಂಚೆ,
ಕಾಸರಗೋಡು – 671 125

ನಾನು ಕಂಡ ಹಿರಿಯರು ನೆಡ್ಲೆ ನರಸಿಂಹ ಭಟ್ಟರು, ಅಡೂರು ಶಿವ ಮದ್ದಳೆಗಾರರು, ಕುದ್ರೆ ಕೂಡ್ಲು ರಾಮ ಭಟ್ಟರು, ಕುಂಡಂಗುಳಿ ರಾಮಕೃಷ್ಣ ಇವರೆಲ್ಲಾ ಯಕ್ಷಗಾನದ ರಂಗಸ್ಥಳವನ್ನು ಅತ್ಯಂತ ರಮ್ಯಗೊಳಿಸಿ ಜನಪ್ರಿಯರಾದದ್ದು– ನಮ್ಮ ಜಿಲ್ಲೆಯ ರಸಿಕರು ನಮ್ಮ ಮುಂದೆ ಹೇಳಿಕೊಂಡಿರುತ್ತಿದ್ದರು. ನಾನು ಮೈಸೂರಿಗೆ ಹೋಗಿ ಗುರು ವೆಂಕಟೇಶ ದೇವರಲ್ಲಿ ಕೆಲವರ್ಷ ಕಾಲ ಮೃದಂಗ ತರಬೇತಿ ಪಡೆದು ಊರಿಗೆ ಬಂದವನು. ಈ ಮೇಲೆ ಹೇಳಿದ ಚೆಂಡೆ ವಾದಕರಾದ ವಿದ್ವಾಂಸರಲ್ಲಿ ಗುರು ಭಾವನೆ ಇರಿಸಿ ಕೊಂಡಿದ್ದೆ. ಅವರುಗಳು ನನ್ನಲ್ಲಿ ಸಹೋದರನಂತೆ ವಾತ್ಸಲ್ಯದ ದೃಷ್ಟಿ ಇರಿಸಿದ್ದು, ನಾನು ಸದಾಕಾಲಕ್ಕೂ ಸ್ಮರಿಸಿಕೊಳ್ಳಬೇಕು.

ಅನಂತರದ ಸಾಲಿನಲ್ಲಿ ನಮ್ಮ ಅಣ್ಣ ಕೋಟೆಕಾರ್ ದೇರಣ್ಣ ರೈ, ಚೇವಾರ್ ರಾಮಕೃಷ್ಣ ಕಮ್ತಿ, ದಿವಾಣ ಭೀಮ ಭಟ್ರು, ಕಾಸರಗೋಡು ವೆಂಕಟ್ರಮಣ, ಜೀಡಿ ನಾರಾಯಣ, ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು ಮುಂತಾದ ಹಿಮ್ಮೇಳಗಾರರಿದ್ದರು. ಏನೇ ಆದರೂ ಯಕ್ಷಗಾನ ಜನಪ್ರಿಯತೆಯೆಂದು ಚಿತ್ರಿಸಬೇಕಾದರೆ ಚೆಂಡೆ ಮದ್ದಳೆಯ ಪಾತ್ರವೇನೆಂದು ಪಂಡಿತವರ್ಗದವರು ತಮ್ಮ ಮನೋಧರ್ಮದಲ್ಲಿ ಕಲ್ಪಿಸಿಕೊಳ್ಳುತ್ತಾರೆ. 1962–63ರ ಮಧ್ಯದಲ್ಲಿ ಒಂದು ಸಂಯೋಜನೆ ಮಂಗಳೂರು ನೆಹರು ಮೈದಾನದಲ್ಲಿ. ಧರ್ಮಸ್ಥಳ, ಕಟೀಲ್, ಕುಂಡಾವು ಇರಾ ಈ ಮೂರು ಮೇಳಗಳ ದೇವಿಮಹಾತ್ಮೆಯ ಜೋಡಾಟ. ಮೂರು ಚೆಂಡೆಯ ಪೀಠಿಕೆ ಆವರ್ತ ಲಯವಿನ್ಯಾಸಕ್ಕೆ ಮಂಗಳೂರು ಅಲುಗಾಡುತ್ತಿತ್ತು.

ಕಟೀಲ್ ಮೇಳದಲ್ಲಿ ನೆಡ್ಲೆಯವರು ಧರ್ಮಸ್ಥಳ ಮೇಳದಲ್ಲಿ ಚೇವಾರ್ ರಾಮಕೃಷ್ಣ ಕಮ್ತಿ. ಇರಾ ಸೋಮನಾಥೇಶ್ವರ ಮೇಳದಲ್ಲಿ ಈ ದಿವಾಣ ಭೀಮ ಭಟ್ಟರು. ಮಹಿಷಾಸುರ ಪ್ರವೇಶ. ಚೇವಾರ್ ಮತ್ತು ಭೀಮ ಭಟ್ಟರು ಇವರಿಬ್ಬರೂ ಹಾಯುವ ಕೋಣಗಳಾಗಿಯೇ ಕಾಣಿಸುತ್ತಿದ್ದರು. ಕಟೀಲ್ ಮೇಳದಲ್ಲಿ ಮಾನ್ಯ ರಾಮನೆಂಬವರು ಮಹಿಷಾಸುರ ಪ್ರವೇಶವಾಗಿ ಮುಂಚಿತವಾಗಿಯೇ ಮುಗಿಸಿದರು. ಧರ್ಮಸ್ಥಳ ಮೇಳದಲ್ಲಿ ಗಾಂಧಿ ಮಹಾಲಿಂಗರು, ಇರಾಮೇಳದಲ್ಲಿ ಕುಟ್ಯಪ್ಪನವರು ಈ ಎರಡು ಮಹಿಷಾಸುರರ ಸ್ಪರ್ಧೆ ರಂಗಸ್ಥಳ ಪ್ರವೇಶದಲ್ಲಿ ಅವ ಮೊದಲು ಹೋಗಲಿ ನಂತರ ನಾನು ಪ್ರವೇಶ ಮಾಡುತ್ತೇನೆಂದು ಇದ್ದರೂ ತರ್ಕದಲ್ಲಿ ಕಾದಿದ್ದರು. ಇರಾ ಮೇಳದ ಯಜಮಾನರು ಕಲ್ಲಾಡಿ ಕೊರಗ ಶೆಟ್ಟರು ಅಲ್ಲೇ ನಿಂತಿದ್ದರು. ತಮ್ಮ ಮೇಳದಲ್ಲಿ ದಿವಾಣ ಭೀಮ ಭಟ್ಟರು ಶೆಟ್ರನ್ನು ಕಣ್ಣರಳಿಸಿ ನೋಡಿದರು. ರಾಮಕೃಷ್ಣ ಕಮ್ತಿ ಮತ್ತೂ ಇವರು, ಸಮಪ್ರಾಯದವರಾಗಿದ್ದ ಇವರಿಬ್ಬರೂ ಚೆಂಡೆಯಲ್ಲಿ ಮಹಿಷಾಸುರನ ಪ್ರವೇಶಕ್ಕೆ ಅರ್ಧ ಗಂಟೆಗೂ ಹೆಚ್ಚು ಸಮಯ ಎಡೆಬಿಡದೆ ಚೆಂಡೆ ಬಾರಿಸುವುದು ನೋಡುತ್ತಿದ್ದ ಕೊರಗ ಶೆಟ್ರಿಗೆ ಬಿಸಿ ಏರಿತು. ಮಂಡಿ ಊರಿನಿಂತ ಕುಟ್ಯಪ್ಪನವರ ಹತ್ತಿರ ಹೋಗಿ "ಈ ಪೋಲಯ ಆಯೆ ಪೊಗ್ಗುಜೆಂಡ ಔಲೆ ಉಪ್ಪಡ್, ಆಯೆದಾದ? ಪೋದುದುಂತು" ಎಂದರು. ನಂತರದಲ್ಲಿ ಇಬ್ಬರ ಪ್ರವೇಶದಲ್ಲಿ ಮಹಿಷಾಸುರ ಗಾಂಧಿ ಮಹಾಲಿಂಗರ ಮತ್ತು ಕುಟ್ಯಪ್ಪನವರ ಎರಡು ಮಹಿಷಾಸುರ ಏಕಕಾಲಕ್ಕೆ ನೋಡುವ ಸಂದರ್ಭ ಈ ಚೆಂಡೆ ವಾದಕರ ಹುರುಪಿನ ಪ್ರದರ್ಶನ ಆ ದಿವಸದ ಜೋಡಾಟದಲ್ಲಿ ನಾನು ದಿವಂಗತ ಕೊರಗ ಶೆಟ್ರ ಜೊತೆಗೆ ಚೌಕಿಯಲ್ಲಿ ಇದ್ದುಕೊಂಡು ನೋಡಿದ ದೃಶ್ಯವಾಗಿತ್ತು.

ನಂತರದ ದಿನಗಳಲ್ಲಿ ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು ನನ್ನಲ್ಲೇ ಇದ್ದುಕೊಂಡು ಕೆಲವಂಶಗಳನ್ನು ಕಲಿತು ಯಕ್ಷಗಾನ ರಂಗದಲ್ಲಿ ಪ್ರಸಿದ್ಧಿಗೆ ಬಂದರು. ಈ ಚೆಂಡೆ ವಾದಕರ ಸಾಲಿನಲ್ಲಿ ದಿವಾಣರು ಸಮ ವಿಷಮದ ಬಗ್ಗೆಯೂ ಸರಿಯಾದ ಅರಿವು ಹೊಂದಿದ್ದರು. ಸಂಶೋಧನಾತ್ಮಕವಾಗಿ ಆಸಕ್ತಿ ಹೊಂದಿದ್ದರು. ಇತರ ಕಲಾವಿದರೊಡನೆ ಸೌಜನ್ಯಶೀಲ ರಾಗಿರುತ್ತಿದ್ದರು. ಒಂದು ಸಂದರ್ಭದಲ್ಲಿ ಮಾಣಿ ಕಲ್ಲಡ್ಕದಲ್ಲಿ ಒಂದು ಕಾರ್ಯಕ್ರಮ. ದಿವಂಗತ ಕೀರ್ತಿಶೇಷ ಶಂಕರ ನಾರಾಯಣ ಸಾಮಗರಿಗೆ ಸನ್ಮಾನ. ಹರಿದಾಸ ಶೇಣಿ ಗೋಪಾಲಕೃಷ್ಣ ಭಟ್ಟರಿಂದ ಸನ್ಮಾನಿತರ ಬಗ್ಗೆ ಅಭಿನಂದನೆ. ಅನಂತರ ಯಕ್ಷಗಾನ ತಾಳಮದ್ದಳೆ. ಶ್ರೀ ಬಲಿಪ ನಾರಾಯಣ ಭಾಗವತರು ಹಿಮ್ಮೇಳಗಾರರಾಗಿ, ನಾನು ಮೃದಂಗ, ದಿವಾಣದವರು ಚೆಂಡೆ–ಹೀಗೊಂದು ಸುದಿನ. ಮಾಣಿಯಲ್ಲಿ ನಾವಿಬ್ಬರೂ ಒಂದೇ ವೇದಿಕೆಯಲ್ಲಿ ಸೇವೆ ಸಲ್ಲಿಸಿದ ಸುದಿನವಾಗಿತ್ತು.

ಯಕ್ಷಗಾನ, ಭಜನೆ, ಭರತನಾಟ್ಯ, ಹರಿಕಥೆ, ಕಥಕ್ಕಳಿ, ನೃತ್ಯ, ನಾಟಕ ಈ ಎಲ್ಲಾ ವೇದಿಕೆಯಲ್ಲೂ ವೃತ್ತಿಜೀವನ ಸಾಗಿಸಿದ್ದು, ಶಾಸ್ತ್ರೀಯ ಸಂಗೀತದ ಕ್ಷೇತ್ರದಲ್ಲೂ ನಮ್ಮ ಊರಿನ ಮತ್ತು ಚೆನ್ನೈ, ಬೆಂಗಳೂರು, ಮೈಸೂರು, ತಿರುವನಂತರಪುರ, ಕೊಚ್ಚಿ ಈ ಪ್ರದೇಶದ ಸಂಗೀತಗಾರರ ಜೊತೆಗೆ ಬೆರೆತು ಸಾರ್ಥಕ ಜೀವನದಲ್ಲಿದ್ದ ನೆನಪನ್ನು ಮೆಲುಕು ಹಾಕುತ್ತಾ ಅಂತಹ ಒಡನಾಡಿಗಳಲ್ಲಿ ಓರ್ವ ಸಜ್ಜನನಾಗಿ ಸ್ನೇಹಿತರಾಗಿದ್ದ ಶ್ರೀ ದಿವಾಣರ ಬಗ್ಗೆ ಕೆಲವು ಮಾತುಗಳನ್ನು ಮಾತ್ರ ಬರೆದು ವಿರಮಿಸುತ್ತೇನೆ.

# ಭಾವಜ್ಞ ಮದ್ದಳೆಗಾರ

**ಡಾ. ಕೋಳ್ಯೂರು ರಾಮಚಂದ್ರ ರಾವ್**
**ಕಲಾವಿದರು**
**'ಕಲಾಪ್ರಸಾದ', ಇನ್ನಂಜೆ**
**ಕಟಪಾಡಿ, ಉಡುಪಿ ಜಿಲ್ಲೆ**

ತೆಂಕತಿಟ್ಟು ಯಕ್ಷಗಾನ ರಂಗದಲ್ಲಿ ತಮ್ಮ ವಿಶಿಷ್ಟ ಜ್ಞಾನ ಮತ್ತು ವಾದನದಿಂದ ಶ್ರೇಷ್ಠರಾಗಿ ಮೆರೆದ ಐವರು ಕೀರ್ತಿಶೇಷ ಹಿಮ್ಮೇಳ ವಾದಕರು – ಅಡೂರು ಶಿವ ಮದ್ದಳೆಗಾರರು, ಕುದ್ರೆಗೂಡ್ಲು ರಾಮಭಟ್ಟರು, ನೆಡ್ಲೆ ನರಸಿಂಹ ಭಟ್ಟರು, ದಿವಾಣ ಭೀಮ ಭಟ್ಟರು, ಮತ್ತು ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು. ಈ ಐವರಲ್ಲಿ ಅಪೂರ್ವ ವೈಶಿಷ್ಟ್ಯಗಳಿದ್ದುವು. ಈ ಪೈಕಿ ವಿಶಿಷ್ಟ ಪ್ರಯೋಗಗಳ ವಿಷಮ ಲಯ ವಾದನದಲ್ಲಿ ಭೀಮಭಟ್ಟರಿಗೆ ಪ್ರಖ್ಯಾತಿ ಬಂತು. ಅಂತಹುದೆ ಪ್ರಯೋಗಗಳಿಗೆ ಆಗಲೇ ಹೆಸರಾಗಿದ್ದವರು ಕೆಮ್ಮಣ್ಣು ನಾರ್ಣಪ್ಪಯ್ಯ ನವರು. ಈ ಇಬ್ಬರು – ಕೆಮ್ಮಣ್ಣಿನವರು, ದಿವಾಣರು, ಈ ಕಾರಣ ಕ್ಕಾಗಿಯೂ, ವ್ಯಕ್ತಿತ್ವದಿಂದಲೂ ತೆಂಕುತಿಟ್ಟಿನ ಶಕಪುರುಷ ಭಾಗವತ ರಾದ ದೊಡ್ಡ ಬಲಿಪರ ಅಚ್ಚುಮೆಚ್ಚಿನ ವಾದಕರಲ್ಲಿ ಈರ್ವರು.

ವಿಷಮ ನಡೆಯಲ್ಲಿ ಬಾರಿಸುವಾಗ ಸಮತೆಯಲ್ಲಿ ಇರುವುದ ಕ್ಕಿಂತ ಹೆಚ್ಚಿನ ಏಕಾಗ್ರತೆ ಇರಲೇಬೇಕು ತಾನೆ? ಭೀಮಭಟ್ಟರು ಬಹಳಷ್ಟು ಜಾಗೃತರಾಗಿದ್ದು, ಕೈ, ಮೈ, ಮುಖದಲ್ಲಿ ಸ್ವಲ್ಪ ಮಾತ್ರವೂ ಚೇಷ್ಟೆಯ ವಿಕಾರವಿಲ್ಲದೆ ಗಂಭೀರವಾಗಿ ಗೌರವವನ್ನು ಕಾಪಾಡಿ ಕೊಳ್ಳುತ್ತಿದ್ದರು. ಈ ವಿಷಮತೆಯ ಪ್ರತಿಭೆಯಿಂದ ಪ್ರೇಕ್ಷಕರನ್ನು ತನ್ನ ಕಡೆಗೇ ಆಕರ್ಷಿಸಬಹುದು, ಬೆರಗನ್ನು ಹುಟ್ಟಿಸಬಹುದು, ಜೋಡಾಟಗಳಲ್ಲಿ, ಪೀಠಿಕೆಯಲ್ಲಿ ಹಾಗೂ ಪ್ರಾತ್ಯಕ್ಷಿಕೆಯಲ್ಲಿ ಇದು ಮೌಲ್ಯಾಧಾರಿತವೆನಿಸಬಹುದು. ಆದರೆ, ರಂಗದ ರಸವತ್ತಾದ ಸನ್ನಿವೇಶಗಳಲ್ಲಿ, ಭಾಗವತರ ತಲ್ಲೀನತೆಗೂ ತೊಡಕಾಗಿ, ಪಾತ್ರಧಾರಿಯ ಮನೋಧರ್ಮಕ್ಕೂ ತಡೆಯಾಗಿ, ಪ್ರೇಕ್ಷಕರ ಏಕಾಗ್ರತೆಗೂ ಭಂಗವಾಗುವುದಿಲ್ಲವೇ? ಎಂಬ ಹಾಗೆ. ವಿದ್ವಾಂಸರ

ವಿಮರ್ಶಾತ್ಮಕವಾದ ಟೀಕೆಗೂ ಇದು ಕಾರಣವಾಗಿತ್ತು. ಹಾಗೆಂದು ಭೀಮಭಟ್ಟರನ್ನು "ರಸಜ್ಞ"ರಲ್ಲವೆಂದು ಹೇಳಿದರೆ ಮಹಾಪರಾಧವಾದೀತು.

ಪ್ರತಿಯೊಂದು ಪಾತ್ರದ ಔಚಿತ್ಯವೇನು? ಪಾತ್ರ ಗೌರವವೇನು? ಪದ್ಯದ ಭಾವನೆ ಏನು? ಇದನ್ನೆಲ್ಲಾ ಇವರು ಚೆನ್ನಾಗಿ ಬಲ್ಲವರು. ಭಾಗವತ ಹಾಡುಗಾರಿಕೆಯೇ ಪ್ರಧಾನವಾಗಿ, ಚೆಂಡೆ, ಮದ್ದಳೆಗಳ ನಾದವು, ಹಾಡಿಗಿಂತ ಗೌಣವಾಗಿರಬೇಕೆಂಬುದನ್ನು ಅವರೇ ಹೇಳುತ್ತಿದ್ದರು. ಮಾತ್ರವಲ್ಲದೆ, ಪಾತ್ರಧಾರಿಯ ಮಾತಿನ ಕಡೆಗೆ ಇವರು ವಿಶೇಷವಾದ ಗಮನ ಹರಿಸುತ್ತಿದ್ದರು. ಕರುಣ ರಸದಲ್ಲಿ ಪಾತ್ರಧಾರಿಯು ಭಾವನಾತ್ಮಕವಾಗಿ ಮಾತಾಡಿ, ಪ್ರೇಕ್ಷಕರ ಮೇಲೆ ಪರಿಣಾಮವನ್ನುಂಟು ಮಾಡಿದಾಗ, ಇವರೂ ಸ್ಪಂದಿಸುತ್ತಿದ್ದರು. ಇವರಲ್ಲಿ ಸಾಹಿತ್ಯಜ್ಞಾನ ಚೆನ್ನಾಗಿತ್ತು. ನಮ್ಮೊಂದಿಗೆ ಇವರು ಮೇಳದಲ್ಲಿದ್ದಾಗ ರಾಮದಾಸ ಸಾಮಗರೊಡನೆ, ಬಿಡಾರದಲ್ಲಿ ಬಿಡುವಿದ್ದಾಗ ಹಾಗೂ ದಾರಿಯಲ್ಲಿ ನಡೆದು ಹೋಗುವಾಗ, ಅರ್ಥದ ಕುರಿತಾಗಿ (ಸಲುಗೆಯಿಂದ) ಚರ್ಚಿಸುತ್ತಿದ್ದರು. ಬೇಕಾದ ಪ್ರಶ್ನೆಗಳನ್ನು ಕೇಳಿ, ಉತ್ತರವನ್ನು ತಿಳಿದು, ಸಮಾಧಾನ ಮಾಡಿಕೊಳ್ಳುತ್ತಿದ್ದರು. ತಾಳಗಳ ಕುರಿತಾಗಿಯೂ, ಅವರಲ್ಲಿ ಜಿಜ್ಞಾಸೆಯನ್ನು ನಡೆಸುತ್ತಿದ್ದರು. ಇವರ ಪ್ರತಿಭೆಯನ್ನು ಗುರುತಿಸಿದ ನರಸಿಂಹ ಭಟ್ಟರೂ ಸಹ ಇವರಲ್ಲಿ ಕೆಲವು ನಡೆಗಳ ಕುರಿತು ಸಮಾಲೋಚನೆ ನಡೆಸಿದ್ದುಂಟು.

ಭೀಮ ಭಟ್ಟರಲ್ಲಿ ಸಾಹಿತ್ಯ ಜ್ಞಾನ ಚೆನ್ನಾಗಿದ್ದುದರಿಂದ, ಭಾವನಾತ್ಮಕವಾಗಿ ಹಾಡುವ ಭಾಗವತರ ಪದ್ಯದ ಸಾಹಿತ್ಯಕ್ಕೆ ಸರಿಯಾಗಿ, ಒತ್ತುಕೊಟ್ಟು ಮದ್ದಳೆ ಬಾರಿಸುವ ಪ್ರತಿಭೆಯನ್ನು ಇವರ ವಾದನದಲ್ಲಿ ನಾವು ಕಾಣುತ್ತಿದ್ದೆವು. ರಾತ್ರಿಯ ಎಂಟು ತಾಸಿಗೆ ಆರಂಭವಾಗಿ ಬೆಳಗಿನ ಆರು ತಾಸಿನ ತನಕ ನಡೆಯುವ ಆಟದಲ್ಲಿ, ಕಥಾರಂಭದ ಮೊದಲು ಅರ್ಧ ತಾಸು, "ಪೀಠಿಕೆ" ಎಂಬ ಒಂದು ಪ್ರಯೋಗ ಪದ್ಧತಿಯಿದೆ. ಇದರಲ್ಲಿ ಪ್ರಧಾನವಾಗಿ ಏಳೂ ತಾಳಗಳ ವೈವಿಧ್ಯ ಪ್ರದರ್ಶನವಿದೆ. ಈ ಅರ್ಧತಾಸಿನ ಪೀಠಿಕೆಯ ವೈವಿಧ್ಯವನ್ನು ಇವರು, ವಿಷಮ ವಿನ್ಯಾಸದಲ್ಲೆ ಬಾರಿಸುತ್ತಿದ್ದರು. ಖಚಿತವಾದ ಲಯ ಜ್ಞಾನವಿಲ್ಲದೆ ಯಾವ ಭಾಗವತನಿಗೂ, ಜಾಗಟೆ (ತಾಳ) ಹಿಡಿಯುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಈ ಪೀಠಿಕಾ ಪದ್ಧತಿ ಸಾಮಾನ್ಯವಾಗಿ ಮದ್ಲೆಗಾರನ ಪ್ರತಿಭೆಯ ಪ್ರದರ್ಶನಕ್ಕೆ ಎಂದರೂ ತಪ್ಪಾಗಲಾರದು.

ಒಮ್ಮೊಮ್ಮೆ ಮೇಳದ ಮದ್ಲೆಗಾರರು ರಜೆ ಮಾಡಿದಾಗ ಇವರು ಅತಿಥಿ ಕಲಾವಿದರಾಗಿ ಬರುತ್ತಿದ್ದರು. ಆಗ ಯುವ ಕಲಾವಿದರೆಲ್ಲ ಮಾತಾಡಿಕೊಳ್ಳುವದಿತ್ತು. "ಈವತ್ತು ಭೀಂಭಟ್ರು ಬಂದಿದ್ದಾರೆ. ಅವರ ಚೆಂಡೆಯಲ್ಲಿ ನಾವು ಕುಣಿಯುವುದು ಹೇಗೆ ಮಾರಾಯ? "ಹಾಗೆ ಸ್ವಲ್ಪ ಹೆದರಿದವರಾಗಿ ಮಾತಾಡುತ್ತಿದ್ದರು. ಇದನ್ನು ಕೇಳಿದ ಭೀಮಭಟ್ಟರು, ಆ ಮಾತಿಗೆ ಉತ್ತರವಾಗಿ, ಹೀಗೆ ಹೇಳುತ್ತಿದ್ದರು. "ಅವನು ನನ್ನ ಚೆಂಡೆಯಲ್ಲಿ ಕುಣಿಯುವುದಕ್ಕೆ ಜಾಗ ಸಾಲದು ಅವನು ರಂಗಸ್ಥಳದಲ್ಲೇ ಕುಣಿಯಲಿ' ಹೀಗೆ ಅರ್ಥಪೂರ್ಣವಾದ, ಚಟಾಕಿಯನ್ನು ಹಾರಿಸುತ್ತಿದ್ದರು. ಈ ಯುವ ಕಲಾವಿದರ ಭಯಕ್ಕೆ ಕಾರಣವೆಂದರೆ ಮೇಳದ ಖಾಯಂ ಮದ್ಲೆಗಾರರಾದವರು, ತಾಳ ತಪ್ಪಿ ಕುಣಿದರೂ ಅವರಿಗೆ ಬೇಕಾದಂತೆ ಬಾರಿಸಿ, ಅವನ ತಪ್ಪು ಪ್ರೇಕ್ಷಕರಿಗೆ ತಿಳಿಯದಂತೆ, ಸರಿಪಡಿಸಿಕೊಳ್ಳುತ್ತಿದ್ದರು. ಈ ಅತಿಥಿ ಮದ್ದಳೆಗಾರರಾಗಿ ಬಂದವರಿಗೆ ಆ ದಾಕ್ಷಿಣ್ಯ ಪ್ರವೃತ್ತಿ ಇರುವುದಿಲ್ಲ. "ತಾಳ ಬದ್ಧವಾಗಿ ಕುಣಿಯ ಬೇಕೇ ಹೊರತು, ಕುಣಿದದ್ದಕ್ಕೆಲ್ಲ ತಾಳ ಬಾರಿಸಬಾರದು" ಈ ಅಪ್ರಿಯವಾದ ಸತ್ಯವನ್ನು

ಪಾಲಿಸಿಕೊಂಡು ಬಂದವರು ಕೆಲವೇ ಜನರು. ಒಬ್ಬರು ಕುದ್ರೆಗೋಡ್ಲು ರಾಮಭಟ್ಟರು, ಮತ್ತೊಬ್ಬರು ಭೀಮ ಭಟ್ಟರು. ಬಲಿಪ ಭಾಗವತರಂಥ ಭಾಗವತರು ಹಾಡಿದ ವೀರ ರಸದ ಪದ್ಯಗಳ ಗತಿಯನ್ನು ರಾಮ ಭಟ್ಟರು, ಹಾಗೆ ನರಸಿಂಹ ಭಟ್ಟರೇ ಮೊದಲಾದವರು. ಸ್ವಲ್ಪ ಮಾತ್ರ ಹಿಂದೆ, ಮುಂದೆ ಮಾಡುತ್ತಿದ್ದ (ಪಾತ್ರಧಾರಿಯೂ, ಅದೇ ಗತಿಯಲ್ಲಿ ಕುಣಿಯಬೇಕು. ಅದೇ ಗತಿಯಲ್ಲಿ ಅವನ್ನೂ ಹೇಳಬೇಕು. ಇದು ಯಕ್ಷಗಾನದ ನಾಟ್ಯದ ಸೂತ್ರ). ಇದೇ ಸಾಲಿಗೆ ಸೇರಿದವರು ನಮ್ಮ ದಿವಾಣದವರು. ಇಲ್ಲಿ ನ್ಯಾಯವನ್ನು ಬಿಟ್ಟು ರಿಯಾಯಿತಿ ತೋರಿದಲ್ಲಿ ನಾವು ಯುವಕರನ್ನು ತಪ್ಪುದಾರಿಗೆ ಎಳೆದಂತಾಗುತ್ತದೆ ಎಂಬುದು ಇವರ ನಿರ್ದಾಕ್ಷಿಣ್ಯದ ನ್ಯಾಯ.

ಈ ನ್ಯಾಯದಿಂದಲೇ ಕುದ್ರೆಗೋಡ್ಲು ರಾಮಭಟ್ಟರು, ಮೇಳದಿಂದ ನಿವೃತ್ತರಾಗುವುದಕ್ಕೆ ಕಾರಣವಾಯಿತು. ಶ್ರದ್ಧಾವಂತನಾದ ಕಲಾವಿದನೊಬ್ಬನ ತನ್ನ ಕಲೆಗೆ ಅಪಚಾರವಾದಲ್ಲಿ ಸಹಿಸುವುದಿಲ್ಲ ಎಂಬುದಕ್ಕೆ ಈ ನಡತೆ ಆದರ್ಶವಾಗಿದೆಯೆಂದು ನಾವು ಭಾವಿಸಬಹು ದಲ್ಲವೆ?

ಮತ್ತೊಮ್ಮೆ ಉಡುಪಿ, ಎಮ್. ಜಿ. ಎಮ್. ಕಾಲೇಜಿನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದ ಪ್ರಾತ್ಯಕ್ಷಿಕೆಯ ಕಾರ್ಯಕ್ರಮದಲ್ಲಿ ಯಕ್ಷಗಾನದ (ತೆಂಕುತಿಟ್ಟಿನ) ಸಭಾ ಲಕ್ಷಣದ ಮುಖ್ಯ ಸ್ತ್ರೀ ಪಾತ್ರವನ್ನು ನಾನು (ಕೋಳ್ಯೂರು) ಕುಣಿಯಬೇಕಾಗಿ ಬಂತು. ಆ ಕುಣಿತದಲ್ಲಿ ಬಂದ ಒಂಭತ್ತು ಮುಕ್ತಾಯದ ಹೆಜ್ಜೆಗಾರಿಕೆಯಿದೆ. ಅದು ನನಗೆ ತಿಳಿಯದೆ ತಬ್ಬಿಬ್ಬಾದೆ. ಆಗ, ಮಧ್ಯೆ ನಿಲ್ಲಿಸಿ ತಾಳ ಹಾಕಿ ಕುಣಿತವನ್ನು ತೋರಿಸಿ ಕೊಟ್ಟವರು ಈ ಗುರುಗಳೆಂಬುದನ್ನು ನಾನು ಮರೆಯಬಾರದಲ್ಲವೆ?

ಇನ್ನು, ಯಕ್ಷಗಾನ ಕಲಾವಿದರ ಸಾಲಿನಲ್ಲಿ ಯಾವುದೇ ದುರ್ವ್ಯಸನ, ದುಶ್ಚಟಗಳಿಲ್ಲದ ಒಬ್ಬ ಚಾರಿತ್ರ್ಯ ಶುದ್ಧತೆಯ ಕಲಾವಿದರಿವರು. ಸಂದು ಹೋದದನ್ನು ನೆನಪಿಸಿಕೊಳ್ಳುವುದೇ ಇಂದಿನವರಿಗೆ ಸಮಾಧಾನದ ಸಂತೋಷವೇ ಹೊರತು ಮತ್ತೇನುಳಿದಿದೆ?



# ಚೆಂಡೆಮದ್ದಳೆ ವಿದ್ವಾಂಸ ದಿವಾಣ ಭೀಮ ಭಟ್ಟರು

ಮದ್ದೆಗಾರ
**ಬಿ. ಗೋಪಾಲಕೃಷ್ಣ ಕುರುಪ್**
**ಚೆಂಡೆ ಮದ್ದಳೆಗಾರರು, ಯಕ್ಷಗಾನ ಗುರು**
ನೀಲೇಶ್ವರ, ಕೇರಳ

ದಿವಾಣ ಭೀಮ ಭಟ್ಟರು ನನ್ನ ಹಿರಿಯ ಒಡನಾಡಿ. ಗುರು ಸಮಾನರೆಂದು ಹೇಳಲು ಹೆಮ್ಮೆ ಪಡುತ್ತೇನೆ. ಆಟ ಕೂಟಗಳಲ್ಲಿ, ಕಮ್ಮಟಗಳಲ್ಲಿ ಹಲವು ಕಡೆ ನಾವು ಒಂದಾಗಿ ಹಿಮ್ಮೇಳ ಬಾರಿಸಿದ್ದೇವೆ. ಅವರು ಪ್ರೋತ್ಸಾಹಿಸಿದ್ದಾರೆ.

ಪಾಣೆಮಂಗಳೂರಿನಲ್ಲಿ ಯಕ್ಷಗಾನ ಪರಿಷತ್ ವತಿಯಿಂದ ಜರಗಿದ ಕಮ್ಮಟ 1984ರಲ್ಲಿ ಕಟೀಲಿನಲ್ಲಿ ಮುಳಿಯ ಮಹಾಬಲ ಭಟ್ಟರು ಮತ್ತು ಕೋಟೆಕಾರಿನಲ್ಲಿ ಪ್ರೊ. ಅಮೃತ ಸೋಮೇಶ್ವರರ ಹಿರಿತನದಲ್ಲಿ ನಿರ್ದೇಶಿಸಿದ ಕಮ್ಮಟಗಳಲ್ಲಿ ಅನೇಕ ಹಿರಿ ಕಿರಿಯ ಕಲಾವಿದರೂ, ವಿದ್ವಾಂಸರೂ, ಗುರುಗಳೂ ಭಾಗವಹಿಸಿದ್ದರು. ಅವುಗಳಲ್ಲಿ ಪಾಲ್ಗೊಳ್ಳುವ ಸುಯೋಗ ನನಗೂ ಒದಗಿತ್ತು. ಆಗ ದಿವಂಗತ ಭೀಮ ಭಟ್ಟರ ಜತೆ ಹಲವು ದಿನ ನಿಕಟವಾದ ಒಡನಾಟವಾಯಿತು. ಅಲ್ಲಿ ಹಲವು ಸಂದರ್ಭಗಳಲ್ಲಿ ನನಗೆ ಅವಕಾಶ ನೀಡಿ, ನನ್ನನ್ನು ಮುಂದೆ ಮಾಡಿ, ಪದ್ಯ ಹಾಡಿಸಿ ವಾದನ ಮಾಡಿಸಿದ್ದಾರೆ. ತಾಳಗಳ ಮಾಹಿತಿ ಕೊಡಿಸಿ ಎಲ್ಲರ ಮೆಚ್ಚುಗೆಗೆ ನಾನು ಪಾತ್ರನಾಗುವಂತೆ ಮಾಡಿದ್ದಾರೆ. ಅದೇ ರೀತಿ 1995ರಲ್ಲಿ ಸುಳ್ಯದಲ್ಲಿ ತೆಂಕು ತಿಟ್ಟು ಯಕ್ಷಗಾನ ವೇದಿಕೆ ಪರವಾಗಿ ಡಾ. ಚಂದ್ರ ಶೇಖರ ದಾಮ್ಲೆ ಅವರ ನೇತೃತ್ವದಲ್ಲಿ ಜರಗಿದ ಗೋಷ್ಠಿ. ಅದರಲ್ಲೂ ನಾವು ಅನೇಕರು ಸೇರಿದ್ದೆವು. ಅಲ್ಲೂ ದಿವಾಣರು ನನ್ನಿಂದ ಮಾಹಿತಿಗಳನ್ನು ತಿಳಿಯಪಡಿಸುವಂತೆ ಮಾಡಿ, ವಾದನಕ್ಕೂ ಅವಕಾಶ ನೀಡಿದರು.

1990. ಕಟೀಲಿನಲ್ಲಿ ಶ್ರೀಮತಿ ಡಾ। ಮಾರ್ತಾ ಆಸ್ಟನ್ ಇವರ ನಿರ್ದೇಶನದಲ್ಲಿ ಜರಗಿದ, ಬಣ್ಣಗಾರಿಕೆ, ಕಮ್ಮಟ ಮತ್ತು ಯಕ್ಷಗಾನ

ಪ್ರದರ್ಶನದಲ್ಲಿ ಇಂದ್ರಜಿತು ಕಾಳಗ ಪ್ರಸಂಗದ ಪ್ರದರ್ಶನ ಜರಗಿತು. ಶ್ರೀ ಬಲಿಪ ನಾರಾಯಣ ಭಾಗವತರ ಭಾಗವತಿಕೆ. ಶ್ರೀ ಭೀಮ ಭಟ್ಟರವರ ಮದ್ದಲೆವಾದನ. ಬಿ. ಗೋಪಾಲಕೃಷ್ಣ ಕುರುಪ್‌ರ ಚೆಂಡೆವಾದನ. ಭೀಮ ಭಟ್ಟರ ಜೊತೆ ಚೆಂಡೆ ವಾದನದಲ್ಲಿ ಭಾಗವಹಿಸಿದ ಆ ದಿನ ಅವಿಸ್ಮರಣೀಯ. ಆಮೇಲೆ ಘನ ವಿದ್ವಾಂಸ ಮದ್ದಳೆಗಾರರಾದ ದಿವಾಣ ಶ್ರೀ ಭೀಮ ಭಟ್ಟರನ್ನು ಕಾಣುವ ಭಾಗ್ಯ ನನಗೆ ಇಲ್ಲವಾಯಿತು.

ಶ್ರೀಯುತರ ನೆನಪು ಚಿರಂತನ. ಯಕ್ಷಗಾನಕ್ಕೆ ಅವರ ಕೊಡುಗೆ ವಿಶೇಷವಾದುದು.



# ಚೆಂಡೆ–ಮದ್ದಳೆಗಳ ಪ್ರಚಂಡ ದಿವಾಣ ಭೀಮ ಭಟ್ಟರು

**ಕುಂಬ್ಳೆ ಸುಂದರ ರಾವ್**
**ಕಲಾವಿದ, ಮಾಜಿ ಶಾಸಕ**
'ಯಕ್ಷಾನುಗ್ರಹ' ಪಂಪುವೆಲ್
ಮಂಗಳೂರು – 575 002

ಯಾವುದೇ ಕಲಾಪ್ರಕಾರದಲ್ಲಿಯಾದರೂ, ಕಲಾವಿದನೊಬ್ಬ ಬೆಳಗುವುದು ತನ್ನದೇ ಪ್ರತಿಭೆಯಿಂದ ಎಂದು ಅಹಂಕರಿಸುವ ಹಾಗಿಲ್ಲ. ತಾನು ನಡೆದು ಬಂದ ದಾರಿಯನ್ನು, ಸಾಧಿಸಿದ ಅರ್ಹತೆಯನ್ನು ವರ್ಣಿಸುವ ಹೊತ್ತಿಗೆ ನನ್ನನ್ನು ಕೈಹಿಡಿದು ನಡೆಸಿದ ವ್ಯಕ್ತಿಗಳನ್ನು ನೆನಪಿಸುವಲ್ಲಿ ಒಂದೆರಡು ಹಿರಿಯರ ಹೆಸರನ್ನಾದರೂ ಹೇಳದೆ ಇರುವುದಕ್ಕೆ ಅವನಿಗೆ ಸಾಧ್ಯವಾಗುವುದಿಲ್ಲ. ಅದರಲ್ಲೂ ಅಂತಹ ಕಲಾವಿದರನ್ನು ಹೆಸರಿಸುವಾಗ ನನಗೆ ಮಾತ್ರ ಅವರ ಮಾರ್ಗದರ್ಶನ ಸಿಕ್ಕಿದ್ದು ಇನ್ಯಾರಿಗೂ ಇಲ್ಲ ಎಂಬ ಮಾತು ಬರುವುದೂ ಉಂಟು. ಇನ್ನು ಕೆಲವರಲ್ಲಿ ನನಗೆ ಮಾತ್ರವಲ್ಲ ನನ್ನಂತಹ ಹಲವರಿಗೆ ಅವರ ಮಾರ್ಗದರ್ಶನ ಸಿಕ್ಕಿದಂತೆ, ಉಳಿದವರಿಗೆ ಯಾರಿಗೂ ಸಿಕ್ಕಿಲ್ಲ ಎಂದು ವಿವರಿಸುವುದೂ ಉಂಟು. ಯಾರೋ ಒಬ್ಬ ಎಳೆಯ ಕಲಾವಿದನನ್ನು ತಿದ್ದಿ ತೀಡಿ ಸಂತೋಷಪಡುವ ಹಿರಿಯರಿಗೆ, ತನ್ನಲ್ಲಿ ಕೇಳಿದರೆ ಮಾತ್ರ ಮಾರ್ಗದರ್ಶನ ಮಾಡುವುದು, ಇಲ್ಲದಿದ್ದರೆ ಇಲ್ಲ ಎಂಬ ಧೋರಣೆಯು ಇರುತ್ತದೆ. ಆದರೆ ಅವರಿವರೆಂಬ ಭೇದವಿಲ್ಲದೆ ತನಗೆ ಕಂಡ ಕೊರತೆಗಳನ್ನು ಹೇಳಿ ಅದನ್ನು ನಿವಾರಿಸಿ ಅದು ಫಲಪ್ರದವಾಯಿತು ಎಂದು ಸಮಾಧಾನ ಪಡುವ ಅಪರೂಪದ ವ್ಯಕ್ತಿಗಳು ಇದ್ದಾರೆ. ಅಂತಹವರು ಕೀರ್ತಿ ಕಾಮಿಗಳಲ್ಲದ, ಹೃದಯವಂತರೂ, ಕಲಾಪ್ರಿಯರೂ ಆಗಿ ನೆನಪಿನಲ್ಲಿ ಉಳಿಯುತ್ತಾರೆ.

ಅಂತಹ ಸಜ್ಜನಿಕೆಯ ಹಿರಿಯ ಕಲಾವಿದರ ಅಪರೂಪದ ಸಾಲಿನಲ್ಲಿ ಸಿಗುವವರು ದಿವಾಣ ಭೀಮ ಭಟ್ಟರು. ಅವರು ಚೆಂಡೆ

ಮದ್ದಳೆಗಳ ಮಧ್ಯದಲ್ಲಿ ಕೀರ್ತಿಯನ್ನು ಪಡೆದವರಾದರೂ ಅವರಿಗೆ ಆಸಕ್ತಿಯಿದ್ದುದು ಸಮಗ್ರ ಯಕ್ಷಗಾನದ ಮೇಲೆ ಎಂಬುದಂತೂ ಹೇಳಲೇ ಬೇಕಾದ ವಿಷಯವಾಗಿದೆ. ಈಗ ಅವರು ನಮ್ಮ ಜೊತೆಯಲ್ಲಿ ಇಲ್ಲದಿದ್ದರೂ ಅವರಿದ್ದ ಕಾಲದ ನೆನಪು ಮಾಡಿದರೆ, ಆ ವಿಶಾಲ ಹೃದಯಿಯ ಉತ್ತಮ ಗುಣಗಳನ್ನು ಗಣಿಸಿ ಹೇಳಬೇಕೆನಿಸುತ್ತದೆ. ಅಂದಿನ ದಿನಗಳಲ್ಲಿ ನೆಡ್ಲೆ ನರಸಿಂಹ ಭಟ್ಟರು, ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು, ಮುಂತಾದ ಘಟಾನುಘಟಿಗಳು ತಮ್ಮ ಅನುಭವಗಳನ್ನು, ಅಭಿಪ್ರಾಯಗಳನ್ನು ಕೇಳಿದವರ ಮನಸ್ಸಿಗೆ ನಾಟುವಂತೆ ಹೇಳಿಕೊಡುವುದಕ್ಕೆ ಸಮರ್ಥರಿದ್ದರು. ನರಸಿಂಹ ಭಟ್ಟರಂತೂ ಕೇಳುವವರಿಗೆ ನಾಟುವಂತೆ ಪುಳಕಗೊಳ್ಳುವಂತೆ ತಿಳಿಸಿಕೊಡುತ್ತಿದ್ದರು. ಅವರು ಯಾರಿಗೆ ಮಾರ್ಗದರ್ಶನ ಮಾಡಿದರೂ ಅವರಿಗೆ ಮಾತ್ರವಲ್ಲ ಉಳಿದವರಿಗೆ ಸಹ ಸಂಗ್ರಾಹ್ಯ ಸಂಗತಿಗಳಾಗಿ ತಮ್ಮ ಅನುಭವವನ್ನು ಹಂಚುತ್ತಿದ್ದರು. ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು ಇನ್ನೊಂದು ತರದ ಹೇಳುಗರು. ಎಲ್ಲರಿಗೂ ಅನುಭವ ಹಂಚುವ ಸ್ವಭಾವ ಅವರದಾಗಿರಲಿಲ್ಲ. ಕೇಳಿದರೂ ಮನಸ್ಸಿಗೆ ಬಂದರೆ ಮಾತ್ರ ಅವರು ಹೇಳಿಕೊಡುವ, ತಿದ್ದುವ ಕೆಲಸ ಮಾಡುತ್ತಿದ್ದರು. ಇಲ್ಲದಿದ್ದರೆ ಹಾರಿಕೆಯ ಮಾತಿನಲ್ಲಿ ವಿಷಯಾಂತರದಿಂದ ವಿಷಯ ಬೇರೆಡೆಗೆ ಹರಿಯುವಂತೆ ಮಾಡುತ್ತಿದ್ದರು. ಅವರಾಗಿಯೇ ಮನಸ್ಸು ಮಾಡಿದರೆ, ಹೇಳಿಕೊಡಬೇಕೆಂದು ತೀರ್ಮಾನಿಸಿದರೆ ಅವರ ಸಂಗ್ರಹದ ಸದುಪಯೋಗ ನಮಗಾಗುತಿತ್ತು.

ಈ ಇಬ್ಬರಿಗಿಂತ ಪೂರ್ತಿ ಬೇರೆಯಾದ ವ್ಯಕ್ತಿತ್ವ ದಿವಾಣ ಭೀಮ ಭಟ್ಟರದ್ದು. ನರಸಿಂಹ ಭಟ್ಟರ ಹತ್ತಿರ ಸಂಬಂಧಿಯಾಗಿ, ರಂಗದ ಸಮಗ್ರ ಕಲ್ಪನೆಯುಳ್ಳವರಾಗಿ ಅವರು ಮೆರೆದವರು. ಯಾವನೇ ಹಿಮ್ಮೇಳದ ಹಿರಿಯನಾದರೂ, ಇಡಿಯ ಪ್ರದರ್ಶನದಲ್ಲಿ ಪಾಲುದಾರ ನಾಗುವುದು ಸಹಜವಾಗಿರುತ್ತದೆ. ವೇಷಧಾರಿಗಳಿಗೆ ಸಿಗುವಷ್ಟು ವಿಶ್ರಾಂತಿ ಹಿಮ್ಮೇಳದವರಿಗೆ ಸಿಗುವುದು ಸಾಧ್ಯವಿರುತ್ತಿರಲಿಲ್ಲ. ಮಧ್ಯೆ ನಿದ್ರೆಗಂತೂ ಎಡೆಯಿರುವುದು ವೇಷಧಾರಿಗಳಿಗೆ ಮಾತ್ರ. ಭಾಗವತರು ಅಂದಿನ ದಿನಗಳಲ್ಲಿ ಇಡೀ ರಾತ್ರಿ ಆಟ ನಡೆಸುವುದು ಅವರ ಹೊಣೆಯಾಗಿರುತ್ತಿತ್ತು. ರಂಗಸ್ಥಳದ, ಚೌಕಿಯ ಈ ಎರಡು ಕಡೆಗೂ ಗಮನವಿರಿಸಿಕೊಂಡು ಬೆಳಗಿನ ವರೆಗೆ ಸಕ್ರಿಯರಾಗಿ ಆಟ ಆಡಿಸುವ ಕೆಲಸದಲ್ಲಿ ಭಾಗವತರಷ್ಟೆ ಹೊಣೆಗಾರಿಕೆ ಮದ್ದಳೆಗಾರರದ್ದಲ್ಲ ಎಂದು ಹೇಳಿದರೂ, ರಾತ್ರಿಯಿಡೀ ಜಾಗರಣೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಮಾತ್ರ ಸಾಧ್ಯವಿರಲಿಲ್ಲ. ರಂಗದಲ್ಲಿ ಪಾತ್ರಧಾರಿಯಾದವನು ಏನು ಮಾಡುತ್ತಾನೆ, ಏನು ಮಾತನಾಡುತ್ತಾನೆ ಎಂಬುದಂತೂ ಬೇಡವೆಂದರೂ ನೋಡುವ ಕಿವಿಗೊಡುವ ಕೆಲಸದಿಂದ ಮದ್ದಳೆಗಾರರಿಗೆ ಬಿಡುಗಡೆಯಿರುತ್ತಿರಲಿಲ್ಲ. ಚೆಂಡೆಯಲ್ಲಿರಲಿ, ಮದ್ದಳೆಯಲ್ಲಿರಲಿ ಸಂಪೂರ್ಣ ತನ್ನನ್ನು ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆಗೆ ಅವರು ಹೊರಗಾಗುವುದು ಸಾಧ್ಯವಿರುತ್ತಿರಲಿಲ್ಲ. ಕೆಲವು ಮದ್ದಳೆಗಾರರು ಅಂದೂ, ಇಂದೂ, ಭಾಗವತರ ಹಾಡಿಗೆ, ವೇಷಧಾರಿಯ ಕುಣಿತಕ್ಕೆ ಬಾರಿಸಿದರೆ ನಮ್ಮ ಕೆಲಸ ಮುಗಿಯಿತು ಎಂಬಂತಿರುತ್ತಾರೆ.

ನೆಡ್ಲೆ ನರಸಿಂಹ ಭಟ್ಟರಂತಹವರು ರಾತ್ರಿಯಿಡಿ ನಡೆದ ಆಟದ ಪೂರ್ತಿ ನೆನಪಿಟ್ಟು ಮರುದಿನ ಕೇಳಿದರೆ ತಪ್ಪು ಸರಿಗಳನ್ನು ಹೇಳ ಬಲ್ಲವರಾಗಿದ್ದರು. ಈ ಸಾಲಿನಲ್ಲಿ ಬಹಳ ಜನರು ನಮಗೆ ಸಿಗುವುದಿಲ್ಲ ಎಂದೂ ಕೈ ಚೆಲ್ಲಿದರೂ, ಹೆಸರಿಸಬೇಕಾದ ಅಥವಾ

ಹೆಸರಿಸಬಹುದಾದ ವ್ಯಕ್ತಿಗಳಲ್ಲಿ ಬರುವ ಇನ್ನೊಂದು ಹೆಸರು ದಿವಾಣ ಭೀಮ ಭಟ್ಟರದ್ದು, ಚೆಂಡೆ ಮದ್ದಳೆಗಳು ಎರಡರಲ್ಲೂ ಪರಿಣತಿಯನ್ನು ಹೊಂದಿದ್ದ ಅವರಿಗೆ ಪುರಾಣ ಲೋಕದ ಪರಿಚಯ ಚೆನ್ನಾಗಿತ್ತು. ರಸಪ್ರಜ್ಞೆಯಿಂದ ಕೂಡಿದ ಅವರ ವಿವರಣೆ ಯಾವಾಗಲೂ ಸಂಗ್ರಾಹ್ಯವಾಗಿ ಇರುತಿತ್ತು. ಯಾವುದೇ ಪಾತ್ರವಾದರೂ ಪ್ರಸಂಗದ ಪದ್ಯದ ಆಶಯಕ್ಕೆ ಹೊರಗೆ ಹೋಗಿ, ಮಾತು ಬೆಳೆಸಿದರೆ ಅದನ್ನು ನೆನಪಿನಲ್ಲಿಟ್ಟು ಹೇಳಿ ಕೊಡುವ ಕೆಲಸವನ್ನು ಅವರು ಮಾಡುತ್ತಿದ್ದರು. ಆದರೆ ಎಲ್ಲರಿಗೂ ಈ ರೀತಿ ಉಪದೇಶ ಮಾಡುತ್ತಿದ್ದರು ಎಂದಲ್ಲ. ಹೇಳಿದರೆ ಸ್ವೀಕರಿಸುತ್ತಾನೆ ಎಂಬ ಭರವಸೆಯಿದ್ದರೆ ಮಾತ್ರ ಅವರು ಉಪದೇಶಕನಾಗುತ್ತಿದ್ದರು. ಅದೂ ಎಲ್ಲರೂ ಇರುವಲ್ಲಿ ಅಲ್ಲ. ಪ್ರಯಾಣದ ಜೊತೆಗಾರಿಕೆಯಲ್ಲಿ ಅಥವಾ ಬಿಡಾರದ ನಿದ್ರೆಯ ಮಧ್ಯದಲ್ಲಿ ಅವರು ಮಾತಿಗಿಳಿದರೆ ಅನೇಕ ಉಪಯುಕ್ತ ವಿಷಯಗಳ ವಿಮರ್ಶೆ ನಡೆಯುತ್ತಿತ್ತು. ಅದು ಹಾಗೆ ಹೇಳುವುದಕ್ಕಿಂತ ಹೀಗೆ ಹೇಳಿದರೆ ಒಳ್ಳೆಯದಲ್ಲವೇ ಎಂಬ ರೀತಿಯ ಅವರ ಸಲಹೆ ಅನೇಕ ಸಲ ಪಾತ್ರದ ದಿಕ್ಕನ್ನು ಬದಲಿಸಿ ಕಳೆಕಟ್ಟುವಂತೆ ಮಾಡುತಿತ್ತು. ತಾನು ಹೇಳುವುದು ಮದ್ದಳೆಗಾರಿಕೆಯ ವ್ಯಾಪ್ತಿಯ ಹೊರಗಿನ ಸುದ್ದಿ ಭಾಗವತರಿಗೆ ಸಂಬಂಧಿಸಿದ ವಿಷಯ. ಆದ್ದರಿಂದ ನನಗೆ ಸಂಬಂಧ ಬೇಕೆ ಎಂದು ಇರದೆ, ಕೇಳಿದರೆ ಜನ ನೋಡಿ ವಿವರಣೆ ಕೊಟ್ಟು ತನ್ನ ಅನುಭವಗಳನ್ನು ಹಂಚುತ್ತಿದ್ದುದು ಅವರ ವಿಶೇಷತೆ ಯಾಗಿತ್ತು.

ಅವರ ಆತ್ಮೀಯತೆಯ ಸವಿ ಕೇವಲ ನಾಟಕೀಯವಾಗಿರುತ್ತಿರಲಿಲ್ಲ. ಒಬ್ಬ ಕಲಾವಿದ ನನ್ನು ಮನಸ್ಸಿನಿಂದ ಸ್ವೀಕರಿಸಿದರೆ ಆ ಮೇಲೆ ತಿರುಗಾಟದ ಆರು ತಿಂಗಳಲ್ಲೂ ಒಟ್ಟಿಗೆ ಇರಿಸಿಕೊಂಡು, ಮಾರ್ಗದರ್ಶನ ಮಾಡುತ್ತಿದ್ದು ಕೆಲವೇ ಮಂದಿಗಳಲ್ಲಿ ಕಾಣುವ ವಿಶೇಷತೆಯಾಗಿರುತ್ತಿತ್ತು. ವಿಟ್ಲ ಪರಿಸರದಲ್ಲಿ ಆಟದ ಕ್ಯಾಂಪು ಇದ್ದರೆ, ಮನೆಗೆ ಕರೆದುಕೊಂಡು ಹೋಗಿ ಉಪಚರಿಸುತ್ತಿದ್ದರು. ಎಷ್ಟೋ ಸಲ ಕಲಾವಿದರು ದಿವಾಣದ ಮನೆಗೆ ಹೋಗಿ ಬಂದರೆ ಅಲ್ಲಿನ ಉಪಚಾರವನ್ನು ಇತರ ಕಲಾವಿದರಲ್ಲಿ ವಿವರಿಸಿ ಸಂತೋಷಪಡುತ್ತಿದ್ದರು.

ನೆಡ್ಲೆ ನರಸಿಂಹ ಭಟ್ಟರ, ಬಲ್ಲಾಳರ, ಕುದ್ರೆಕೋಡ್ಲು ರಾಮ ಭಟ್ಟರ ಸಾಲಿನಲ್ಲಿ ದಿವಾಣದವರು ಸೇರಿ ನೆನಪಿಗೆ ಬರುತ್ತಿದ್ದರು. ಈಗ ಅವರು ನಮ್ಮ ಮಧ್ಯೆ ಇಲ್ಲದಿದ್ದರೂ, ಇದ್ದ ಕಾಲದಲ್ಲಿ ಹಿಮ್ಮೇಳದ ಪ್ರಪಂಚದಲ್ಲಿ ಅವರು ಹೇಗೆ ಇದ್ದರು ಎಂಬುದು ವರ್ಣನೆಗೆ ವಿಷಯವಾಗಿ ಈಗಲೂ ಒದಗಿ ಬರುತ್ತಿದೆ.

ಇಷ್ಟರ ಮೇಲೆ ದಿವಾಣದವರು ಚೆಂಡೆಯಲ್ಲಿ, ಮದ್ದಳೆಯಲ್ಲಿ ಕುಶಲಿಗಳು. ಬೆರಳೆಣಿಕೆಯ ವಾದ್ಯ ವಾದನ ಕುಶಲಿಗಳಲ್ಲಿ ಸೇರಿ ಬರುತ್ತಿದ್ದರು ಎಂಬುದನ್ನು ಯಕ್ಷಕಲಾ ಕುಶಲಿಗಳು ಸೇರಿದಲ್ಲಿ ಅವರ ಸಂಭಾಷಣೆಯಲ್ಲಿ ಕೇಳಬಹುದಾಗಿತ್ತು. ಇಂತಹ ಘಟಾನುಘಟಿಗಳಲ್ಲಿ ಸೇರಿ ಬರುವ ಕರಕೌಶಲ್ಯವನ್ನು ಪ್ರಸ್ತಾಪಿಸುವಾಗ ಒಂದು ಸೂಕ್ಷ್ಮ ವಿಷಯ ಪ್ರಸ್ತಾಪಿತವಾಗದೆ ಇರುತ್ತಿರಲಿಲ್ಲ. ಅದರ ಕುರಿತು ಹೆಚ್ಚಿನ ಜ್ಞಾನ ಎಲ್ಲರಿಗೂ ಇರುತ್ತಿರಲಿಲ್ಲ. ಇರಬೇಕಾಗಿಯೂ ಇಲ್ಲ. ಇದ್ದರೂ ಕಲಾವಿದರೆ ವೈಶಿಷ್ಟ್ಯವನ್ನು ಎತ್ತಿ ಆಡುವ ಹೊತ್ತಿನಲ್ಲಿ ದಿವಾಣ ಭೀಮ ಮದ್ದಳೆಗಾರು ವಿಷಮ ಬಾರಿಸುವವರು ಎಂಬ ಮಾತು ತೇಲಿ ಬರುತ್ತಿತ್ತು. ಗುಣಾಂಶಗಳನ್ನು ವರ್ಣಿಸುವವರು ಮದ್ದಳೆ ಚೆಂಡೆಗಳಲ್ಲಿ ಭೀಮ ಭಟ್ಟರು ವಿಷಮ ಬಾರಿಸುತ್ತಾರೆ ಎಂದು ಹೇಳದೆ ಇರುತ್ತಿರಲಿಲ್ಲ. ಆಳಕ್ಕಿಳಿದು ವಿಮರ್ಶೆ

ಮಾಡುವ ವ್ಯಕ್ತಿಗಳಿಗೆ ಇಂತಹ ಸಂಗತಿಗಳನ್ನು ಬಣ್ಣ ಹಚ್ಚಿ ವರ್ಣಿಸುವ ಹವ್ಯಾಸವಿರುತ್ತದೆ. ಆಗ ಅದರ ಕುರಿತು ಕೇಳುಗನಿಗೆ ಹಾಗಂದರೇನು ವಿಷಮ. ಸಮ ವ್ಯತ್ಯಾಸವೇನು? ಇತ್ಯಾದಿ ಪ್ರಶ್ನೆಗಳೇಳುತ್ತವೆ. ಅದಕ್ಕೆ ವಿವರಣೆಯನ್ನು ಕೊಡುವ ಕೆಲಸ ತಜ್ಞರಿಗೆ ಸುಲಭ ಹೊರತು ಸಾಮಾನ್ಯರಿಗಲ್ಲ. ಯಾರಿಗೆ ಸರಿಯಾದ ವಾದನ ಜ್ಞಾನವಿದೆಯೋ ಅವನಿಗೆ ಮಾತ್ರ ವಿಷಮದಲ್ಲಿ ಸಂಚರಿಸಿ ಸಮತೆಗೆ ಬರುವುದಕ್ಕೆ ಸಾಧ್ಯವಾಗುತ್ತದೆ. ಅದನ್ನು ಮನಗಾಣದವರಿಗೆ ವಿವರಣೆ ಬೇಕಾಗುತ್ತದೆ. ಅದನ್ನು ತಿಳಿದವರಿಗೆ ಭೀಮ ಭಟ್ಟರ ವಾದನ ಕ್ರಮ ವಿಷಮವಾಗಿ ಕಾಣದೆ, ಅದೊಂದು ಕರಕೌಶಲ್ಯವಾಗಿ ಕಾಣುತ್ತದೆ. ಅತಿಯಾದ ವೇಗದಿಂದ ಸಾಗುವ ವಾಹನ ಚಾಲಕನಿಗೆ ಅಪಘಾತದ ಭಯವಿರುವುದಿಲ್ಲ. ಯಾಕೆಂದರೆ ತಾನು ಹೋಗುತ್ತಿರುವುದು ವೇಗದ ಗತಿಯಿಂದ ಎಂಬ ಪ್ರಜ್ಞೆ ಅವನದಾಗಿರುತ್ತದೆ. ಆದ್ದರಿಂದ ಅಪಾಯಕಾರಿಯಾಗಿ ಹೋಗುತ್ತಾನೆ ಎಂದು ನೋಟಕನಿಗೆ ಅನಿಸಿದರೂ, ಅವನು ಸಮರ್ಥವಾಗಿ ವೇಗ ನಿಯಂತ್ರಿಸಬಲ್ಲ. ಆ ಕಾರಣದಿಂದ ಭೀಮ ಭಟ್ಟರು ಉಳಿದವರಿಗೆ ಬೇರೆ ರೀತಿಯ ಮದ್ದೆಗಾರರಾಗಿ ಕಂಡರೆ ಆಶ್ಚರ್ಯವಿಲ್ಲ. ಆದರೆ ಅವರ ಕೊರತೆಯಲ್ಲ. ಅದೊಂದು ಹೆಚ್ಚುಗಾರಿಕೆಯಾಗಿದೆ ಎಂಬ ತಜ್ಞರ ಆಶಯವನ್ನು ಒಪ್ಪಿಕೊಳ್ಳುವುದು ಹೆಚ್ಚು ಸೂಕ್ತವಾಗಿದೆ. ಯಕ್ಷರಂಗದಲ್ಲಿ ತನ್ನ ಶಿಷ್ಯ ವೃಂದದಿಂದ, ಆತ್ಮೀಯರಿಂದ ಸದಾ ಆತ್ಮೀಯತೆಯ ಆನಂದ ನೀಡುತ್ತಿದ್ದ ದಿವಾಣರು ಯಕ್ಷಗಾನದ ಚೆಂಡೆ ಮದ್ದಳೆಗಳ ಪ್ರಚಂಡರೇ ಆಗಿದ್ದರು.



# ಸವಿ ನೆನಪುಗಳು

**ಅಗರಿ ರಘುರಾಮ ಭಾಗವತ**
ಅಗರಿ ಎಂಟರ್‌ಪ್ರೈಸಸ್
ಯೆಡಪದವು, ಅಂಚೆ ಶಿಬ್ರಿಕೆರೆ
ಮಂಗಳೂರು ತಾಲೂಕು

ದಿವಂಗತ ದಿವಾಣ ಭೀಮ ಭಟ್ಟರು ಯಕ್ಷಗಾನದ ಕೇವಲ ಹಿಮ್ಮೇಳ ವಾದಕರಲ್ಲ ಅವರೊಂದು ಶಕ್ತಿ. ಯಾರಲ್ಲೂ ಕಾಣಸಿಗದ ಅಪೂರ್ವ ಗತ್ತುಗಾರಿಕೆಯ ಚಮತ್ಕಾರಗಳನ್ನು ಬಾರಿಸಿ ಭಾಗವತಿಕೆಯ ಘನತೆಯನ್ನು ಎತ್ತಿಹಿಡಿಯುವಲ್ಲಿ ಸಮರ್ಥರಾಗಿದ್ದರು. ದಿವಂಗತ ನೆಡ್ಲೆ ನರಸಿಂಹ ಭಟ್ಟರು, ನನ್ನ ತೀರ್ಥರೂಪರಾದ ದಿವಂಗತ ಅಗರಿ ಶ್ರೀನಿವಾಸ ಭಾಗವತರು ಹಾಗೂ ದಿವಂಗತ ದಿವಾಣ ಭೀಮ ಭಟ್ಟರ ಹಿಮ್ಮೇಳದ ಜೊತೆಯು ಈಗಲೂ ಪ್ರೇಕ್ಷಕರ ನೆನಪಿನಲ್ಲಿದೆ. ಆಕಾಶವಾಣಿಯಲ್ಲಿ ಬರುವ ಯಕ್ಷಗಾನದ ಹಾಡುಗಾರಿಕೆಯ ಪ್ರಸಾರ ಕಾರ್ಯಕ್ರಮದಲ್ಲಿ ಈ ಸವಿಯನ್ನು ಆಲಿಸಲು ಈಗಲೂ ಸಾಧ್ಯ.

ಕಟೀಲಿನ ಮೊಸರು ಕುಡಿಕೆಯ ಸಮಯದಲ್ಲಿ ನಡೆಯುವ ಬಯಲಾಟಗಳಲ್ಲಿ ಈಗಲೂ ಅಗರಿ ನೆಡ್ಲೆ ದಿವಾಣ ಇವರ ಜೊತೆ ಹಿಮ್ಮೇಳವನ್ನು ಜನರು ನೆನಪಿಸಿಕೊಳ್ಳುತ್ತಾರೆ. ಒಂದು ತಾಳದ ಪದ್ಯಕ್ಕೆ ಮತ್ತೊಂದು ತಾಳದ ನಡೆಯನ್ನು ಬಾರಿಸಿ ಮುಕ್ತಾಯ ಗೊಳಿಸುವ ಚಮತ್ಕಾರದ ಸಾಧನೆ ಅಪೂರ್ವವಾಗಿತ್ತು. ಅವರ ಒಡನಾಟದ ಒಂದು ತಿರುಗಾಟದ ನೆನಪುಗಳು ನನಗೂ ಇದೆ. “ಇರಬೇಕು ಸವಿನೆನಪು ಸವಿಯಲು (ಯಕ್ಷಗಾನ) ಬದುಕು” ಯೆಂಬಂತೆ ಅವರ ನೆನಪುಗಳು ಪ್ರೇಕ್ಷಕರಲ್ಲಿ ಅಚ್ಚಳಿಯದೆ ಉಳಿದಿವೆ.

ಅವರ ಜನ್ಮ ಶತಮಾನೋತ್ಸವ ಕಾರ್ಯಕ್ರಮಕ್ಕೆ ಶುಭ ಹಾರೈಸುತ್ತೇನೆ.

**ಭಾಗವತ ತೆಂಕಬೈಲು ತಿರುಮಲೇಶ್ವರ ಶಾಸ್ತ್ರಿ**
ಕರೋಪಾಡಿ ಗ್ರಾಮ ಮತ್ತು ಅಂಚೆ
ಬಂಟ್ವಾಳ ತಾಲೂಕು
ದಕ್ಷಿಣಕನ್ನಡ – 574 279

ಶ್ರೀಯುತ ದಿವಾಣ ಭೀಮ ಭಟ್ಟರನ್ನು ಅವರ ಹಿರಿಯರು ಬಂಗಾರ
ಎಂದು ಅಡ್ಡ ಹೆಸರಿನಿಂದ ಕರೆಯುತ್ತಿದ್ದುದರಿಂದ ಅವರ
ನಮಗೆಲ್ಲಾ ಬಂಗಾರಪ್ಪಚ್ಚಿ (ಅಪ್ಪಚ್ಚಿ – ಚಿಕ್ಕಪ್ಪ)ಯಾದರು
ಶ್ರೀಯುತರನ್ನು ನಾನು ಬಹಳ ಸಣ್ಣದಿರುವಾಗಲೇ ನೋಡುತ್ತಲೆ
ಇದ್ದವ. ಇವರು ನನ್ನ ಅಜ್ಜನ ಮನೆ ಮಂಚಿ ಸುಳ್ಯದಲ್ಲಿ ಆಗಾ
ಬಂದು ನನ್ನ ಮಾವ ಭಾಗವತ ಸುಬ್ರಾಯ ಭಟ್ಟರಿಗೆ ಮದ್ದ
ಹಾಗೇ ಮತ್ತೊಬ್ಬ ಮಾವ ಮಹಾಬಲ ಭಟ್ಟರಿಗೆ ಭಾಗವತಿ
ಕಲಿಸುತ್ತಿದ್ದರು. ಅಲ್ಲದೆ ಅವರನ್ನು ಪಳಗಿಸಿ ಯಕ್ಷಗಾನ
ಅಲೆಯನ್ನು ಆ ಮನೆಗೆ ಅಂಟಿಸಿದ್ದರು. ಬೇಸಿಗೆಯಲ್ಲಿ ಮೇಳ
ಕಸುಬು. ಮಳೆಗಾಲದಲ್ಲಿ ಕೆಲವು ಸಮಯವನ್ನು ಮಂಚಿ ಸುಳ್ಯದ
ಕಳೆಯುತ್ತಿದ್ದರು. ಹಾಗಾಗಿ ನನಗೆ ಅವರ ಪರಿಚಯ ಮತ್ತು ಸಲಿಗೆ
ಮುಖ್ಯ ಕಾರಣವಾಯಿತು. ಅವರು ಅಲ್ಲಿ ಕಲೆಯ ಅಲೆಯನ
ಪಸರಿಸಿದ್ದರಿಂದ ಅದು ನನಗೂ ಅಂಟಿಕೊಂಡಿತು ಎಂದ
ತಪ್ಪಾಗಲಾರದು. ಅವರ ಶಿಷ್ಯ ನನ್ನ ಮಾವನಿಂದ ನಾನು ಮದ್ದಳೆ
ಹಾಗೇ ಭಾಗವತಿಕೆಯನ್ನು ಕಲಿತು ಅವರ ಚೆಂಡೆ ಮದ್ದಳೆಗೆ ಪದ
ಹೇಳುವಂತಾದೆ. ಆದರೂ ಅವರ ಎದುರಿಗೆ ಸ್ವಲ್ಪ ಭಯವಾಗುತ್ತಿತ್ತು
ಆದರೂ ಸಲುಗೆಯ ಕಾರಣದಿಂದ ಮುಂದುವರಿಯುತ್ತಿತ್ತು.

ಅವರ ಚೆಂಡೆ ಮದ್ದಳೆಯ ಪೆಟ್ಟುಗಳು ವಿಷಮವಿರುತ್ತಿತ್ತು
ಹಾಗೆ ವಿಷಮ ಭೀಮಣ್ಣ ಎಂದೇ ಪ್ರಖ್ಯಾತಿಯೂ ಇತ್ತು. ಅವರ
ಬಾರಿಸುವ ಪೆಟ್ಟುಗಳು ವಿಷಮವಿದ್ದರೂ. ಅದೇ ಪೆಟ್ಟನ್ನು ತಾ
ಹಾಕಿ ಬಾಯಲ್ಲಿ ಹೇಳಿ ಸರಿ ಎನಿಸುತ್ತಿದ್ದರು. ವಿಷವ
ಬಾರಿಸುವವರು ಅನೇಕರಿರಬಹುದು, ಆದರೆ ಅದನ್ನು ಹೇ

ತೋರಿಸುವುದಕ್ಕೆ ಅವರು ಅಸಮರ್ಥರಾಗಿರುತ್ತಿದ್ದರು. ಅವರು ವಿಷಮವನ್ನು ತಯಾರು ಮಾಡಿಯೇ ಬಾರಿಸುವವರು. ಆದ್ದರಿಂದ ಅವರು ವಿಷಮವನ್ನು ಸಮ ಎನಿಸುವ ಮದ್ದಳೆಗಾರರು. ಅಲ್ಲದೆ ವಿಳಂಬ ತಾಳ, ಲಯ ಬದ್ಧರಾಗಿದ್ದರು. ಅವರ ಪೆಟ್ಟನ್ನು ಈಗಲೂ ಅನುಸರಿಸುವವರಿದ್ದಾರೆ.

ಚೆಂಡೆ ಉರುಳಿಕೆ ಬೇಕಾದಲ್ಲಿ ಲೆಕ್ಕಾಚಾರಕ್ಕೆ ಮಾತ್ರ ಹಾಕಿ ಇಡೀ ಪೆಟ್ಟು ಘಾತ ಇತ್ಯಾದಿಗಳಿಗೆ ಬಹಳ ಮಹತ್ವ ಕೊಡುತ್ತಿದ್ದರು. ಹಾಡುಗಾರರ ಪದ್ಯವನ್ನೇ ಅನುಸರಿಸಿ ಹಾಡಲು ಒಂದಿಷ್ಟು ಕಷ್ಟವಾಗದ ಹಾಗೆ ಮದ್ದಳೆ ನುಡಿಸಿ ಭಾಗವತಿಕೆಯನ್ನು ಮೆರೆಸುವುದರಲ್ಲಿ ಸಹಕಾರಿಯಾಗುತ್ತಿದ್ದರು. ನನಗೆ ಅವರ ಮದ್ದಳೆಗೆ ಪದ್ಯ ಹೇಳಲು ಬಹಳ ಸುಲಭ ವೆನಿಸುತಿತ್ತು. ಯಾವತ್ತೂ ಸಹೋದ್ಯೋಗಿಗಳಲ್ಲಿ ಮತ್ಸರವಿರಲಿಲ್ಲ. ತಪ್ಪಿದಲ್ಲಿ ಯಾರಿಗಾದರೂ ಹೇಳಿಯೇ ಬಿಡುತ್ತಿದ್ದರು. ಮುಖಕ್ಕೆ ತಕ್ಕ ಮಾತನಾಡುವ ಕಲಾವಿದರಲ್ಲ.

ಗುಣನಡತೆ ಬಹಳ ಸರಳ. ತುಂಬಾ ಕುಶಾಲನ್ನು ಅಳವಡಿಸಿಕೊಂಡವರು. ಹಾಗೇ ಒಳ್ಳೆಯ ಮಕ್ಕಳನ್ನು ಪಡೆದು ವಿದ್ಯಾವಂತರಾಗಿಸಿ ಅವರವರ ಕಾಲಲ್ಲೇ ಅವರು ನಿಲ್ಲುವಂತೆ ಮಾಡಿದವರು ದಿವಾಣ ಭೀಮ ಭಟ್ಟರು.

ನಾನು ಅವರೊಂದಿಗೆ ಜೊತೆಯಾಗಿ ಒಂದು ಆಟದಲ್ಲಿ (ಮಂಚಿಯಲ್ಲಿ) ಹಾಡುಗಾರ ನಾಗಿ ಮಾರವಿ, ಏಕತಾಳವನ್ನು ಪದ್ಯ ಹೇಳಿ ಬಿಡ್ತಿಗೆ ಎತ್ತುವಾಗ 'ಭೈರವಿ ಏಕ' ಅಂದರೆ ವಿಳಂಬ ಕಾಲದಲ್ಲಿ ಗಂಟೆ ಹಿಡಿದೆ. ಅದು ಅವರಿಗೆ ಸಿಟ್ಟು ಬಂದು ಕೂಡಲೇ ಚೆಂಡೆ ನಿಲ್ಲಿಸಿದರು. ವೇಷವೂ ನಿಂತಿತು. ಆಟವೂ ಒಂದೆರಡು ನಿಮಿಷ ನಿಂತಿತು. ನಾನು ಯಾಕೆ ಎಂದು ಕೇಳಿದೆ. ಆಗ ಅವರು ಸ್ವಲ್ಪ ಗಟ್ಟಿಯಾಗಿಯೇ ಮಾರವಿಯಲ್ಲಿ ಪದ್ಯ ತೆಗೆದು ಭೈರವಿ ಯಾಕೆ ಹಿಡಿದೆ. ತಾಳ ಒಂದೆ ಹಾಕಬೇಕು. ಪುನಃ ಹೇಳು ಎಂದು ಹೇಳಿದರು. ಹಾಗೆ ಪುನಃ ಆಟ ಪ್ರಾರಂಭವಾಯಿತು. ನಾನು ಸ್ವಲ್ಪವೂ ಬೇಸರಿಸದೆ ಆಟ ಮುಂದುವರಿಸಿದೆ. ಈಗಿನವರಾಗಿದ್ದರೆ ಅವರ ವಿದ್ಯೆಗೆ ಬೆಲೆ ಕೊಡದೆ ಎದ್ದು ಹೋಗುತ್ತಿದ್ದರು. ಅಂದಿನಿಂದ ನಾನು ಇವರು ತಾಳ, ಲಯ ಬದ್ಧರು ಎಂಬ ಅಭಿಪ್ರಾಯ ಪಟ್ಟೆ. ಹುಷಾರಾಗಬೇಕೆನ್ನುವ ಮನೋಭಾವದಿಂದ ಹೇಳುತ್ತಾರಲ್ಲದೆ ಖಂಡಿತಾ ಮತ್ಸರದಿಂದ ಹೇಳುವವರಲ್ಲ. ದಿವಾಣದಲ್ಲಿರುವುದು ಎಂಬ ಪರಿಚಯ ಹೇಳಿದ ತಕ್ಷಣ ಭೀಮ ಭಟ್ಟರಿಗೆ ಅಥವಾ ಅವರ ಮನೆ ಹತ್ತಿರವೇ ಎಂಬುದಾಗಿ ಕೇಳುತ್ತಿದ್ದರು. ಬಂಟ್ವಾಳ ತಾಲೂಕು, ದಿವಾಣವೆಂಬ ಸ್ಥಳಕ್ಕೆ ತಿಲಕ ಪ್ರಾಯರಾಗಿ ಮೆರೆದವರು ಶ್ರೀ ಭೀಮ ಭಟ್ಟರು. ಆದ್ದರಿಂದ ಯಕ್ಷ ತಿಲಕ ಭೀಮ ಭಟ್ಟರು ಎಂಬುದಾಗಿ ಕರೆದರೆ ತಪ್ಪಲ್ಲವಷ್ಟೇ?



# ದಿವಾಣರು ಮತ್ತು ಅಷ್ಟತಾಳ

**ಡಾ. ಕೆ.ಎಂ. ರಾಘವ ನಂಬಿಯಾರ್**
ಸಂಶೋಧಕ, ಪತ್ರಕರ್ತ, ಲೇಖಕ
ಇಂದ್ರಾಳಿ, ಉಡುಪಿ – 576 102

ದಿವಾಣ ಭೀಮ ಭಟ್ಟರ ಮದ್ದಳೆಗಾರಿಕೆ ನನಗೆ ಹಿರಿಯಡಕ ಗೋಪಾಲರಾಯರನ್ನು ನೆನಪಿಗೆ ತಂದುಕೊಡುತ್ತಿತ್ತು. ಅಂಥ ಸ್ಫುಟವಾದ, ಬಿರುಸಾದ ಮತ್ತು ಇಂಪಾದ ನುಡಿತದ ಅಕ್ಷರಗಳ ಜೋಡಣೆ. ಗೋಪಾಲರಾಯರ ಬೆರಳ ಉರುಳಿಕೆಯ ನುಡಿ ಅಂಥ ನಾದ ಸೌಖ್ಯವನ್ನು ಕೊಡುವಂಥದ್ದು. ಆ ಅರಳಿ ಬರುವ ಖಚಿತ ನಾದ ನುಡಿಕಾರಗಳನ್ನು ತಾಳಿಕೊಳ್ಳುವ ತಾಕತ್ತು ಹಾಡುಗಾರನ ಖಚಿತ ಹಾಡುಗಾರಿಕೆಗೆ ಬೇಕು.

ಒಂದು ರೀತಿಯಲ್ಲಿ ದಿವಾಣರು ಕೆಮ್ಮಣ್ಣು ನಾರಣಪ್ಪಯ್ಯ ಮದ್ದಳೆಗಾರರ ದಾರಿಯ ಮದ್ದಳೆಗಾರ. ಕೆಮ್ಮಣ್ಣು ಅವರ ಸಾಕ್ಷಾತ್ ಶಿಷ್ಯ ನೆಡ್ಲೆ ನರಸಿಂಹ ಭಟ್ಟರಾದರೂ ಕೆಮ್ಮಣ್ಣರ ವಾದನದ ಕಸರತ್ತಿನ ಶೈಲಿಯ ದಾರಿಯಲ್ಲಿದ್ದವರು ದಿವಾಣರು.

ದಿವಾಣರು ಮತ್ತು ನೆಡ್ಲೆ ಅವರು ಭಾವಂದಿರು. ಅವರಿಬ್ಬರದು ವಾದನದಲ್ಲೂ ಎರಕವಾದ ಬಾಂಧವ್ಯ. ದಿವಾಣರ ಮದ್ದಳೆಯ ಗರ್ಜನೆ ಒಂದು ಬಗೆಯಾದರೆ, ಚೆಂಡೆ ನುಡಿಯುವ ರೀತಿ ಇನ್ನೊಂದು. ದಿವಾಣರದು ಶಾಂತಕವಿಗಳು ಹೇಳಿದಂಥ 'ಗಂಡು ನಿರ್ಣಯ ಮರ್ದಲವಾದ್ಯ'.

ಬಹುಶಃ ಅಗರಿ ಭಾಗವತರ ಪದ ದಿವಾಣರ ಮದ್ದಳೆಗಾರಿಕೆಯಲ್ಲಿ ಬಹುವಾಗಿ ಮೆರೆದಿದೆ.

ಹಿಂದೆ ಆಟದಲ್ಲಿ ಮದ್ದಳೆಗೆ ಬಹುವಾದ ಪ್ರಾಧಾನ್ಯವಿತ್ತು. ಸ್ತ್ರೀ ಪಾತ್ರದ ಜತೆಗಿನ ಶೃಂಗಾರ ಸಂವಾದ, ಜಲಕೇಳಿ, ಕರುಣರಸದ ಸಂದರ್ಭ ಮೊದಲಾದವುಗಳಲ್ಲಿ ಕೇಸರಿ ತಟ್ಟ ವೇಷವಿದ್ದರೂ ಮದ್ದಳೆ ಮಾತ್ರವೇ ಬಳಕೆಯಾಗುತ್ತಿತ್ತು. ಇವತ್ತು ಆಟ ಆರಂಭವಾದರೆ ಚೆಂಡೆ ಹೆಗಲಿನಿಂದ ಇಳಿಯುವುದೇ ಇಲ್ಲ. ಮದ್ದಳೆ

ಒತ್ತು ಮದ್ದಳೆಗಾರನ ಆಸ್ತಿಯೆ ಆಗಿಬಿಟ್ಟಿದೆ.

ಇದರಲ್ಲಿ ನಷ್ಟವಾಗಿರುವುದು ಮದ್ದಳೆಯ ನವುರಾದ ಉಪಯೋಗ. ಅರುವತ್ತರ ದಶಕದಲ್ಲಿ ರಂಗಸ್ಥಳಕ್ಕೆ ಪ್ರವೇಶಿಸಿದ 'ಅರೆಮೃದಂಗ' ಯಕ್ಷಗಾನದ ತಾಳ ನುಡಿಕಾರಗಳ ಅಂದವನ್ನು ಬದಲಿಸಿದೆ. ಹೆಜ್ಜೆಗಾರಿಕೆಗೆ ಪೋಷಣೆ ನೀಡುವ ದೋ, ತ್ತಾಂ, ಧಿ, ಥಾ ಇತ್ಯಾದಿಗಳ ಬಳಕೆ ನಷ್ಟವಾದುದು ಮಾತ್ರವಲ್ಲ, ನಾದ ಸುಖವೂ ಪಲ್ಲಟಗೊಂಡಿದೆ. ಈಗ ಯಾವ ಮದ್ದಳೆಗಾರನೂ 'ದೋ' ನಾದವನ್ನು (ಬಡಗಿನ ಪರಿಭಾಷೆಯಲ್ಲಿ 'ತೋಂ' ನಾದ) ತೆಂಕುತಿಟ್ಟಿನ ಮದ್ದಳೆಯಲ್ಲಿ ಶ್ರುತಿಲೀನವಾಗಿ ನೀಡಲು ಶಕ್ತನಲ್ಲ. ಕಾರಣ ಮದ್ದಳೆ ರಚನೆಯೇ ಹಾಗಿದೆ.

ಟಾಂಕಿ ಪೆಟ್ಟು, ಬೆರಳ ಉರುಳಿಕೆಯ ಪೆಟ್ಟುಗಳಿಗಾಗಿ ಇಷ್ಟು ಬೆಲೆ ತೆರಬೇಕು. ನಿಜಕ್ಕಾದರೆ ಈ ಸೂಕ್ಷ್ಮತೆಯನ್ನು ಗಮನಿಸುವ ಶಕ್ತಿಯನ್ನು ತೆಂಕುತಿಟ್ಟಿನ ಮದ್ದಳೆಗಾರರೂ ಭಾಗವತರೂ ಕಳೆದುಕೊಂಡುದು ದುರ್ದೈವ.

ಹಳೆ ಮದ್ದಳೆ ರಚನೆಯಲ್ಲಿ ತೆಂಕು ಬಡಗುಗಳಲ್ಲಿ ಅಂಥ ವ್ಯತ್ಯಾಸ ಇರಲಿಲ್ಲ. ಒತ್ತುಕವಳದ ಪೆಟ್ಟುಗಳು ತೆಂಕಿನಲ್ಲಿ ಬಡಗಿಗಿಂತ ಹೆಚ್ಚು ಇತ್ತು. 'ತ್ತಾಂ' (ಚಾಪು) ತೆಂಕಿನಲ್ಲಿ ಹೆಚ್ಚು ಆಳವಾದ ನಾದ ಕೊಡುತ್ತಿತ್ತು. ಆದರೆ ಒಂದೇ ಮದ್ದಳೆಯನ್ನು ಬಾರಿಸಲು ಕೊಟ್ಟರೆ, ಹಿರಿಯಡಕ ಗೋಪಾಲರಾಯರೂ ದಿವಾಣ ಭೀಮಭಟ್ಟರೂ ಒಂದೇ ಬಗೆ ಆಳದ ನಾದ ಭಾಷೆಯನ್ನು ತರಬಲ್ಲರಾಗಿದ್ದರು.

1973–74ರ ವೇಳೆಗೆ ಪ್ರಸಿದ್ಧ ಅರ್ಥದಾರಿ ಪ್ರವಚನಕಾರ ಸೇರಾಜೆ ಸೀತಾರಾಮ ಭಟ್ಟರು ಉಡುಪಿ ಲಾ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ ಅವರ ನೇತೃತ್ವದ ವಿದ್ಯಾರ್ಥಿ ತಂಡದ 'ಅಂಧಕಾಸುರ ಮೋಕ್ಷ' ಪ್ರಸಂಗದ ಆಟಕ್ಕೆ ನಾನು ಭಾಗವತನಾಗಿ ಹೋಗಿದ್ದೆ. ಆ ಆಟದ ತರಬೇತಿಗೂ ಪ್ರದರ್ಶನಕ್ಕೂ ಮದ್ದಳೆಗಾರರಾಗಿದ್ದುದು ದಿವಾಣ ಭೀಮ ಭಟ್ಟರು.

ಆ ತರಬೇತಿ ನನ್ನ ಪಾಲಿಗೂ ದಿವಾಣರಿಂದ ತರಬೇತಿಯೇ ಆಗಿತ್ತು. ಅದು ನನ್ನ ರಂಗಾನುಭವದ ಕ್ಷಿತಿಜವನ್ನು ವಿಸ್ತರಿಸಿಕೊಟ್ಟಿತ್ತು. ಈ ಆಟದ ಯಶಸ್ಸು ತಂಡವನ್ನು ಕಾಞಂಗಾಡಿಗೆ ತಲಪಿಸಿ ಅಲ್ಲೂ ಆಟ ಪ್ರದರ್ಶನವಾಯಿತು. ಹಿಮ್ಮೇಳದಲ್ಲಿ ನಾನು–ದಿವಾಣರೇ ಮುಖ್ಯರು.

'ವಿಷಮ' ಎಂಬುದು ದಿವಾಣರ ವಾದನ ಕೌಶಲಕ್ಕೆ ಜನಸಾಮಾನ್ಯರು ನೀಡಿದ ಹೆಸರು. 'ವಿಷಮ' ಶಬ್ದಕ್ಕೆ ನಿಜವಾದ ಅರ್ಥ 'ಸಮಗತಿ ಅಲ್ಲದ್ದು' ಎಂದು ಮಾತ್ರ. ಗತಿಯಲ್ಲಿ ಎರಡು ಬಗೆ. 'ಸಮಗತಿ' ಮತ್ತು 'ವಿಷಮಗತಿ'. ವಿಷಮ ಗತಿಯಲ್ಲಿ ಅಕ್ಷರಗಳ ಸೇರಿಕೆ ಸಮಗತಿಯಿಂದ ಹೊರಬಿದ್ದಂತೆ ಕಾಣಿಸಿ ನಿಶ್ಚಿತ ಸ್ಥಾನದಲ್ಲಿ ಆವರ್ತನಗಳು ಜತೆಗೂಡುವ ಕೌಶಲ. ಆಟದಲ್ಲೊ ಕೂಟದಲ್ಲೊ ಎಲ್ಲ ಒಂದೋ ಎರಡೋ ಕಡೆ ರಂಗದ ನಡಿಗೆಗೆ ತೊಡಕಿಲ್ಲದ ಸ್ಥಾನ ನೋಡಿ ಮದ್ದಳೆಗಾರರು ತೋರುವ ಚಳಕವಿದು. ದಿವಾಣರ ಈ ಕೌಶಲಕ್ಕೆ ಮದ್ದಳೆಗಾರರ ಸದಸ್ಸಿನಲ್ಲೂ ಮನ್ನಣೆಯಿತ್ತು. ಭಾಗವತರಂತು ತುಂಬ ಗಂಭೀರವಾಗಿ ಎಚ್ಚರಿರಬೇಕಿತ್ತು.

ದಿವಾಣರ ತರಬೇತಿ ನನಗೂ ಸಿಕ್ಕಿದೆ ಎಂದೆನಲ್ಲ. ಅದು ಮುಖ್ಯವಾಗಿ ನನ್ನ ಅಷ್ಟತಾಳದ ಬಳಕೆಗೆ ಸಂಬಂಧಿಸಿತ್ತು.

ಅಷ್ಟತಾಳ ಹದಿನಾಲ್ಕು ಅಕ್ಷರಗಳ ತಾಳ. ಇದನ್ನು ಎರಡನೆ ಕಾಲದಲ್ಲಿ ಎರಡು ಆವರ್ತನಗಳು ತಾಳದ ಪೆಟ್ಟುಗಳಿಂದ ತೋರಿಸುವುದು ತೆಂಕುತಿಟ್ಟಿನ ಪದ್ಧತಿ. ಅಂದರೆ 5+5+2+2 ವಿಭಜನೆಯುಳ್ಳ ತಾಳವನ್ನು ಎರಡನೆ ಕಾಲದಲ್ಲಿ 7+7 ಎಂಬ ಭ್ರಮೆ ಬರುವಂತೆ ಎರಡೆರಡು ಪೆಟ್ಟುಗಳಿಂದ ತೋರಿಸುವುದು ಪದ್ಧತಿ. ತೆಂಕಿನಲ್ಲಿ ತಾಳಾರ್ಧವನ್ನು ಎರಡು ಪೆಟ್ಟುಗಳಿಂದ ಸೂಚಿಸಿದರೆ ಬಡಗಿನಲ್ಲಿ ಐದು ಪೆಟ್ಟುಗಳಿಂದ ಸೂಚಿಸುವುದು ರೂಢಿ.

ತಾಳಾರ್ಧವನ್ನೆ ನಿಜ ತಾಳಾವರ್ತನ ಎಂದು ಬಹುಕಾಲ ಮದ್ದಳೆಗಾರರು ನಂಬಿದ್ದರು. ಆದ್ದರಿಂದಲೆ 'ಯಕ್ಷಗಾನ ಮಕರಂದ'ದಲ್ಲಿ ಇರುವ ದಿವಾಣರ ಲೇಖನದಲ್ಲಿ ಅಷ್ಟತಾಳ ಏಳು ಮಾತ್ರೆಗಳ (3+4) ತಾಳ ಎಂದು ಕಾಣಿಸಿರುವುದು (ಪುಟ 335). ಆದರೆ 'ಬಡಿತ ಮುಗಿತಾಯ ಹದಿನಾಲ್ಕು ಅಕ್ಷರ ಕಾಲ' ಎಂದೂ ಅವರು ಸೂಚಿಸಿದ್ದಾರೆ. 'ಜಾಗಟೆಯಲ್ಲಿ ಮೂರು ಘಾತಗಳು ಮಾತ್ರ' ಎಂದೂ ತಿಳಿಸಿದ್ದಾರೆ.

ತಾಳ, ಮದ್ದಳೆ ವಾದನಗಳಲ್ಲಿ ಹದಿನಾಲ್ಕು ಅಕ್ಷರಗಳನ್ನು ಲಘು, ದ್ರುತಗಳ ಸ್ಥಾನ ತಪ್ಪಿಸಿ ಏಳಕ್ಷರಗಳ ನಡೆಯಾಗಿ ಕಾಣಿಸುವಾಗ ಮೊದಲ ಮೂರಕ್ಷರ ಸಣ್ಣ ಪೆಟ್ಟಿನಿಂದಲೂ ಅನಂತರದ ನಾಲ್ಕು ಅಕ್ಷರ ದೊಡ್ಡ ಪೆಟ್ಟಿನಿಂದಲೂ ತೋರಿಸಬೇಕಾಯಿತು. ಆದರೆ ಯಾವುದೇ ತಾಳದ ಬುಡ ಬಲವಾದ ಘಾತವನ್ನು ಹೊಂದಿರಲೇಬೇಕು. ಈ ತಾಳದ ಮಟ್ಟಿಗೆ ಬುಡ ಸಣ್ಣ ಪೆಟ್ಟಿನಿಂದಾಗುತ್ತದೆ.

ಆದರೆ ದಿವಾಣರು ಅಷ್ಟ ತಾಳದ ಘಾತಗಳು ಮೂರೆಂದು ಸರಿಯಾಗಿಯೆ ಗುರುತಿಸಿದ್ದಾರೆ. ಅದರ ಲಕ್ಷಣ ತ್ವರಿತ ಅಷ್ಟ ತಾಳದಲ್ಲಿ ನಿಚ್ಚಳಗೊಳ್ಳುತ್ತದೆ. ಆಗ ಅಷ್ಟತಾಳದ ತಾಳಾರ್ಧ 3+2+2 (ವಿಭಜನೆ ತ್ರಿವುಡೆಯನ್ನು ಹೋಲುತ್ತದಾದರೂ ಅಕ್ಷರದ ಅಳತೆ ಮತ್ತು ಗತಿವಿನ್ಯಾಸದಿಂದ ಇದು ತ್ರಿವುಡೆಯಿಂದ ಭಿನ್ನವಾಗುತ್ತದೆ) ವಿಭಜನೆಯಲ್ಲಿ ಸಾಗುತ್ತದೆ. ಆಗ ಎರಡು ಅಕ್ಷರಗಳಿಂದ ಮೂರು ಅಕ್ಷರಗಳ ಖಂಡ ಹೆಚ್ಚು ಬಿರುಸಾದ ಘಾತವನ್ನು ಕಾಣಲೇಬೇಕು.

ಅಗರಿ ಭಾಗವತರು ತ್ವರಿತ ಅಷ್ಟತಾಳದಲ್ಲಿ ಎತ್ತುಗಡೆಯನ್ನು ಮೂರು ಘಾತಗಳಿಂದಲೆ ನಡೆಸುತ್ತಿದ್ದರು. ಆದರೆ ಪದದ ನಡಿಗೆ ಮಾತ್ರ ಮೊದಲು ಸಣ್ಣಪೆಟ್ಟು, ಅನಂತರ ದೊಡ್ಡ ಪೆಟ್ಟು (3+4)ಗಳಿಂದಲೆ ಸಾಗುವುದು. ಪುನಃ ಮುಕ್ತಾಯ ಮೂರು ಪೆಟ್ಟುಗಳಿಂದ ನಡೆಯುವುದು ಕ್ರಮ.

ನನಗೆ ಎರಡು ಪೆಟ್ಟುಗಳಿಂದ ಮೂರು ಪೆಟ್ಟುಗಳಿಗೆ ಆವರ್ತನವನ್ನು ಹೊರಳಿಸುವ ವಿಧಾನದ ಅರಿವಿರಲಿಲ್ಲ. ಹೇಗೋ ಹೊಂದಿಸುತ್ತಿದ್ದೆ. ಅದು ಮದ್ದಳೇ (ಚೆಂಡೆ)ಗಾರರಿಗೆ ಎಡವಟ್ಟಾಗುವುದೂ ಇತ್ತು. ಆಗ ದಿವಾಣರು ಅಷ್ಟ ತಾಳದ ಎರಡೆರಡು ಪೆಟ್ಟುಗಳನ್ನು ಮೂರು ಮೂರು ಪೆಟ್ಟುಗಳಾಗಿ ಪರಿಭಾವಿಸಬೇಕಾದ ಕ್ರಮವನ್ನು ತೋರಿಕೊಟ್ಟರು. ಪದವೊಂದನ್ನು ಬಿಡಿಸಿಡುವುದರಿಂದ ಆ ಕ್ರಮವನ್ನು ಈ ಕೆಳಗೆ ಕಾಣಿಸುತ್ತೇನೆ–

ಪದ : ರಾಗ ನಾದನಾಮ ಕ್ರಿಯೆ, ಅಷ್ಟತಾಳ.

ಎಲವೊ ಕೌರವ ಮದ ಗರ್ವದಿ । ಮುಂದ ।
ಕೊಲವ ನೀನರಿಯದೆ ಶೌರ್ಯದಿ ॥

ಕುಲಹೀನನೆಂದೆನ್ನ ಜರೆದೆಯ । ಗೋ ।
ವಳನೆಂದು ಹರಿಯ ನಿಂದಿಸಿದೆಯ ॥1॥

| ತಾಳದ ಅಕ್ಷರ | | | 5 (ಲಘು) | | | 5 (ಲಘು) | | | 2 (ದ್ರುತ) | | | 2 (ದ್ರುತ) | | |
|---|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 1 | 2 | 3 | 4 | 5 | 1 | 2 | 1 | 2 |
| ತಾಳದ ನುಡಿ | ತ | ಕ | ತ | ಕಿ | ಟ | ತ | ಕ | ತ | ಕಿ | ಟ | ತ | ಕ | ದಿ | ಮಿ |
| ಎರಡನೆ ಕಾಲದ ಅಕ್ಷರ ವಿನ್ಯಾಸ | 1 | 2 | 3 | 1 | 2 | 1 | 2 | 1 | 2 | 3 | 1 | 2 | 1 | 2 |
| ಬಿಡ್ತಿಗೆ, ಮುಕ್ತಾಯದ ಜಾಗಟೆ ಪೆಟ್ಟು | ● | | • | | | • | | | ● | | • | | • | |
| ಪದ ನಡೆಯುವ ಜಾಗಟೆ ಪೆಟ್ಟು | • | | ● | | | | | | • | | ● | | | |
| ಮದ್ದಳೆ ನುಡಿ | ದಿ | ನ್ನಾ | ಧಿ | ನ್ನಗಧೋಂ | | | ದ | | | | | | | |
| | ತ್ತಾ | ಖ | ತ್ತಾ | ತರಿಕ್ಟ | | ಖ | | ತ್ತಾ | | | | | | |

ಪದ
ಎಲ– ವೊ– ಕೌ – ರವ – ಮ – ದ –
ಗ–– ರ್ವ– ದಿ– – – – ಮುಂ ದ –
ಣೊಲ– ವ– ನೀ ನರಿ– ಯ – ದೆ –
ಶೌ––ರ್ಯ–ದಿ – ––– – – – –
ಕುಲ–ಹೀ ನ – ನೆಂ–ದೆ – ನ್ನ –
ಜರೆ– ದೆ– ಯ– ––– ಗೋ – –
ವಳ– ನೆಂ ದು–ಹರಿ– ಯ – ನಿಂ –
ದಿಸಿ– ದೆ– ಯ– ––– ಧಿ – ಧಿ –
ಧೀತರಿ ಕಿಟ ತಕತರಿಕ್ಟ ಧಿ ಧಿ –
ಧೋಂ – ಕ ತ್ತಾಂ ದಿದೊ ಕತ –
ಧಾ

ಈ ಪದದ ತ್ವರಿತ ಅಷ್ಟತಾಳದ ನಿರ್ವಹಣೆಯಲ್ಲಿ ಪದ ಎರಡೆರಡು ಪೆಟ್ಟುಗಳಿಂದಲೂ ಬಿಡ್ತಿಗೆ ಮುಕ್ತಾಯಗಳು ಮೂರು ಮೂರು ಪೆಟ್ಟುಗಳಿಂದಲೂ ನಡೆಯುವುದು ಕ್ರಮವಷ್ಟೆ! ಇಲ್ಲಿ ಎರಡು ಪೆಟ್ಟುಗಳಿಂದ ಮೂರು ಪೆಟ್ಟುಗಳಿಗೆ ತಿರುಗುವಲ್ಲಿ ಮತ್ತು ಮೂರು ಪೆಟ್ಟುಗಳಿಂದ ಎರಡು ಪೆಟ್ಟುಗಳಿಗೆ ತಿರುಗುವಲ್ಲಿ ಇರುವ ಕ್ರಮವನ್ನು ಕರಗತ ಮಾಡಲು ಇದೆ. ಇಲ್ಲವಾದಲ್ಲಿ ಹಾಡುಗಾರನೂ ಮದ್ದಳೆಗಾರನೂ ಸೋತದ್ದೇ.

ದೊಡ್ಡ ಪೆಟ್ಟು ತಾಳದ ಮೂರು ಅಕ್ಷರಗಳನ್ನೂ (ಕೋಷ್ಟಕದಲ್ಲಿ ದೊಡ್ಡ ಬೊಟ್ಟು) ಸಣ್ಣ ಪೆಟ್ಟು ಎರಡು ಅಕ್ಷರಗಳನ್ನು (ಸಣ್ಣಪೆಟ್ಟು) ಪ್ರತಿನಿಧಿಸುತ್ತವೆ.

● ● ● ● ●●

ಎಲ ವೊಕೌ ರವ ಮದ ಗರ್ವದಿ – ಇಲ್ಲಿಂದ ಬರುವ ಎರಡು ಪೆಟ್ಟುಗಳಲ್ಲಿ ಎರಡನೆಯ ದೊಡ್ಡ ಪೆಟ್ಟನ್ನು ಸಣ್ಣ ಎರಡು ಪೆಟ್ಟುಗಳಾಗಿ ತಿರುಗಿಸಬೇಕು. ಆಗ ಬುಡವು ಬಲವಾದ ದೊಡ್ಡ ಪೆಟ್ಟಾಗಿ ತಿರುಗುತ್ತದೆ. ಮುಂದೆ ಬಿಡ್ತಿಗೆ ಮುಗಿಯುವ 'ಧಾ' ಎಂಬಲ್ಲಿ ಸಣ್ಣ ಪೆಟ್ಟನಿಂದ ಪದದ ನಡಿಗೆ ಆರಂಭವಾಗಿ ಸಣ್ಣ–ದೊಡ್ಡ ಎರಡೆರಡು ಪೆಟ್ಟುಗಳಿಂದ ಪದದ ನಡಿಗೆ. ಮುಕ್ತಾಯದಲ್ಲಿ ಮೇಲೆ ಸೂಚಿಸಿದಂತೆ ಪುನಃ ಮೂರು ಪೆಟ್ಟುಗಳಿಗೆ ಹೊರಳುವುದು. ಇದರಿಂದ ಪದವನ್ನು ಪ್ರತ್ಯೇಕವಾಗಿ ಮೂರು ಪೆಟ್ಟುಗಳಿಂದಲೂ, ಎರಡು ಪೆಟ್ಟುಗಳಿಂದಲೂ ಬಿಡ್ತಿಗೆ ಮುಕ್ತಾಯ ಸಹಿತವಾಗಿ ಕಲಿಯಬೇಕಾಗುತ್ತದೆ.

ಬಡಗುತಿಟ್ಟನಲ್ಲಿ ತ್ವರಿತ ಅಷ್ಟತಾಳವನ್ನು ಮೂರು ಪಟ್ಟುಗಳಿಂದಲೆ ಆದ್ಯಂತ ನಡೆಸುವುದಾದ್ದರಿಂದ ತೊಡಕಿಲ್ಲ.

● ● ● ● ● ●

ತೋ ದಿ ನ್ನ ಕಿಟ್ತಕ ದಿ ನ್ನ – ಹೀಗೆ. ಇದರ ಎರಡು ಆವರ್ತನಗಳೇ ಬಿಡ್ತಿಗೆಯೂ, ಮುಕ್ತಾಯವೂ.

ಯುದ್ಧದ ಸಂದರ್ಭದಲ್ಲಿ, ಬಡಗು ತಿಟ್ಟಿನಲ್ಲಿ, ಪದದ ನಡೆಯನ್ನು ಬಹುವಾಗಿ ವಿಲಂಬಿಸಿ ತ್ವರಿತ ತ್ರಿವುಡೆ ತಾಳವೋ ಎಂಬ ಭಾವನೆ ಬರಿಸಿ ಕ್ರಮಶಃ ತ್ವರಿತಗೊಳಿಸಿ ಕುಣಿಸಿ ತ್ವರಿತ ಅಷ್ಟತಾಳದ ಮುಕ್ತಾಯ ಮಾಡುತ್ತಾರೆ. ಈ ಕ್ರಮ ತೆಂಕುತಿಟ್ಟಿನಲ್ಲಿ ನಾನು ಕಂಡಿಲ್ಲ.

ತೆಂಕುತಿಟ್ಟಿನ ಅಷ್ಟತಾಳ (ನಿಧಾನ ಅಥವಾ ತ್ವರಿತ) ನಡೆಯುವಾಗಲೆಲ್ಲ ನನಗೆ ದಿವಾಣ ಭೀಮ ಭಟ್ಟ ಗುರುಪಿನ ನೆನಪಾಗುತ್ತದೆ.



# ವಾತ್ಸಲ್ಯಮಯ ಗುರು ದಿವಾಣ ಭೀಮಣ್ಣ

**ಗಣಪತಿ ಭಟ್ಟ ಪದ್ಯಾಣ**
**ಭಾಗವತರು**
'ಗಂಧರ್ವ' ಮನೆ,
ಕಲ್ಮಡ್ಕ ಗ್ರಾಮ,
ಸುಳ್ಯ ತಾಲೂಕು – 574 257

ಯಕ್ಷಗಾನ ರಂಗದ ಗತವೈಭವವನ್ನು ನೆನಪಿಸಿಕೊಂಡಾಗಲೆಲ್ಲಾ ಹಿಮ್ಮೇಳವಾದನ ತಜ್ಞರ ಮೇಲ್ಪಂಕ್ತಿಯಲ್ಲಿ ದಿವಂಗತ ದಿವಾಣ ಭೀಮ ಭಟ್ಟರಿಗೊಂದು ವಿಶಿಷ್ಟ ಸ್ಥಾನವಿದೆಯೆಂಬುದು ವೇದ್ಯ ವಾಗುತ್ತದೆ. ವಿಷಮ ಮದ್ದಲೆಗಾರರೆಂದೇ ಪ್ರಸಿದ್ಧರಾದ ಭೀಮಣ್ಣನವರ ಜನ್ಮ ಶತಮಾನದ ಈ ಸಂದರ್ಭದಲ್ಲಿ ಸರಿಸುಮಾರು ನಲುವತ್ತೈದು ವರ್ಷಗಳ ಹಿಂದಿನ ನನ್ನ ಅವರ ಪ್ರಥಮ ಪರಿಚಯ ಹಾಗೂ ಅದರಿಂದ ನನ್ನ ಕಲಾ ಜೀವನಕ್ಕಾದ ಸತ್ಪ್ರಯೋಜನ ಹಸಿ ಹಸಿರಾಗಿ ನೆನಪಾಗುತ್ತದೆ. ಅನಿರೀಕ್ಷಿತವಾಗಿ ಆದ ಭೇಟಿ ಹಿತವಾಗಿ ಬೆಸೆದು ಅಘೋಷಿತ ಗುರುಶಿಷ್ಯ ಸಂಬಂಧವಾಗಿ ಬೆಳೆದ ಬಗೆಯನ್ನೇ ಈ ಕೃತಿ ನಮನದಲ್ಲಿ ಪ್ರಸ್ತುತಪಡಿಸುತ್ತೇನೆ.

ಯಕ್ಷಗಾನ ಸಂಬಂಧಿಯಾದ ಪ್ರಸಿದ್ಧ ಮನೆತನ ಪದ್ಯಾಣ. ಖ್ಯಾತ ಭಾಗವತ ಪುಟ್ಟು ನಾರಾಯಣ ಭಟ್ಟರೂ, ಭಾಗವತಿಕೆ ಹಿಮ್ಮೇಳ ವಾದನಗಳ ಸರ್ವ ಕಾಲದ ಶ್ರೇಷ್ಠ ಗುರುಗಳಾದ ಮಾಂಬಾಡಿ ನಾರಾಯಣ ಭಟ್ಟರೂ ನನ್ನ ಅಜ್ಜಂದಿರು. ತಂದೆ ಯವರಾದ ತಿರುಮಲೇಶ್ವರ ಭಟ್ಟರೂ ಹಿಮ್ಮೇಳವಾದಕರು. ಹಾಗಾಗಿ ಸಹಜವಾಗಿಯೇ ಯಕ್ಷಗಾನದತ್ತ ಆಕರ್ಷಿತನಾದ ನಾನು ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ಪ್ರಾರಂಭವಾದ ಯಕ್ಷಗಾನ ಕೇಂದ್ರದ ಪ್ರಥಮ ವರ್ಷದ ವಿದ್ಯಾರ್ಥಿ. ಆಗ ಕುರಿಯ ವಿಠಲ ಶಾಸ್ತ್ರಿ, ಪಡ್ರೆ ಚಂದು, ನೆಡ್ಲೆ ನರಸಿಂಹ ಭಟ್ಟ ಮತ್ತು ಮಾಂಬಾಡಿ ನಾರಾಯಣ ಭಟ್ಟರು ಅಲ್ಲಿ ಗುರುಗಳಾಗಿದ್ದರು. ಪದ್ಯಾಣದವನಾದ ನಾನು ಹುಟ್ಟಿದ್ದು ಪೈವಳಿಕೆಯ ಕುಂಡೇರಿಯಲ್ಲಾದರೂ ನನ್ನ ಹಿರಿಯರು ಮುಂದೆ ನೆಲೆಸಿದ್ದು ಕಲ್ಮಡ್ಕದಲ್ಲಿ. ಕಲ್ಮಡ್ಕದ ಕೆರೆಕೋಡಿಯವರೂ

ನಾವೂ ನೆರೆಕರೆಯವರು. ಕೆರೆಕೋಡಿಯ ಪಿ. ಗಣಪತಿ ಭಟ್ಟ (ಆಯುರ್ವೇದ ಪಂಡಿತರು) ಯಕ್ಷಗಾನದ ಬಹುದೊಡ್ಡ ಅಭಿಮಾನಿ. ಹಲವಾರು ಕಲಾವಿದರುಗಳನ್ನು ಸನ್ಮಾನಿಸಿದ ಆಢ್ಯರು. ಅವರ ಮಗ ಡಾ. ಶ್ಯಾಮ ಭಟ್ಟರಿಗೆ ಮದುವೆಯಾದದ್ದು ದಿವಾಣ ಭೀಮ ಭಟ್ಟರ ಪುತ್ರಿ ದ್ರೌಪದಿಯನ್ನು. ಮಗಳ ಮನೆಗೆ ಬಂದಾಗ ಮೂರು, ನಾಲ್ಕು ದಿವಸ ಅಲ್ಲಿರುತ್ತಿದ್ದ ದಿವಾಣರನ್ನು ಕೇಂದ್ರದಲ್ಲಿ ಕಲಿತ ಹೊಸಹುರುಪಿನ ನಾನು ಭೇಟಿಯಾದೆ. ಎಳೆಯ ಕಲಾವಿದರನ್ನು ಹುರಿದುಂಬಿಸುವ, ಒತ್ತಾಯ ಮಾಡಿಯಾದರೂ ಎಳೆಯರ ಕಲಾವಂತಿಕೆಯನ್ನು ಇನ್ನಷ್ಟು ಪರಿಷ್ಕರಿಸುವ ಮನೋಭಾವದ ಭೀಮಣ್ಣರಿಗೆ ನಾನು ಆಪ್ತನಾದೆ. ಆಮೇಲೆ ಅದೆಷ್ಟೋ ಬಾರಿ ಅವರ ದಿವಾಣದ ಮನೆಗೂ ಹೋಗಿ ನಾನು ಕಲಿತಿದ್ದಿದೆ. ಮನೆ ಮನೆಗಳಿಗೆ ನನ್ನನ್ನು ಕರೆದುಕೊಂಡು ಹೋಗಿ ತಾಳಮದ್ದಳೆಗಳಲ್ಲಿ ನನ್ನನ್ನು ಹಾಡಿಸಿದವರು, ತಿದ್ದಿದವರು. ಅವರು ನನ್ನ ಎರಡನೆಯ ಗುರುಗಳೆಂದರೂ ತಪ್ಪಲ್ಲ.

ವಿಷಮ ನಡೆಯಲ್ಲಿ ಅವರು ಪೀಠಿಕೆ ಬಾರಿಸುವಾಗ ಜಾಗಟೆ ಹಿಡಿಯಲು ಅಳುಕುತ್ತಿದ್ದವರೇ ಹೆಚ್ಚು. ನಾನು ಆ ನನ್ನ ಎಳವೆಯಲ್ಲಿ ಅವರ ಪೀಠಿಕೆಗೆ ಜಾಗಟೆ ಬಾರಿಸಿ ಅವರ ಮೆಚ್ಚುಗೆ ಗಳಿಸಿದೆನೆಂಬ ಹೆಮ್ಮೆ ಇಂದಿಗೂ ನನಗಿದೆ. ಪ್ರಸಂಗ ಮಾಹಿತಿ, ರಂಗಸ್ಥಳ ನಿರ್ದೇಶನಗಳಲ್ಲಿ ಅವರು ಸಿದ್ಧಹಸ್ತರು. ನಾನು ಮದ್ದೆಗಾರನಾಗಿದ್ದಾಗ ಅವರ ಚೆಂಡೆಯ ಪೀಠಿಕೆಯೇ ನನಗೆ ಆದರ್ಶವಾಗಿತ್ತು. ಭಾಗವತಿಕೆ, ಅರ್ಥಗಾರಿಕೆ ಹಾಗೂ ಕುಣಿತದ ಬಗ್ಗೆ ಖಚಿತ ಅನುಭವವಿದ್ದ ಅವರ ಬೋಧನೆ ಇಂದಿಗೂ ನನ್ನ ವೃತ್ತಿಜೀವನದಲ್ಲಿ ನನಗೆ ದಾರಿದೀಪವಾಗಿದೆ. ನಮಗಿಬ್ಬರಿಗೂ ಗುರುಗಳು ಒಬ್ಬರೇ ಆಗಿದ್ದುದೂ ಇದಕ್ಕೆ ಕಾರಣ ವಿರಬಹುದು. ರಂಗಸ್ಥಳದಲ್ಲಿದ್ದಷ್ಟು ಹೊತ್ತೂ ಅವರು ಕಟ್ಟೆಚ್ಚರದಲ್ಲಿರುತ್ತಿದ್ದರು. ರಂಗಸ್ಥಳದಲ್ಲಿ ನಾನು ತೂಕಡಿಸಿದಾಗ ನನ್ನನ್ನು ಗದರಿಸಿ ಎಚ್ಚರಿಸಿದವರು. ನನ್ನ ಭಾಗವತಿಕೆ, ಭೀಮ ಭಟ್ಟರ ಚೆಂಡೆ, ಅವರ ಪುತ್ರ ಶಂಕರನ ಮದ್ದಳೆ ಹಾಗೂ ಕರ್ಗಲ್ಲು ವಿಶ್ವೇಶ್ವರ ಭಟ್ಟರ ಕುಣಿತದ 'ಕ್ಯಾಸೆಟ್'ಗಳು ಪ್ರಸಿದ್ಧವಾಗಿವೆ.

ಅತ್ಯಂತ ಸ್ನೇಹಪರರೂ, ವಾತ್ಸಲ್ಯಮಯರೂ ಆಗಿದ್ದರು. ಹಿಮ್ಮೇಳವಾದನದ ಪರಂಪರೆ, ಶಾಸ್ತ್ರೀಯತೆಗಳನ್ನುಳಿಸಿಕೊಳ್ಳುವ ಸಂದರ್ಭಗಳಲ್ಲಿ ಅತ್ಯಂತ ನಿಷ್ಠುರರೂ ಆಗಿದ್ದ ದಿವಾಣ ಭೀಮಭಟ್ಟರಿಗೆ ನೂರು ನಮಸ್ಕಾರಗಳು.



# ನಾದವಾಙ್ಮಯದ ಅಭಿನವ ಸೃಜನಕಾರ

**ಗಣೇಶ ಕೊಲೆಕಾಡಿ**
**ಕವಿ, ಕಲಾವಿದ**
ಅತಿಕಾರಿ ಬೆಟ್ಟು ಅಂಚೆ, ವಯಾ ಮುಲ್ಕಿ
ಮಂಗಳೂರು ತಾಲ್ಲೂಕು–574171

ನನ್ನ ಎಳವೆಯ ಜ್ಞಾನತೃಷೆಗೆ ಅನಿರೀಕ್ಷಿತವಾಗಿ ಒದಗಿಬಂದ ನನ್ನ ಬಾಳಿನ ಮಹಾಭಾಗ್ಯ ದಿವಾಣ ಭೀಮಭಟ್ಟರು. ಆ ಕಲಾ ಯೋಗಿಯ ಸಮಕ್ಷದಲ್ಲಿ ಕಳೆದ ಅಮೂಲ್ಯ ದಿನಗಳು ನನ್ನ ಮತಿ ಮಂಡಲದಲ್ಲಿ ಇನ್ನೂ ಮಾಸದೆ ಆಗಾಗ ಸಾಕ್ಷಾತ್ಕಾರಗೊಳ್ಳು ತ್ತಿರುತ್ತವೆ. ಪದ್ಮನೂರಿನ ಪದ್ಮನಾಭ ಶೆಟ್ಟಿಗಾರ್ ನಡೆಸುತ್ತಿದ್ದ ಹಿಮ್ಮೇಳ ತರಬೇತಿ ಕೇಂದ್ರದಲ್ಲಿ ದಿವಾಣ ಭೀಮಭಟ್ಟರು ಗುರುಗಳಾಗಿದ್ದರು. ನಾನು ಅಲ್ಲಿ ಮದ್ದಳೆ ಮತ್ತು ಭಾಗವತಿಕೆಯ ವಿದ್ಯಾರ್ಥಿಯಾಗಿದ್ದೆ. ಭೀಮಭಟ್ಟರು ಬೆಳಗ್ಗೆ ಒಂಬತ್ತು ಗಂಟೆಗೆ ತರಗತಿಗೆ ಬರುತ್ತಿದ್ದರು. ಬಂದು ಪದ್ಮಾಸನ ಹಾಕಿ ಕುಳಿತರೆ ಅವರು ಮತ್ತೆ ಏಳುತ್ತಿದ್ದದ್ದು ಊಟದ ಸಮಯಕ್ಕೆ. ಹೆಸರಿಗೆ ತಕ್ಕಂತೆ ಅವರಿಗೆ ಭೀಮಕಾಯ ವಿರದಿದ್ದರೂ ಅವರ ನಡೆನುಡಿಯಲ್ಲಿ ಭೀಮಗಾಂಭೀರ್ಯವಿತ್ತು! ಅವರ ಭವ್ಯ ವರ್ಚಸ್ಸಿನೆದುರು ನಾನು ಗಟ್ಟಿಯಾಗಿ ಉಸಿರಾಡಲು ಭಯಪಡುತ್ತಿದ್ದೆ. ತಪ್ಪಿಗೆ ಎಂದೂ ಅವರು ಕೃಪಾಂಕವನ್ನು ನೀಡುತ್ತಿರಲಿಲ್ಲ. ತಪ್ಪಿದ್ದನ್ನು ನಾವು ಸರಿ ಮಾಡುವವರೆಗೆ ಅತೃಪ್ತ ರಾಗಿಯೇ ಇರುತ್ತಿದ್ದರು. ಸರಿಯಾದ ಮೇಲೆ ಸರಿಯಾಯಿತೆಂದೂ ಅವರು ಹೇಳಿದವರಲ್ಲ. ಮದ್ದಳೆ ನುಡಿಸಿದ್ದು ಅಥವಾ ಆಡಿದ್ದು ಸರಿಯಾಗಿದ್ದರೆ ಮಾತ್ರ ನಂತರ ಮತ್ತೊಬ್ಬ ವಿದ್ಯಾರ್ಥಿಯನ್ನು ನುಡಿಸಲು, ಹಾಡಲು ಹೇಳುತ್ತಿದ್ದರು. ಅವರ ಮೌನ ಹಾಗೂ ಮತ್ತೊಬ್ಬ ವಿದ್ಯಾರ್ಥಿಯತ್ತ ಗಮನಹರಿಸುವಿಕೆ ನಮ್ಮ ಅಭ್ಯಾಸ ಅವರಿಗೆ ತೃಪ್ತಿ ತಂದಿದೆ ಎಂಬುದಕ್ಕೆ ಸಾಕ್ಷಿಯಾಗುತ್ತಿತ್ತು. ಸರಿಯಾಗದೆ ಪಾಠವನ್ನು ಮುಂದುವರೆಸುವ ಜಾಯಮಾನ ಅವರದ್ದಲ್ಲ. ನಮಗೆ ಭಾಗವತಿಕೆಯಲ್ಲಿ ಒಂದು ರೂಪಕ ತಾಳದ ಪಾಠ ಪೂರ್ತಿಯಾಗಲು ಆರು ತಿಂಗಳು ತೆಗೆದುಕೊಂಡಿದ್ದರು.

ಇವರ ಈ ನಿರ್ದುಷ್ಟವಾದ, ನಿಧಾನವಾದ ಪಠ್ಯಕ್ರಮದಿಂದ ವಿದ್ಯಾರ್ಥಿ ಗುರುವಾಗಿಯೂ ತಯಾರಾಗುತ್ತಿದ್ದ. ಇವರ ಪಠ್ಯಕ್ರಮದಿಂದ ನನಗೆ ನನ್ನ ಇನ್ನೋರ್ವ ಗುರುಗಳಾದ ಛಂದೋಬ್ರಹ್ಮ ಡಾ. ಎನ್. ನಾರಾಯಣ ಶೆಟ್ಟರ ಛಂದಸ್ಸಿನ ಕುರಿತಾದ ಗಹನವಾದ ವಿಚಾರಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಯಿತು.

ಒಂದು ದಿನ ಮಧ್ಯಾಹ್ನದ ಹೊತ್ತು ಬಿಡುವಿದ್ದಾಗ ಇವರು ನೆಲದಲ್ಲಿ ಚೆಂಡೆಯ ಉರುಳಿಕೆ ಹಾಕುತ್ತಿದ್ದರು. ನಡುನಡುವಲ್ಲಿ ನಿಲ್ಲಿಸಿ ಛೇ ಛೇ ಎನ್ನುತ್ತಿದ್ದರು. ಇದೇನೆಂದು ನನಗೆ ಅರ್ಥವಾಗಲಿಲ್ಲ. ತಿಳಿಯಬೇಕೆಂಬ ಕುತೂಹಲದಿಂದ ಧೈರ್ಯಮಾಡಿ ಕೇಳಿದೆ, ಅವರು ಸಿಟ್ಟಿನಲ್ಲಿ ಹೇಳಿದರು 'ನೀನು ಸುಮ್ಮನೆ ಕುಳಿತುಕೋ, ನಾನು ಒಂದು ನಡೆಯನ್ನು ಅಭ್ಯಾಸ ಮಾಡುತ್ತಿದ್ದೇನೆ. ಅದು ಯಾಕೆ ಬರುವುದಿಲ್ಲ ನೋಡಬೇಕು' ಎಂದು ಮತ್ತೆ ಅಭ್ಯಾಸಕ್ಕೆ ತೊಡಗಿದರು. ಕೊಂಚ ಹೊತ್ತಾದ ಮೇಲೆ ಅಬ್ಬಾ! ಬಂತು, ಸರಿಯಾಯಿತು ಎಂದು ಹೊಸ ವಿಷಯವನ್ನು ಸಂಶೋಧಿಸಿದ ವಿಜ್ಞಾನಿಯಂತೆ ಮಂದಹಾಸ ಬೀರಿದರು. ನನಗೆ ಜ್ಞಾಪಕವಿದ್ದಂತೆ ಅವರಿಗೆ ಆಗ ಎಂಬತ್ತು ವರ್ಷ ಪ್ರಾಯ. ಅವರು ಕಲಿತು ಮತ್ತೆ ಮೇಳಕ್ಕಾಗಲಿ, ಕಾರ್ಯಕ್ರಮಕ್ಕಾಗಲಿ ಹೋಗುವ ಸಾಧ್ಯತೆ ಇರಲಿಲ್ಲ. ಆಗಲೇ ಅವರು ಸಾಧಿಸುವುದೆಲ್ಲವನ್ನು ಸಾಧಿಸಿ ಮೆರೆದಾಗಿತ್ತು. ಆದರೆ ಅವರು ತಿರುಗಾಟಕ್ಕೆ ವಿದಾಯ ಹೇಳಿದ್ದರೂ ಕಲಿಕೆಗೆ ವಿದಾಯ ಹೇಳಲೇ ಇಲ್ಲ. ಸದಾ ಹೊಸ ವಿಷಯಗಳನ್ನು ಚಿಂತಿಸುತ್ತಾ ವಿದ್ಯಾರ್ಥಿಯಾಗಿಯೇ ಇದ್ದರು. ಆ ಹೊತ್ತಿನಲ್ಲಿ ಅವರ ಕಲಿಕೆಗೆ ಅವರ ಪ್ರಬಲ ಆತ್ಮಶಕ್ತಿಯೇ ಗುರುವಾಗಿತ್ತು. ಇವರ ಈ ನಡತೆಯಿಂದ ಕಲಿಕೆಯು ಅನಂತವಾಗಿದೆ ಎಂದು ಅರ್ಥೈಸಿದೆ. ಅವರು ಆಗಾಗ ಹೇಳುತ್ತಿದ್ದರು ವಿದ್ಯಾರ್ಥಿಯೊಬ್ಬ ತಾನು ಕಲಿತದ್ದೆಲ್ಲ ಆಯಿತೆಂದು ಯಾವಾಗ ತಿಳಿಯುತ್ತಾನೋ ಅವನು ಆಗ ಕಲಿಕೆಯ ಮೊದಲ ಮೆಟ್ಟಿಲಲ್ಲಿರುತ್ತಾನೆ ಎಂದು.

ನಾನು ಕಂಡಂತೆ ತೆಂಕುತಿಟ್ಟಿನ ಓರ್ವ ಮಹಾಗುರು ಇವರು. ಇವರಂತೆ ಜ್ಞಾನಿಯಾದ ಅಪೂರ್ವ ಲಯಸಿದ್ಧಿಯ ಗುರುವು ವಿರಳ. ಅವರು ಹಿಂದೆ ಕಲಿಸಿದ್ದನ್ನು, ಈಗ ಅನುಭವ ವಿಸ್ತಾರಗೊಂಡ ಸ್ಥಿತಿಯಲ್ಲಿ ನಾನು ಆಲೋಚಿಸುವಾಗ ಮಹದಾನಂದವಾಗುತ್ತದೆ. ಅವರ ಪಾಠ ನಿರ್ದುಷ್ಟವಾಗಿತ್ತು, ಬೋಧಪ್ರದವಾಗಿತ್ತು.

ತಿತ್ತಿತ್ತೈ ... ಇದರ ಬಗೆಗೆ ಹೆಚ್ಚಿನವರು 'ತ್ರೈತಿತ್ತಿ' ತತ್ಕಾರವನ್ನೇ ಉಪಯೋಗಿಸಿ ಹಾಡುತ್ತಾರೆ. 'ತ್ರೈತಿತ್ತಿ' ಅಂದರೆ ಅದು ತಿಶ್ರ ತ್ರಿಪುಟ 1300 (ತ್ವರಿತ ತ್ರಿವುಡೆ) ತಾಳವೇ ಆಗುತ್ತದೆ. ಆದರೆ ಭೀಮಭಟ್ಟರು ನಮಗೆ ಅದರ ನಡೆಯನ್ನು ತಕಧಿಮಿತಕಿಟ ಎಂದೇ ಕಲಿಸಿದ್ದರು. ಇದೇ ಕ್ರಮ ಶಾಸ್ತ್ರ ಸಮ್ಮತವಾದದ್ದು. ತಕಿಟ ತಕಧಿಮಿ ಎಂಬ ನಡೆಯನ್ನು ಹೊಂದಿರುವ ತಿಶ್ರ ತ್ರಿಪುಟ 1300 (ತ್ವರಿತ ತ್ರಿವುಡೆ) ತಾಳದ ಪ್ರತೀಪ ರೂಪವೇ ಈ ತಿತ್ತಿತೆಯ್ ತಾಳ. ಇದರ ದ್ರುತರೂಪವು ಒಂದಾವರ್ತಕ್ಕೆ ಮೂರುವರೆ ಮಾತ್ರೆಯನ್ನು ಹೊಂದಿದ್ದು ತಿಶ್ರ ತ್ರಿಪುಟದ ಒಂದಾವರ್ತದಲ್ಲಿ ತಿತ್ತಿತೆಯ್ ತಾಳದ ಎರಡಾವರ್ತವಿರುತ್ತದೆ. ಈ ಸೂಕ್ಷ್ಮಜ್ಞಾನ ಭೀಮಭಟ್ಟರಿಗಿತ್ತು. ತಿತ್ತಿತೆಯ್ ತಾಳದಲ್ಲಿ 'ತಿ'ಯಿಂದಲೇ ಪದ್ಯ ಆರಂಭವಾಗಬೇಕು. ಈ ಸಮಗ್ರಹವೇ ಸಾಧುವಾದದ್ದು. ಭೀಮಭಟ್ಟರು ನಮಗೆ ಅದೇ ರೀತಿ ಕಲಿಸಿದ್ದರು. ತ್ತಿಯಿಂದಲೇ ಪದ್ಯವನ್ನು ಆರಂಭವಿಸುವವರೂ ಇದ್ದಾರೆ. ಇದು ಅನಾಗತಗ್ರಹ. ಆದರೆ ತೆಯ್‌ಯಿಂದ ಪದ್ಯವನ್ನು ಆರಂಭಿಸುವುದು ಸರಿಯಲ್ಲ. ಇಂತಹ

ವಿಚಾರದಲ್ಲಿ ಭೀಮ ಭಟ್ಟರ ಜ್ಞಾನ ಮತ್ತು ನಿಲುಮೆ ಖಚಿತವಿತ್ತು.

ಯಕ್ಷಗಾನದಲ್ಲಿರುವ ಝಂಪೆ ತಾಳ ಅದು 14014 = 10 ಈ ರೀತಿ ತಾಲಾಂಗವನ್ನು ಹೊಂದಿರುವ ಚತುರಶ್ರ ಮಠ್ಯತಾಳವೇ ಆಗಿದೆ. ಈ ನಿಧಾನ ಝಂಪೆ ತಾಳದ ಪದ್ಯವನ್ನು ಹೆಚ್ಚಿನವರು ಅನಾಗತಗ್ರಹವಾಗಿಯೇ ಕಲಿಸುತ್ತಾರೆ, ಹಾಡುತ್ತಾರೆ. ಉದಾ:

| ತತ್ಕಾರ: | ಧೀಂ | ತತ | ಧೀಂ | ತತತತ | |
|---|---|---|---|---|---|
| ನಡೆ: | ತಕ | ಧಿಮಿ | ತಕ | ತಕಧಿಮಿ | |
| | | – | ಮುದ | ದಿಂ | SSದS |
| | | – | ನಿS | ನ್ನ | SSSSS |

ಮೇಲಿನದ್ದು ಅನಾಗತಗ್ರಹದ ಕ್ರಮದಂತೆ ಹಾಡುವ ಬಗೆ. ಇಲ್ಲಿ ಆರಂಭದ ಎರಡು ಮಾತ್ರೆಗಳಿಗೆ ಬೆಲೆಯೇ ನೀಡಲಾಗುವುದಿಲ್ಲ. ಈಗಿನ ಹೆಚ್ಚಿನ ಗುರುಗಳು ಕಲಿಸುವುದು ಇದನ್ನೇ. ಆದರೆ ಇದನ್ನು ಭೀಮಭಟ್ಟರು ಒಪ್ಪುತ್ತಿರಲಿಲ್ಲ. ಅವರು ಹೇಳುತ್ತಿದ್ದದ್ದು ಈ ರೀತಿ. ಉದಾ:

| ತತ್ಕಾರ: | ಧೀಂ | ತತ | ಧೀಂ | ತತತತ | |
|---|---|---|---|---|---|
| ನಡೆ: | ತಖ | ಕಖ | ತS | ಕಿSಟS | |
| | | ಮುS | ದS | ದಿಂ | SSದS |
| | | ನಿS | SS | ನ್ನ | SSSS |

ಇದು ಸಮಗ್ರಹ. ಇದು ಶಾಸ್ತ್ರ ಸಮ್ಮತವಾದದ್ದು.

ನಿಧಾನ ಝಂಪೆ ತಾಳಕ್ಕೆ (ಚತುರಶ್ರಮಠ್ಯದ) ಒಂದು ಆವರ್ತಕ್ಕೆ 10 ಮಾತ್ರೆ, ಪ್ರಸಂಗ ಸಾಹಿತ್ಯಗಳಲ್ಲಿ ತೊಂಬತ್ತು ಶೇಕಡ 5 ಮಾತ್ರೆಗಳ ಸಾಹಿತ್ಯವೇ ಇರುತ್ತದೆ (ದಿವಾಣ ಭೀಮಭಟ್ಟರಿಗೆ 10 ಮಾತ್ರೆಯ ಸಾಹಿತ್ಯವಿರುವ ನಿಧಾನ ಝಂಪೆಯು ಗೊತ್ತಿತ್ತು ಎಂಬುವುದು ಗಮನಾರ್ಹ ಅಂಶ). ಅಂದರೆ ಈ ತಾಳದ ದ್ರುತಗತಿಯ ಸಾಹಿತ್ಯವೇ ಇರುತ್ತದೆ. 2+1+2=5 ಈ ರೂಪದಲ್ಲಿರುವ ಸಾಹಿತ್ಯವನ್ನು ಗೇಯ ಮಾರ್ಗದಲ್ಲಿ 4+2+4= 10 ಮಾತ್ರೆಗಳಾಗಿಸಿ ಹಾಡಬೇಕಾಗುತ್ತದೆ. ಅದಕ್ಕಾಗಿ ಗುರುಗಳು ತಕತಕಿಟ ಎಂಬ ತತ್ಕಾರವನ್ನೇ 10 ಮಾತ್ರೆಯ ಈ ತಾಳಕ್ಕೆ ಸರಿಯಾಗಿ ತಖಕಖ ತಖಕಿಖಟಖ ಎಂದು ಅಭ್ಯಸಿಸಿ ನಂತರ ಪ್ರಸಂಗ ಸಾಹಿತ್ಯವನ್ನು ಅದೇ ರೀತಿ ತಾಳಕ್ಕೆ ಹೊಂದಿಸಿ ಕಲಿಸುತ್ತಿದ್ದರು.

ಯಕ್ಷಗಾನದ ರೂಪಕ ತಾಳ ಶಾಸ್ತ್ರೀಯವಾದ ಚತುರಶ್ರ ರೂಪಕ (014 = 2+4=6) ತಾಳವೇ ಆಗಿದೆ. ಅದು ಎರಡು ಮಾತ್ರೆಯ 3 ಸ್ತರಗಳನ್ನು ಹೊಂದಿದೆ. ಈ ಸೂಕ್ಷ್ಮವನ್ನು ತಿಳಿಸಿ ಅಷ್ಟು ನಿಖರವಾಗಿ ಹೇಳಿಕೊಡುತ್ತಿದ್ದರು. ತಾಳದ ಅಂತರ್‌ವಿನ್ಯಾಸಕ್ಕೆ ಭಂಗವಾದರೆ ಅವರು ಸಹಿಸುತ್ತಿರಲಿಲ್ಲ.

ಇವರ ಚೆಂಡೆ ಮದ್ದಳೆಗಳ ನುಡಿತಗಳೆಂದರೆ ಅವು ಬರೀ ಶಬ್ದಗಳಲ್ಲ. ಪದ್ಯದ ಭಾವದ ಜೀವನಾದಗಳು. ಇವರ ಬೆರಳ ತುದಿಯಲ್ಲಿ ಪದ್ಯದ ಭಾವಭ್ರೂಣಗಳು ಮೊಳೆತು ಉಸಿರಾಡುತ್ತಿದ್ದವು. ಛಂದೋಬಂಧಗಳ ಚರಣ, ವರಣ, ವಡಿ, ಮುಡಿ, ಅನುಪದ, ಶಿಖಾಪದ, ಗಣ, ಪದ್ಮಗಣ ಮುಂತಾದ ಪದ್ಯದ ಅವಯವಗಳ ಗತಿಯನ್ನು, ಯತಿಯನ್ನು ಸ್ಫುಟವಾಗಿ ಗೋಚರಿಸುವಂತೆ ಇವರು ಚೆಂಡೆ ಮದ್ದಳೆಗಳನ್ನು ನುಡಿಸುತ್ತಿದ್ದರು. ಮರದ

ಕೊರಡಾದ ಹಿಮ್ಮೇಳದ ಪರಿಕರಗಳು ಇವರ ಕೈಯಲ್ಲಿ ಜೀವಪಡೆದು ನಲಿದಾಡುತ್ತಿದ್ದುವು, ಕಣ್ಣೀರು ಮಿಡಿಯುತ್ತಿದ್ದುವು, ಕ್ರೋಧ ಪ್ರಜ್ವಲಿಸುತ್ತಿತ್ತು, ಮೋದ ಸೆಳೆಯುತ್ತಿತ್ತು. ಹೀಗೆ ನವರಸಗಳು ಉಕ್ಕಿ ಹರಿಯುತ್ತಿತ್ತು. ಸಮರ್ಥ ಕಲಾವಿದನ ಪದಬಲಕ್ಕೆ ಬಲವಾಗುತ್ತಿದ್ದವು. ಆಂಗಿಕ ಅಭಿನಯಕ್ಕೆ ಆಹ್ಲಾದದ ಆಸರೆಯಾಗುತ್ತಿತ್ತು. ಆಗಾಗ ಅವರು ಹಾಕುತ್ತಿದ್ದ ಮದ್ದಳೆಯ ಛಾಪು ಶ್ರುತಿಯ ಕೋಟೆಯ ಕಟ್ಟೋಡೆಯದಂತೆ ಕಾವಲಾಗುತ್ತಿತ್ತು.

ಉತ್ತಮ ಕಂಠಸಿರಿಯ ಭಾಗವತರೂ ಅವರಾಗಿದ್ದರು. ಸಾಹಿತ್ಯ ಶುದ್ಧಿ ತಾಲಾಂಗಗಳಿಗೆ ಸಾಹಿತ್ಯವನ್ನು ಅವರು ಅನುಸಂಧಾನಗೊಳಿಸುವ ರೀತಿ ಅನುಪಮವಾಗಿರುತ್ತಿತ್ತು. ಅವರಷ್ಟು ನಿಧಾನಗತಿಯಲ್ಲಿ ಪದ್ಯ ಹಾಡುವವರನ್ನು ನಾನು ನೋಡಿಯೇ ಇಲ್ಲ. ಲಯದ ಬಗ್ಗೆ ಅಪಾರ ಜ್ಞಾನ ಮತ್ತು ಹಿಡಿತವಿದ್ದುದರಿಂದ ಅದು ಅವರಿಗೆ ಸಾಧ್ಯವಾಗುತ್ತಿತ್ತು. ಹಾಡುವಾಗ ಅವರು ಪಾತ್ರದ ಆತ್ಮವೇ ಆಗಿಬಿಡುತ್ತಿದ್ದರು. ಈ ಸಂದರ್ಭದಲ್ಲಿ ಪೌರಾಣಿಕ ಜಗತ್ತನ್ನು ಲೌಕಿಕ ಜಗತ್ತಿಗೆ ಬೆಸೆಯುವ ಕೊಂಡಿಯಾಗುತ್ತಿದ್ದರು.

ಅಸಮಾನ ಪ್ರತಿಭಾವಿಲಾಸದಿಂದ ಅಭಿಜಾತ ನಾದವಾಙ್ಮಯದ ತಲಸ್ಪರ್ಶಿ ಮಥನದಿಂದ ಬೌದ್ಧಿಕ ಪ್ರಗಲ್ಭತೆಯನ್ನೂ, ಪಾರಂಪರಿಕ ಅನುಭವದಿಂದ ಕಲಾಸೂರಿಗಳ ಕನಸನ್ನೂ ಮನಸ್ಸನ್ನೂ ಅರಳಿಸಿದ ಮಹಾಪುರುಷ ಪೂಜನೀಯ ದಿವಾಣ ಭೀಮಭಟ್ಟರು. ಒಂದು ನಿಗೂಢ ಕಲಾಚೈತನ್ಯವೇ ಮೂರ್ತಿವೆತ್ತವರು ವಿರಳ. ಅವರು ಇಂದಿಗೂ ಅನೇಕರಿಗೆ ಪ್ರಶ್ನೆಯಾಗಿಯೇ ಉಳಿದಿದ್ದಾರೆ. ಅಧ್ಯಯನದಲ್ಲಿ, ಅನುಭವದಲ್ಲಿ ಅವರಷ್ಟು ಆಳಕ್ಕಿಳಿದವರು ಕಡಮೆ.

ನನಗೆ ತಾಳಗಳ ಕುರಿತು ಸಂದೇಹ, ಕುತೂಹಲ ಉಂಟಾದಾಗ ನನ್ನ ಮನಸ್ಸು ಅದಕ್ಕಾಗಿ ಭೀಮಭಟ್ಟರನ್ನು ಬಯಸುತ್ತಿದೆ. ಈ ಕಾಲದಲ್ಲಿ ಅವರಿದ್ದರೆ ನನ್ನ ಹಾಗೂ ನನ್ನ ಗುರುಗಳಾದ ಡಾ. ಎನ್. ನಾರಾಯಣ ಶೆಟ್ಟರ ಯೋಚನೆಗಳನ್ನು ಅರ್ಥ ಮಾಡಿಕೊಳ್ಳುತ್ತಿದ್ದರು, ಜಿಜ್ಞಾಸೆಗಳನ್ನು ತಣಿಸುತ್ತಿದ್ದರು. ಆದರೆ ಇಂದು ಅವರು ನಮ್ಮೊಡನಿಲ್ಲ. ಆದರೆ ಅವರು ಹಚ್ಚಿದ ಸ್ಫೂರ್ತಿಯ ನಂದಾದೀಪ ಮಾತ್ರ ಸದಾ ಬೆಳಗುತ್ತಿದೆ. ಸಾಧಕನಿಗೆ ಸಾವಿಲ್ಲ. ಹಾಗೆ ಯಕ್ಷಗಾನ ಕಲಾ ಜಗತ್ತಿಗೆ ಭೀಮಭಟ್ಟರು ಕೊಟ್ಟ ಕೊಡುಗೆ ಅಪಾರ. ತನ್ನ ಅಮೂಲ್ಯ ಕೊಡುಗೆಗಳಿಂದ ಅವರಿನ್ನೂ ಜೀವಂತವಾಗಿದ್ದಾರೆ.



# ಅಮೃತೋದಕ

**ಕರ್ಗಲ್ಲು ವಿಶ್ವೇಶ್ವರ ಭಟ್ಟ**
**ಯಕ್ಷಗಾನ ಕಲಾವಿದ**
**ಕೋಡಪದವು, ಬಂಟ್ವಾಳ**

ಮನನ ಯೋಗ್ಯವಾದ ಬುದ್ಧಿಮತ್ತೆಯನ್ನು ಕಲೆಯೊಂದರ ಉತ್ಕರ್ಷಕ್ಕಾಗಿ ಉಪಯೋಗಿಸಿದಾಗ ಅದರಿಂದೊದಗುವ ಸಿದ್ಧಿ ಮತ್ತು ಸಾಧನೆಯ ಮಾನವು ಅಸಾಧಾರಣವಾದುದು ಎನ್ನುವುದಕ್ಕೆ ಸಾರ್ವಕಾಲಿಕ ಉದಾಹರಣೆಯಾಗಿ ಕಳೆದ ಶತಮಾನದಲ್ಲಿ ಯಕ್ಷಗಾನ ಪ್ರಪಂಚದಲ್ಲಿ ಮಿಂಚಿ ಮರೆಯಾದ ಅಪ್ರತಿಮ ಹಿಮ್ಮೇಳ ಕಲಾವಾದಕರೂ, ಕಲಾತಪಸ್ವಿಗಳೂ ಆದ ದಿ। ದಿವಾಣ ಭೀಮ ಭಟ್ಟರು ಅಗ್ರಗಣ್ಯರು. ಇವರ ಸಾಧನೆಯಿಂದ ಗಳಿಸಿದ ಸಿದ್ಧಿಯು ಎಂದೆಂದಿಗೂ ತೆಂಕು ಮಟ್ಟು-ತಿಟ್ಟು ಯಕ್ಷಗಾನ ವೃಕ್ಷವನ್ನು ಜೀವಂತವಾಗಿರಿಸುವಲ್ಲಿ ಸಹಾಯಕವಾಗುವ 'ಅಮೃತೋದಕ' ಎನ್ನುವುದರಲ್ಲಿ ಎರಡು ಮಾತಿಲ್ಲ.

ನಾನು ತಿಳಿದಂತೆ, ಹಿಂದೆ ನಂದಾವರ ಅರಸರ ಕಾಲದಲ್ಲಿ ದಿವಾನರಿಗಾಗಿ ಉಂಬಳಿ ಬಿಟ್ಟ ಸ್ಥಳವೇ ಮುಂದೆ ದಿವಾಣವಾಗಿರ ಬೇಕು. ಇವರ ಪೂರ್ವಜರು ನಂದಾವರ ಅರಸರ ಆಸ್ಥಾನದಲ್ಲಿ ದಿವಾನರಾಗಿದ್ದರಂತೆ. ವಿದ್ಯಾವಂತ, ಬುದ್ಧಿವಂತ, ಆರೋಗ್ಯವಂತ ಹವ್ಯಕ ಮನೆತನದಲ್ಲಿ ಜನಿಸಿದ ಭೀಮ ಭಟ್ಟರು ದೈಹಿಕವಾಗಿಯೂ, ಮಾನಸಿಕವಾಗಿಯೂ, ವ್ಯಾವಹಾರಿಕ ವಾಗಿಯೂ ಮೇಲಿನ ಮೂರೂ ಗುಣಗಳನ್ನು ಹೊಂದಿದವರು. ಬಾಲ್ಯದ ಪರಿಸರ ದಿಂದಾಗಿ ಕಲಾವಂತಿಕೆಯು ಬೆಳೆಯ ತೊಡಗಿ, ಯಕ್ಷಗಾನದ ಅಧ್ಯಯನಕ್ಕೇ ಜೀವನವನ್ನು ಮುಡಿಪಾಗಿಡುವಷ್ಟು ಉದಾರತೆ ಯನ್ನು ತೋರಿ ಬೆಳಗಿ ಬಾಳಿದವರು.

ಪ್ರಾದೇಶಿಕವಾಗಿ, ಜನಪದ ರಂಗಭಾಷೆಯಾಗಿದ್ದ ಯಕ್ಷಗಾನಕ್ಕೆ ಪ್ರಪಂಚ ಮಟ್ಟದಲ್ಲಿ ಶುದ್ಧ ಪದ್ಧತಿಯ ರಂಗ ಭಾಷ್ಯವನ್ನು ಬರೆದ ಕೀರ್ತಿಯು ಪ್ರಥಮವಾಗಿ ಇವರಿಗೆ ಸಲ್ಲಬೇಕಾಗುತ್ತದೆ. ಯಕ್ಷಗಾನದ ಬತ್ತೀಸ ರಾಗ ತಾಳಗಳ ಸ್ಪಷ್ಟವಾದ ಅನುಭವವನ್ನು ಹೊಂದಿದ

ಇವರ ಹಿಮ್ಮೇಳವಾದನದ ಸಾಹಿತ್ಯವು ಅಂದು ವಿಶೇಷವಾಗಿ ಸಂಗೀತ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿತ್ತು. ಯಕ್ಷಗಾನದಲ್ಲಿ ಶಾಸ್ತ್ರೀಯತೆಯ ಅಂಶವನ್ನು ಮನಗಂಡು ಸಂಶೋಧನೆಯನ್ನು ಮಾಡಿದ ದಿ। ಕುಕ್ಕಿಲ ಕೃಷ್ಣ ಭಟ್ಟರು ತನ್ನ ಅಧ್ಯಯನಕ್ಕಾಗಿ ದಿ। ದಿವಾಣ ಭೀಮ ಭಟ್ಟರನ್ನು ಸಂಪರ್ಕಿಸುತ್ತಿದ್ದರು. ಈ ಸಂದರ್ಭದಲ್ಲಿ ನನ್ನ ತೀರ್ಥರೂಪರಾದ ದಿ। ಕರ್ಗಲ್ಲು ಸುಬ್ಬಣ್ಣ ಭಟ್ಟರ ಕುಣಿತ, ಅಭಿನಯಗಳಲ್ಲಿ ಶಾಸ್ತ್ರೀಯತೆಯನ್ನು ಗುರುತಿಸಿದ ದಿ। ಕುಕ್ಕಿಲ ಕೃಷ್ಣ ಭಟ್ಟರ ಅಪೇಕ್ಷೆಯಂತೆ ಶ್ರೀ ವೀರಾಂಜನೇಯ ಸ್ವಾಮಿಯು ನೆಲೆ ನಿಂತ ಕೋಡಪದವಿನ ಮಣ್ಣಿನಲ್ಲಿ ಕುಕ್ಕಿಲ ಪರಂಪರೆಯ, ಕರ್ಗಲ್ಲು ಶೈಲಿಯ, ತೆಂಕು ಮಟ್ಟು-ತಿಟ್ಟು ಯಕ್ಷಗಾನದ ಶುದ್ಧ ಪದ್ಧತಿ- ದೇಸೀಯ ಪದ್ಧತಿಗೆ ಅಡಿಪಾಯವಾಗಿ ತಮ್ಮ ಕಲಾಸಿದ್ಧಿಯ ಅಮೃತೋದಕದ ಧಾರೆಯನ್ನೇ ಹರಿಸಿದ ದಿ। ದಿವಾಣ ಭೀಮ ಭಟ್ಟರು ಯಕ್ಷಗಾನದಂತೆಯೇ ಅಮರರು. ನನಗೆ ಪೂಜನೀಯ ಗುರುಗಳು. ಅವರಿಗೆ ಚಿರಋಣಿ.

**ದೇಸೀ ಕಲಾ ಕಾಲಜ್ಞ**

ಇವರು 'ದೇಸೀಯ ಪದ್ಧತಿ'ಯ ಯಕ್ಷಗಾನದಲ್ಲಿ ವ್ಯವಸಾಯವನ್ನು ಮಾಡುತ್ತಾ, 'ಶುದ್ಧ ಪದ್ಧತಿ'ಯಲ್ಲಿ ಯಕ್ಷಗಾನದ ತಾಳ, ವಾದನ, ಹೆಜ್ಜೆಗಾರಿಕೆ'ಗೆ ಸಾಂಗತ್ಯವನ್ನು ರೂಪಿಸಿ, ಯಕ್ಷಗಾನಕ್ಕೆ ಇದು ಹೀಗೆಯೇ ಎಂದು ಶಾಸ್ತ್ರೀಯ ಪಥ್ಯವನ್ನು ಪ್ರಪ್ರಥಮವಾಗಿ ಕೊಟ್ಟವರು.

'ಕಾಲದಲ್ಲಿ ಎಲ್ಲವೂ ಅಡಗಿದೆ' ಎಂಬುದರಿಂದ ತೊಡಗಿ 'ಕಾಲ-ಖಂಡ'ಗಳ ಕಲ್ಪನೆಯನ್ನು ಸಾಕಾರಗೊಳಿಸಿ, ಪ್ರಪಂಚದಲ್ಲಿ ಯಾವುದೇ ಕಲೆಗಳಲ್ಲಿ ಬಳಸಬಹುದಾದ ತ್ರಿಶ್ರ (ತಕಿಟ), ಚತುರಶ್ರ (ತಕಧಿಮಿ), ಖಂಡ (ತಕ ತಕಿಟ), ಮಿಶ್ರ (ತಕಿಟ ತಕಧಿಮಿ), ಮತ್ತು ಸಂಕೀರ್ಣ (ತಕಧಿಮಿ ತಕ ತಕಿಟ) ಎಂಬ ಐದು ಜಾತಿಗಳಿಂದ ಯಕ್ಷಗಾನದಲ್ಲಿ ಬಳಸಬಹುದಾದ ತಾಳಗಳನ್ನು ಅರ್ಥವಿಸಿ, ನಿಧಾನಗತಿ-ಮಧ್ಯಮಗತಿ- ತ್ವರಿತಗತಿ ಗಳನ್ನು ತಿಳಿದು, ಹಾಡುಗಾರಿಕೆಯ ವಿಧಾನಗಳಲ್ಲಿ ಗತಿ ಭೇದ, ತಾಳಭೇದಗಳನ್ನು ಸಮರ್ಥವಾಗಿ ತನ್ನ ಬುದ್ಧಿಮತ್ತೆಯ ಪ್ರಭಾವದಿಂದ ಶುದ್ಧ ಲಯದಲ್ಲಿ ಸಮ ನಡೆಗಳನ್ನು ಚೆಂಡೆ ಮತ್ತು ಮದ್ದಳೆಯ ವಾದನದಲ್ಲಿ ನಿರೂಪಿಸಿದವರೂ ಹೌದು.

ವಿಶೇಷವಾಗಿ ಸಮನಡೆಯನ್ನು ಆಧಾರವಾಗಿಸಿ, ವಿಷಮ ಗತಿಗಳನ್ನು ಸಮನಡೆಗೆ ಸಮನ್ವಯಗೊಳಿಸಿ, ಸಮ-ವಿಷಮದ ನಡೆ-ಗತಿಗಳನ್ನು ಸೃಷ್ಟಿಸುವಿಕೆಯಲ್ಲಿ ಅಖಂಡವಾದ ಪಾಂಡಿತ್ಯವನ್ನೂ ಗಳಿಸಿದವರು. ಆದ್ದರಿಂದಲೇ ಯಕ್ಷಗಾನ ಪ್ರಪಂಚದಲ್ಲಿ 'ನಭೂತೋ ನ ಭವಿಷ್ಯತಿ' ಎಂಬಂತೆಯೇ ಸೃಷ್ಟಿಗೊಂಡ 'ಸಮ-ವಿಷಮ ಗತಿಯ ವಿಶಾರದ' ರೆಂಬ ಖ್ಯಾತಿಯನ್ನು ಹೊಂದಿದ ದಿವಾಣ ಭೀಮ ಭಟ್ಟರು ನಿಜ ವಾದನ ಕಲಾ ಲಯಜ್ಞರೇ ಸರಿ.



# ಹೃದಯವಂತ ಭೀಮಣ್ಣ

**ಸಿ.ಎಚ್. ಕೃಷ್ಣ ಶಾಸ್ತ್ರಿ ಬಾಳಿಲ**
**ಅಧ್ಯಾಪಕ, ಶಿಕ್ಷಣತಜ್ಞ**
301, ಗಿರಿ ಅಪಾರ್ಟ್‌ಮೆಂಟ್, ಬಿಜೈ
ಕಾವೂರು ಕ್ರಾಸ್ ರೋಡ್
ಮಂಗಳೂರು – 575 004

"ನಮ್ಮ ಭೀಮಣ್ಣ ನಾಲ್ಕು ದಿನಗಳ ಮೊದಲೇ ಬರಲಿ. ಅವನ ಬಳಿ ಮಾತಾಡಿ ಮುಂದಿನ ಏರ್ಪಾಡು ಹೇಗೆಂದು ನಿಶ್ಚಯಿಸೋಣ" ಹೀಗೆಂದು ನನ್ನ ಚಿಕ್ಕಪ್ಪ ತನ್ನ ಮನೆಯ ಎಲ್ಲ ಸಮಾರಂಭಗಳ ಸಂದರ್ಭದಲ್ಲಿ ಸದಾ ಮಕ್ಕಳೊಡನೆ ಹೇಳುತ್ತಿದ್ದರು. ಭೀಮಣ್ಣನ ಮನೆ ಇದ್ದುದು ಕೋಡಪದವಿನಲ್ಲಿ. ನನ್ನ ಚಿಕ್ಕಪ್ಪನ ಮನೆ ಇರುವುದು ಅಲ್ಲಿಗೆ ತೀರಾ ಸಮೀಪದ ಪುಂಡಿಕ್ಯಾ ಎಂಬಲ್ಲಿ. ಬಿಡುವಿದ್ದಾಗಲೆಲ್ಲಾ ಭೀಮಣ್ಣ ಹರಟೆ ಹೊಡೆಯಲು ಸಂಜೆಯ ವೇಳೆ ಅಲ್ಲಿಗೆ ಬರುತ್ತಿದ್ದರು. ನನ್ನ ಚಿಕ್ಕಪ್ಪನ ಮಗ (ಅಣ್ಣ) ವೃತ್ತಿಯಲ್ಲಿ ಬೆಂಗಳೂರಿನಲ್ಲಿ ವಕೀಲರು. ಯಕ್ಷಗಾನ ಬಯಲಾಟಗಳನ್ನು ರಾತ್ರಿಯಿಡೀ ನೋಡುವ ವಿಶೇಷಗೀಳು ಅವರಿಗೆ. ಆ ದಿನಗಳಲ್ಲಿ ಅವರಿಗೆ ದೇವಿ ಮಹಾತ್ಮೆ ಬಹು ಖುಷಿ ನೀಡುವ ಆಟ. ಆದ್ದರಿಂದ ನನ್ನ ಅಣ್ಣ ಊರಲ್ಲಿರುವಾಗ ಆ ಪ್ರಸಂಗದ ಆಟ ಎಲ್ಲೇ ಇರಲಿ, ಯಾವ ಮೇಳದ್ದೇ ಇರಲಿ, ಭೀಮಣ್ಣ ಮನೆಗೆ ಬಂದು ಅವರನ್ನೂ, ಮನೆಯವರನ್ನೂ ಕರೆದುಕೊಂಡು ಹೋಗುತ್ತಿದ್ದರು. ಮಾತ್ರವಲ್ಲ, ಯಕ್ಷಗಾನ ರಂಗದಲ್ಲಿ ಅಪಾರ ಅನುಭವಗಳ ಗಣಿಯಾಗಿದ್ದ ಅವರು ಬಣ್ಣದ ಮಾಲಿಂಗ, ಕುರಿಯ ವಿಠಲ ಶಾಸ್ತ್ರಿ, ಕದ್ರಿ ವಿಷ್ಣು, ವಿಟ್ಲ ರಾಮಯ್ಯ ರೈ, ಕೇಚಣ್ಣ, ಅಜ್ಜ ಬಲಿಪರು, ಅಗರಿ ಭಾಗವತರು ಮೊದಲಾದ ಅಗ್ರ ಪಂಕ್ತಿಯ ಕಲಾವಿದರ ಬಗ್ಗೆ, ಯಕ್ಷರಂಗದ ರಸಘಳಿಗೆಯ ಬಗ್ಗೆ ವಿನೋದ ಮಿಶ್ರಿತ ಧಾಟಿಯಲ್ಲಿ ರೋಚಕವಾಗಿ ಚಾವಡಿಯಲ್ಲಿ ಕುಳಿತು ವಿವರಿಸುತ್ತಿದ್ದಾಗ ನಾವೆಲ್ಲ ಅವರ ಸುತ್ತ ಕುಳಿತು ಕಣ್ಣು ಬಾಯಿ ಬಿಟ್ಟು ಕೇಳಿದ್ದೇ ಕೇಳಿದ್ದು. ಈ ಘಟನೆಗಳೆಲ್ಲ ಎಂದೂ ಮರೆವಿಗೆ ಜಾರದ ಸಂದರ್ಭಗಳು.

ಬಂಧುಗಳ, ನೆರೆಕರೆಯವರ ಸಮಾರಂಭಗಳಲ್ಲಿ ಭೀಮಣ್ಣ ಒಳ್ಳೆಯ ಸುದರಿಕೆಯವರು. ಸುಮಾರು ಇಂತಿಷ್ಟು ಜನರಿಗೆ ಏರ್ಪಾಡಾಗಬೇಕು ಎಂದರೆ ಸಾಕು. ಮತ್ತೆ ಅಡುಗೆ ಸಾಮಾನುಗಳ ಪಟ್ಟಿಯಿಂದ ಹಿಡಿದು ಊಟದ ಬಾಳೆಎಲೆಗಳ ವರೆಗೆ ಏನು, ಎಷ್ಟು ಬೇಕಾಗಬಹುದೆಂದು ಅವರು ನಿಖರವಾಗಿ ಹೇಳುತ್ತಿದ್ದರು. ಅವರೆಂದೂ ಅಂದಾಜು ತಪ್ಪುತ್ತಿರಲಿಲ್ಲ. ಜಂಬ್ರದ ಹಿಂದಿನ ದಿನವೇ ಬಂದು ಅಡುಗೆ ಮನೆ ತಯಾರಿಯಿಂದ ಊಟದ ಚಪ್ಪರದವರೆಗೆ ಚುರುಕಾಗಿ ಓಡಾಡುತ್ತಾ ಎಲ್ಲದರ ಉಸ್ತುವಾರಿ ನೋಡಿ ಕೊಳ್ಳುತ್ತಿದ್ದರು. ಬಂದ ಅತಿಥಿಗಳ ವ್ಯವಸ್ಥೆಯಲ್ಲಿ ಎಲ್ಲೂ ಎಳ್ಳಷ್ಟೂ ಊನ ಬಾರದ ಹಾಗೆ ಎಚ್ಚರವಹಿಸುತ್ತಿದ್ದರು. ತನ್ನ ಸ್ವಂತ ಮನೆಯಿರಲಿ, ಮಗಳ ಮನೆಯಿರಲಿ, ಬಂಧುಗಳ ಮನೆಯಿರಲಿ, ನೆರೆಕರೆಯವರೇ ಇರಲಿ – ಎಲ್ಲ ಕಡೆಯಲ್ಲೂ ಸಮಾನ ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿದ ಹಿರಿಯರವರು. ಅವರು ಸಂದುದು ಕೇವಲ ಯಕ್ಷಗಾನದ ಹಿಮ್ಮೇಳ ವಾದಕರಾಗಿ ಮಾತ್ರವಲ್ಲ, ಬಂಧು ಮಿತ್ರರ ಕಷ್ಟ ಸುಖಗಳಿಗೂ ಸಂದವರು, ಸ್ಪಂದಿಸಿದವರು. ಮೇಲ್ನೋಟಕ್ಕೆ ನಯ, ನಾಜೂಕು ತೋರದ, ಆದರೆ ಹತ್ತು ಮಂದಿಗೆ ಬೇಕಾದವರಾಗಿ ಬಾಳಿದ, ಹೃದಯದಲ್ಲಿ ಮಾನವೀಯ ಒರತೆ ಹರಿಸಿದ ನಮ್ಮ ಭೀಮಣ್ಣನನ್ನು ಮರೆಯ ಬೇಕೆಂದರೂ ಮರೆಯಲಿ ಹ್ಯಾಂಗೆ?

ಪುಂಡಿಕ್ಯಾ ಈಶ್ವರ ಭಟ್ಟರ ಸಂಗ್ರಹದಿಂದ



# ಲಯ ಪ್ರವೀಣ ದಿವಾಣ

**ಪುಂಡಿಕ್ಯಾ ಈಶ್ವರ ಭಟ್ಟ**
ಕೋಡಪದವು, ಬಂಟ್ವಾಳ
ದಕ್ಷಿಣಕನ್ನಡ

ಶ್ರೀ ದಿವಾಣ ಭೀಮ ಭಟ್ಟರು ಓರ್ವ ಸರಳ ವ್ಯಕ್ತಿ. ಕಪಟವರಿಯದ, ಒರಟನಂತೆ ಕಾಣುವ ಸಾಧು ವ್ಯಕ್ತಿ. ಹಾಗೂ ಪ್ರಾಮಾಣಿಕ ವ್ಯಕ್ತಿ. ಉಪಕಾರ ಸ್ಮರಣೆಯುಳ್ಳವರು. ಜೀವನಕ್ಕಾಗಿ, ಹಾಗೂ ಕಲೆಗಾಗಿಯೂ ಕಲಾಲೋಕವನ್ನು ಹೊಕ್ಕವರು. ಬಡತನದಲ್ಲಿಯೂ ಕಲೆಯಲ್ಲಿ ವಿಶಿಷ್ಟವಾದ ಸಾಧನೆಗೈದವರು.

ಶ್ರೀ ದಿವಾಣ ಭೀಮ ಭಟ್ಟರ ಚೆಂಡೆ ಮದ್ದಳೆಗಳೆರಡೂ ಗಂಭೀರ, ವಿರಳ, ಸ್ಪಷ್ಟ ಅಷ್ಟೇ ಇಂಪು. ಸ್ವಲ್ಪ ಪ್ರಾಯವಾದ ಮೇಲೆ ಚೆಂಡೆ ಕಲಿತ ಕಾರಣವೋ ಏನೋ ಚೆಂಡೆ ಬಾರಿಸುವಾಗ ಶ್ರಮ ಪಡುವಂತೆ ಕಾಣುತ್ತಿತ್ತು. ಆದರೆ ಅವರಿಗೆ ಶ್ರಮ ಇರಲಿಲ್ಲ. ತಾಳ, ಲಯ, ಛಂದಸ್ಸುಗಳಲ್ಲಿ ಭೀಮಣ್ಣನವರಿಗೆ ಅಪಾರವಾದ ಪಾಂಡಿತ್ಯವಿತ್ತು. ಹಾಗಾಗಿಯೇ ಯಕ್ಷಗಾನ ಕಮ್ಮಟಗಳಿಗೆ ಅನಿವಾರ್ಯ ವ್ಯಕ್ತಿಯಾಗಿದ್ದರು. ವಿಷಮ ಶೂರರೂ ಆಗಿದ್ದರು. ಅರ್ಥಗಾರಿಕೆಯನ್ನೂ ಆಸ್ವಾದಿಸುತ್ತಿದ್ದರು, ಚೆನ್ನಾಗಿ ವಿಮರ್ಶಿಸುತ್ತಿದ್ದರು. ಅಂತೂ ಶ್ರೀ ದಿವಾಣ ಭೀಮ ಭಟ್ಟರು ಯಕ್ಷಗಾನದಲ್ಲಿ ಹಲವು ಕಾಲ ನೆನಪಿನಲ್ಲಿ ಉಳಿಯುವ ವಿಶಿಷ್ಟ ಕಲಾವಿದರು.

# ಭೀಮಗುರುಗಳಿಗೊಂದು ಭಾವನಮನ

**ಕಟೀಲು ಮುರಲೀಧರ ಭಟ್ಟ**
**ಕಲಾವಿದರು**
**ಕಟೀಲು**

ಗುರುಗಳು ಕಟೀಲು ಮೇಳದ ತಿರುಗಾಟದಲ್ಲಿದ್ದಾಗ ನಾನು ಮೊದಲ ಬಾರಿಗೆ ಅವರನ್ನು ನೋಡಿದ್ದೆ. ಇತರ ಹಿಮ್ಮೇಳ ಕಲಾವಿದರಂತೆಯೇ ಅವರೂ ಇದ್ದರು. ಒತ್ತು ಮದ್ದಲೆಗಾರನಾಗಿ ಮೇಳ ಸೇರಿದ್ದರಿಂದ, ಹೆಚ್ಚಾಗಿ ಮದ್ದಲೆಯನ್ನೇ ಬಾರಿಸುತ್ತಿದ್ದರು. ವೇಷಧಾರಿಗೆ, ಭಾಗವತರಿಗೆ ಅನುಕೂಲವಾಗುವ ನಡೆ, ಬಿಡ್ತಿಗೆ, ಮುಕ್ತಾಯಗಳನ್ನು ಬಾರಿಸುತ್ತಿದ್ದರು. ಗಟ್ಟಿಯಾದ, ಇಡೀ ಪೆಟ್ಟುಗಳನ್ನೇ ಅವರು ಹೆಚ್ಚಾಗಿ ಬಳಸುತ್ತಿದ್ದರು. ನನ್ನ ಅಜ್ಞಾನದಿಂದಲೋ ಏನೋ, ಅವರ ಅಂತಹ ಪೆಟ್ಟುಗಳಲ್ಲಿ ಯಾವ ವಿಶೇಷತೆಯನ್ನೂ ನನಗೆ ಕಾಣಲಾಗಲಿಲ್ಲ. ಅವರ ದೊಡ್ಡ ದೊಡ್ಡ ಕಣ್ಣುಗಳನ್ನು ನೋಡಿ, ತುಂಬಾ ಕೋಪಿಷ್ಠರಿರಬಹುದೇನೋ ಎಂದುಕೊಂಡು, ನಾನು ಅವರ ಪರಿಚಯ ಮಾಡಿಕೊಳ್ಳಲು ಹೋಗಲೇ ಇಲ್ಲ.

ನವರಾತ್ರಿಯ ಸಮಯದಲ್ಲಿ ಕಟೀಲು ಶಾಲೆಯಲ್ಲಿ ನಡೆಯುತ್ತಿದ್ದ ಆಟಗಳಲ್ಲಿ ಭಾಗವಹಿಸಲು ಗುರುಗಳು ಬಂದಾಗ, ನಾನು ಅವರನ್ನು ಸ್ವಲ್ಪ ಹತ್ತಿರದಲ್ಲಿ ನೋಡುವಂತಾಯಿತು. ನಮ್ಮ ಹೆಡ್ಮಾಷ್ಟ್ರು, ವಿದ್ವಾನ್ ಪುಚ್ಚೆಕೆರೆ ಕೃಷ್ಣಭಟ್ರು, 'ಬೀಮಣ್ಣಾ, ಇಂದು ನಿಂಗೊಗೆ ಜತೆ ಈ ಹುಡುಗ, ಮುರಲಿ, ಸುದಾರಿಸೆಕ್ಕು' ಎಂದು ಪರಿಚಯಿಸಿದಾಗ, ಆ ದೊಡ್ಡ ಕಣ್ಣುಗಳನ್ನು ಅರಳಿಸಿ, ಗುರುಗಳು ನನ್ನನ್ನು ತೀಕ್ಷ್ಣವಾಗಿ ನೋಡಿದಾಗ, ನಾನು ಹೆದರಿ ಬೆವತು ಹೋಗಿದ್ದೆ. ಅಡ್ಡಿಯಿಲ್ಲೆಪ್ಪಾ, ಚೆಂದಕ್ಕೆ ಎಡ ಕೊಟ್ಟರೆ ಸಾಕು ಎಂದು ಉತ್ತರಿಸಿದ ಅವರು, ಕೆಲವು ತಾಳಗಳ ಬಿಡ್ತಿಗೆ-ಮುಕ್ತಾಯಗಳನ್ನು ಬಾರಿಸಲು ಹೇಳಿದರು. ಹೆದರಿಕೊಂಡೇ ಬಾರಿಸಿದಾಗ ಧೈರ್ಯ ತುಂಬಿದರು. ಎಲ್ಲವನ್ನೂ ಸಾವಧಾನದಿಂದ ನೋಡಿದ ಅವರು, ಚೆನ್ನಾಗಿ ಬಾರಿಸುತ್ತಿದ್ದೀಯ. ಹೀಗೆಯೇ ಮುಂದುವರಿಸು.

ವೇಗಕ್ಕಾಗಿ ಸ್ಪಷ್ಟತೆಯನ್ನು ಎಂದಿಗೂ ಬಲಿ ಕೊಡಬೇಡ ಎಂಬ ಕಿವಿಮಾತು ಹೇಳಿದರು. ಆ ಒಂದು ಮಾತು ಯಾವಾಗಲೂ ನನ್ನೊಳಗೆ ಅನುರಣನಗೊಳ್ಳುತ್ತಲೇ ಇರುತ್ತದೆ. ಆದಿನ ಮಾತ್ರ ಅವರ ಯಾವ ಪೆಟ್ಟುಗಳೂ ನನಗೆ ಕೇಳಿಸಲೇ ಇಲ್ಲ. ಯಾಕೆಂದರೆ, ಅವರ ಚೆಂಡೆಗೆ ತಾಳ ತಪ್ಪದಂತೆ ಎಡ ಕೊಡುವುದರಲ್ಲಿಯೇ ನನ್ನ ಶಕ್ತಿಯೆಲ್ಲವೂ ವ್ಯಯವಾಗುತ್ತಿತ್ತು! ಮರುದಿನ ಆಟಕ್ಕೂ ಅವರಿದ್ದರು. ಅಂದು ಮದ್ದಲೆಗೆ ಬೇರೆಯವರಿದ್ದರು. ಆದ್ದರಿಂದ ನಿರಾಳ ಮನಸ್ಸಿನಿಂದ ರಂಗದ ಎಡಬದಿಯಲ್ಲಿ ಕುಳಿತ ನಾನು, ಗುರುಗಳ ವಾದನ ವೈಖರಿಯನ್ನು ಮೈಯೆಲ್ಲಾ ಕಣ್ಣಾಗಿ, ಮೈಯೆಲ್ಲಾ ಕಿವಿಯಾಗಿ, ಮನಸ್ವೀ ಅನುಭವಿಸಿದೆ. ಒಂದೊಂದೇ ನುಡಿತದ ಖಾಚಿತ್ಯವನ್ನು, ಗಾಂಭೀರ್ಯವನ್ನು, ಏರಿಳಿತದ ಚೆಂದವನ್ನು ನೋಡುತ್ತಾ ನೋಡುತ್ತಾ ನನ್ನನ್ನೇ ನಾನು ಮರೆತೆನೆಂದರೆ ಖಂಡಿತ ಅತಿಶಯೋಕ್ತಿಯಲ್ಲ.

ನನಗೆ ಮದ್ದಲೆಯ ಬಾಲಪಾಠವನ್ನು ಹೇಳಿಕೊಟ್ಟವರು, ದಿ। ಕಾಂಚನ ನಾರಾಯಣ ಭಟ್ಟರು. ಅನಂತರ, ಕಟೀಲು ಬೀದಿಯಲ್ಲಿ ಕಟೀಲು ಮೇಳದ ಆಟಗಳನ್ನು, ಶಾಲೆಯಲ್ಲಿ ನವರಾತ್ರಿಯ ಆಟಗಳನ್ನು ನೋಡುತ್ತಾ, ಏಕಲವ್ಯನಂತೆ ಗುರುವಿಲ್ಲದೇ ಅಭ್ಯಾಸ ಮಾಡಿದವನು ನಾನು. ಹಿಮ್ಮೇಳ ತರಗತಿಗಳಿಗೆ ಹೋಗುವಷ್ಟು, ಕಲಿಸುವವರಿಗೆ ಕೊಡುವಷ್ಟು ಹಣ ನನ್ನಲ್ಲಿ ಇರಲಿಲ್ಲವಾದ್ದರಿಂದ, ಪಾಲಿಗೆ ಬಂದದ್ದೇ ಪಂಚಾಮೃತ ಎಂಬ ಭಾವನೆಯಲ್ಲಿದ್ದ ನನಗೆ, ಇಷ್ಟರ ವರೆಗಿನ ಕಲಿಕೆ ಕೇವಲ ಪಂಚಗವ್ಯ, ಪಂಚಾಮೃತ ಬೇರೆಯೇ ಇದೆ ಎಂದು ತೋರಿಸಿಕೊಟ್ಟು, ಅದನ್ನು ನನ್ನ ಪಾಲಿಗೆ ಉಣಬಡಿಸಿದ ಮಹಾತ್ಮರೇ ನನ್ನ ಗುರುಗಳು. ಅದರ ಕತೆ ಹೀಗೆ.

ಯಕ್ಷಗಾನ ಹಿಮ್ಮೇಳ ಅಭ್ಯಾಸಿಗಳಿಗಾಗಿ, ಕಟೀಲು ದೇವಳದ ವತಿಯಿಂದ ಒಂದು ತಿಂಗಳ ಶಿಬಿರ ಆಯೋಜಿಸಲ್ಪಟ್ಟಾಗ, ಅದರ ನೇತೃತ್ವ ವಹಿಸಿದವರು, ಮಂದಾರ ಕೇಶವ ಭಟ್ಟರು ಮತ್ತು ದಿವಾಣ ಭೀಮಭಟ್ಟರು. ಭಾಗವತಿಕೆ, ಚೆಂಡೆ, ಮದ್ದಲೆ – ಈ ಮೂರೂ ವಿಷಯಗಳ ತರಬೇತಿಯನ್ನು ಅವರಿಬ್ಬರೂ ಸೇರಿ ನಡೆಸಿಕೊಡುತ್ತಿದ್ದರು. ಒಂದು ವಿಷಯ ಗೊತ್ತಿರುವುದು ಬೇರೆ, ಅದನ್ನು ಇನ್ನೊಬ್ಬರಿಗೆ ಅರ್ಥವಾಗುವಂತೆ ಹೇಳಿಕೊಡುವ ಕಲೆಯೇ ಬೇರೆ. ದಿವಾಣ ಭೀಮಭಟ್ಟರಲ್ಲಿ ಆ ಕಲೆಯ ಶ್ರೀಮಂತಿಕೆಯನ್ನು ನಾನು ಕಂಡಿದ್ದೇನೆ. ಎಷ್ಟೇ ಗಹನವಾದ ವಿಷಯವಿರಲಿ, ಅದನ್ನು ನಮಗೆ ಅರ್ಥವಾಗುವಂತೆ, ಸರಳವಾಗಿ, ಸೋದಾಹರಣವಾಗಿ ಅವರು ಹೇಳಿಕೊಡುತ್ತಿದ್ದ ವೈಖರಿ, ಅನನ್ಯ ಸಾಧಾರಣ. ಯಾವ ಪ್ರಶ್ನೆಯನ್ನು ಕೇಳಿದರೂ ಅವರು ಕೋಪಿಸಿಕೊಳ್ಳುತ್ತಿರಲಿಲ್ಲ. ಅದನ್ನು ಅವರು ಲೀಲಾಜಾಲವಾಗಿ ಉತ್ತರಿಸುತ್ತಿದ್ದ ರೀತಿಯೇ ಅವರ ವಿಷಯ ಪ್ರಭುತ್ವವನ್ನು ಎತ್ತಿ ತೋರಿಸುತ್ತಿತ್ತು. ತಾಳಮದ್ದಳೆ ಹಾಕುವುದು, ಅಬ್ಬರತಾಳ, ಚೌಕಿಪೂಜೆ, ರಂಗಪೀಠಿಕೆ, ಪೂರ್ವರಂಗ, ಮುಖ್ಯ ಸ್ತ್ರೀವೇಷ, ಪ್ರಸಂಗ ಪೀಠಿಕೆ, ಪೀಠಿಕೆ ಸ್ತ್ರೀವೇಷ, ಒಡ್ಡೋಲಗ, ತೆರೆಕ್ಲಾಸ್, ಸಭಾಕ್ಲಾಸ್, ಬಣ್ಣದ ವೇಷದ ಕ್ರಮಗಳು–ನಿತ್ಯವಿಧಿ, ಕಿರಾತರ ಪ್ರವೇಶ, ಆರತಿ, ಮಂಗಲ, ಚೌಕಿಪೂಜೆ – ಹೀಗೆ ಒಂದು ಇಡೀ ರಾತ್ರಿಯ ಪಾರಂಪರಿಕ ರಂಗನಡೆಯನ್ನು ಗುರುಗಳು ಆಮೂಲಾಗ್ರವಾಗಿ ಕಲಿಸಿಕೊಟ್ಟರು. ಹೆಚ್ಚಿನ ವಿಷಯಗಳು ಕೇಳಿ, ನೋಡಿ, ಕಲಿತು, ನನಗೆ ಗೊತ್ತಿದ್ದುದೇ ಹೌದಾದರೂ, ಅವುಗಳಲ್ಲಿ ನನಗಿದ್ದ ಪ್ರಶ್ನೆಗಳು, ಗುರುಗಳಿಂದ ನಿವೃತ್ತಿಯಾದುವು. ತಾಳಲಯಗಳ ಖಚಿತ ಚೌಕಟ್ಟು ಸಿಕ್ಕಿತು.

ಇಷ್ಟೆಲ್ಲಾ ಆದಮೇಲೆ ಗುರುಗಳು ನನಗೆ ಹೇಳಿದರು. ಇಲ್ಲಿಗೆ ಅರೆವಾಶಿ ವಿಷಯ ಮಾತ್ರ ಸಂಪೂರ್ಣ ಕಲಿತ ಹಾಗಾಯಿತು ಮುರಲಿ. ನನಗೆ ಆಶ್ಚರ್ಯವೋ ಆಶ್ಚರ್ಯ. ಹಾಗಾದರೆ ಇನ್ನು ಕಲಿಯಲಿಕ್ಕೇನಿದೆ ಎಂಬ ಪ್ರಶ್ನೆ ಮೂಡಿಬಂದು ಅದನ್ನು ಆಡಿಯೂ ಬಿಟ್ಟೆ. ಅವರು ಕೇಳಿದರು. ತ್ರಿವುಡೆಯ ಬಿಡ್ತಿಗೆ ಎಷ್ಟು ರೀತಿಯಲ್ಲಿ ಬಾರಿಸಬಲ್ಲೆ? ಏಳೆಂಟು ವಿಧದಲ್ಲಿ ಬಾರಿಸಬಲ್ಲೆ – ನನ್ನ ವಿನಮ್ರ ಉತ್ತರ. ಆಗ ಅವರು ಹೇಳಿದರು. ನಾನು ಕೇಳಿದ್ದು ಹಾಗಲ್ಲ. ಉದಾಹರಣೆಗೆ, ಧೀತರಿಕಿಟತಕತಾಂ ಧೀತರಿಕಿಟತಕತ–ತ್ತಾಂ ಈ ಬಿಡ್ತಿಗೆಯನ್ನು ಎಷ್ಟು ವಿಧವಾಗಿ ಬಾರಿಸಬಲ್ಲೆ? ಎಂದು. ನಾನು ನಿರುತ್ತರನಾದೆ. ಯಾಕೆಂದರೆ, ಆ ನಿಟ್ಟಿನಲ್ಲಿ ಯೋಚಿಸಲು ನಾನು ಆರಂಭಿಸಿಯೇ ಇರಲಿಲ್ಲ. ತಲೆ ಕೆಳಗೆ ಹಾಕಿದೆ.

ಆ ಕ್ಷಣದಲ್ಲಿ ಭೀಮವಾದಕನ ವಿರಾಟ್ ಸ್ವರೂಪದ ಭೌಮದರ್ಶನವನ್ನು ಕಾಣಲು ಆರಂಭಿಸಿದೆ. ಒಂದೊಂದೇ ತಾಳದಲ್ಲಿ ನಡೆ, ಬಿಡ್ತಿಗೆ, ಮುಕ್ತಾಯಗಳನ್ನು – ಪೂರ್ವ ರಂಗದಲ್ಲಿ ಕಲಿಯುವ ಮಕ್ಕಳಿಗಾಗಿ ಬಾರಿಸುವುದು ಹೇಗೆ, ಪರಂಪರೆಯ ಭಾಗವತಿಕೆಗೆ ಹೇಗೆ, ಸಂಗೀತ ಶೈಲಿಗೆ ಹೇಗೆ, ಸಾಮಾನ್ಯ ವಿಷಮ ಹೇಗೆ, ಮಹಾ ವಿಷಮ ಹೇಗೆ – ಹೀಗೆ ಹತ್ತು ಹಲವು ವಿಷಯಗಳನ್ನು ಪುಂಖಾನುಪುಂಖವಾಗಿ ಹೇಳಿಕೊಡಲು ಪ್ರಾರಂಭಿಸಿದಾಗ, ಕಡಲ ತಡಿಗೆ ಕೊಡವನ್ನು ಹಿಡಿದು ಹೋದವನ ಪರಿಸ್ಥಿತಿಯೇ ನನ್ನದಾಯಿತು. ನನ್ನಿಂದಾಗುವಷ್ಟನ್ನು ನನ್ನದಾಗಿಸಿಕೊಂಡೆ ಎಂಬುದಷ್ಟೇ ನನ್ನ ಸಮಾಧಾನ.

ವಿಷಮವನ್ನು ಕಲಿಸಿಕೊಡುವಾಗ ಗುರುಗಳು ತುಂಬಾ ನಿಷ್ಠುರರಾಗುತ್ತಿದ್ದರು. ಅದು ಕೋಪದಿಂದಲ್ಲ, ವಿಷಯದ ಮೇಲಿನ ಶ್ರದ್ಧೆಯಿಂದ. ಯಾವುದೇ ಒಂದು ವಿಷಮ ನಡೆ ಅಥವಾ ಬಿಡ್ತಿಗೆಯನ್ನು ಅವರು ಒಮ್ಮೆ ಹೇಳುತ್ತಾರೆ. ಆಮೇಲೆ ಅವರು ತಾಳ ಹಾಕಿದಾಗ ನಾನು ಅದನ್ನು ಹೇಳಬೇಕು. ಅದು ಸರಿಯಾಗಿ ಬಂದರೆ, ನಾನೇ ತಾಳ ಹಾಕಿಕೊಂಡು ಪುನಃ ಹೇಳಬೇಕು. ಅದೂ ಸರಿಯಾದರೆ ಮಾತ್ರ ಮದ್ದಲೆಯಲ್ಲಿ ಅದನ್ನು ಬಾರಿಸಿ ತೋರಿಸುತ್ತಾರೆ. ಆಗ ನಾನು ತಾಳ ಹಾಕಬೇಕು ಮತ್ತು ತಪ್ಪಬಾರದು. ಆಮೇಲೆ ಅವರು ತಾಳ ಹಾಕಿ, ನಾನು ಅದನ್ನು ಮದ್ದಲೆಯಲ್ಲಿ ಬಾರಿಸಿ ತೋರಿಸಬೇಕು. ಅದು ಕೂಡಾ ಸರಿಯಾದಾಗ, ಅವರೊಮ್ಮೆ ತೃಪ್ತಿಯಿಂದ ನಗುತ್ತಾರೆ. ಮತ್ತು ಅದನ್ನು ಇನ್ನೂ ಚಂದ ಮಾಡುವುದು ಹೇಗೆಂದು ನಯವಾಗಿ ಹೇಳಿಕೊಡುತ್ತಾರೆ. ಒಂದು ವೇಳೆ ಮೇಲೆ ಹೇಳಿದ ಯಾವುದೇ ಹಂತದಲ್ಲಿ ನಾನು ತಪ್ಪಿದೆನೋ, ಕೂಡಲೇ ಅದನ್ನು ನಿಲ್ಲಿಸಿ ಅದು ನಿನಗೆ ಬೇಡ, ಬೇರೆ ಹೇಳಿಕೊಡುತ್ತೇನೆ ಎಂದು ಕ್ಷಣಕಾಲ ನಿರಾಶೆಯನ್ನು ತೋರ್ಪಡಿಸಿ, ಇನ್ನೊಂದನ್ನು ಕಲಿಸಲು ಪ್ರಾರಂಭಿಸುತ್ತಿದ್ದರು. ಹಾಗೆ ಒಮ್ಮೆ ಅರ್ಧಕ್ಕೆ ನಿಲ್ಲಿಸಿದ ನಡೆ, ಬಿಡ್ತಿಗೆಯನ್ನು ಮತ್ತೆ ಯಾವತ್ತೂ ಪುನರಾವರ್ತಿಸುತ್ತಿರಲಿಲ್ಲ. ಏಕೆಂದರೆ ಅವರ 'ವಿಷಮಭಂಡಾರ' ಎಂದೂ ಬರಿದಾಗುತ್ತಿರಲಿಲ್ಲ. ನನಗೆ ಮಾತ್ರ ಹೋದದ್ದು ಹೋಯಿತೆ!

ಒಂದು ತಿಂಗಳು ಹೇಗೆ ಕಳೆಯಿತೆಂಬುದೇ ಗೊತ್ತಾಗಲಿಲ್ಲ. ಏತನ್ಮಧ್ಯೆ, ಹಿಮ್ಮೇಳ ತರಗತಿಗಳನ್ನು ನಡೆಸುವ ಕ್ರಮವನ್ನೂ, ಪಠ್ಯವಿಷಯಗಳನ್ನೂ, ಯಾವುದಾದ ಮೇಲೆ ಯಾವುದೆಂಬ ಅನುಕ್ರಮಣಿಕೆಯನ್ನೂ, ಮನದಟ್ಟು ಮಾಡಿಸಿಕೊಟ್ಟರು. ಕೆಲವು ಸಮಯದ ಅನಂತರ ಕಿನ್ನಿಗೋಳಿಯ ಪದ್ಮನೂರಿನಲ್ಲಿ, ಪದ್ಮನಾಭ ಶೆಟ್ಟಿಗಾರ್, ಪಕ್ಷಿಕೆರೆ, ಇವರ ಮುತುವರ್ಜಿಯಿಂದ ಹಿಮ್ಮೇಳ ತರಗತಿಗಳು ಪ್ರಾರಂಭವಾದುವು. ಅವರ ಕೇಳಿಕೆಯ

ಮೇರೆಗೆ ಗುರುಗಳು ತರಗತಿಯನ್ನು ನಡೆಸಲು ಒಪ್ಪಿ, ಪ್ರತೀ ಭಾನುವಾರ ಬರಲು ಪ್ರಾರಂಭಿಸಿದರು. ಆಗ ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಏನೂ ಗೊತ್ತಿಲ್ಲದೇ ಬಾಲಪಾಠವನ್ನು ಕಲಿಯಲು ಬಂದವರಿಗೂ ಅವರು ಹೇಳಿಕೊಡುತ್ತಿದ್ದ ರೀತಿ, ತಾನೂ ಅವರ ಮಟ್ಟಕ್ಕೆ ಇಳಿದು, ತಿದ್ದುತ್ತಿದ್ದ ಜಾಣ್ಮೆಯನ್ನು ನೋಡಿ, ತರಗತಿಗಳನ್ನು ನಡೆಸುವ ಬಗ್ಗೆ ಅವರು ನನಗೆ ಹೇಳಿಕೊಟ್ಟದ್ದೆಲ್ಲವನ್ನೂ ಪ್ರತ್ಯಕ್ಷ ಕಂಡು, ಮನನ ಮಾಡಿಕೊಳ್ಳುವ ಸೌಭಾಗ್ಯ ನನ್ನದಾಯಿತು. ಅನಾರೋಗ್ಯ ಅಥವಾ ಅನ್ಯ ಕಾರಣಗಳಿಂದ ಅವರಿಗೆ ಬರಲು ಸಾಧ್ಯವಾಗದೇ ಹೋದಾಗ, ತರಗತಿಯನ್ನು ನಡೆಸುವಂತೆ ನನಗೆ ಹೇಳುತ್ತಿದ್ದರು. ನನ್ನ ಮೇಲಿನ ಭರವಸೆಯ ದ್ಯೋತಕಪಿದು ಎಂದು ಭಾವಿಸಿದ ನಾನು, ಅವರು ಹಾಕಿಕೊಟ್ಟ ಹಾದಿಯಲ್ಲಿಯೇ ತರಗತಿಗಳನ್ನು ಮುಂದುವರಿಸಿ, ಗುರುಗಳ ಶ್ಲಾಘನೆಗೂ, ಕೃಪೆಗೂ ಪಾತ್ರನಾದೆ ಎಂಬುದೊಂದು ಧನ್ಯತೆಯ ಭಾವ ನನಗೆ.

ನ್ಯಾಯನಿಷ್ಠುರರಾಗಿದ್ದ ಗುರುಗಳು, ಕೆಲ ವರ್ಷ ತಿರುಗಾಟದಿಂದ ದೂರ ಉಳಿದಿದ್ದರು. ಇದಕ್ಕೆ ಕಾರಣವನ್ನೂ ಅವರೇ ಹೇಳಿದ್ದಾರೆ. 'ಕೆಲವು ಯಜಮಾನರು ನನಗಾಗ್ಲಿಲ್ಲ, ಇನ್ನು ಕೆಲವು ಯಜಮಾನರಿಗೆ ನಾನಾಗ್ಲಿಲ್ಲ.' ಹೀಗಾಗಿ, ಗುರುಗಳ ಯೋಗ್ಯತೆಗೆ ತಕ್ಕಷ್ಟು ಪ್ರಚಾರ ಸಿಗಲಿಲ್ಲ. ಅದನ್ನು ಅವರು ಬಯಸಿಯೂ ಇರಲಿಲ್ಲ. ಅತ್ಯಂತ ನಿಸ್ಪೃಹ ವ್ಯಕ್ತಿಯಾಗಿದ್ದ ಗುರುಗಳು, ಕೊಟ್ಟ ಸಂಭಾವನೆಯನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದರು. ತರಗತಿಗಳಿಗೆ ಬರುವಾಗಲೂ ಅಷ್ಟೇ. ಬಸ್‌ಚಾರ್ಜ್ ಕೊಟ್ಟರೆ ಸಾಕೆಂದು ಹೇಳುತ್ತಿದ್ದರು. ನಾವೇ ಒತ್ತಾಯ ಪೂರ್ವಕವಾಗಿ, ನಮ್ಮಿಂದ ಆಗುವಷ್ಟು ಹೆಚ್ಚಿನ ಮೊತ್ತವನ್ನು, ಗೌರವದಿಂದ ಅವರ ಕೈಯಲ್ಲಿ ಇಡುತ್ತಿದ್ದೆವು.

ಗುರುಗಳು ಕಲಿಸಿ ದಣಿಯುತ್ತಲೇ ಇರಲಿಲ್ಲ. ತರಗತಿಯಲ್ಲಿ, ಬಸ್ ಕಾಯುತ್ತಿರುವಾಗ, ಬಸ್ಸಿನಲ್ಲಿ ಹೋಗುತ್ತಿರುವಾಗ, ಊಟ ಮಾಡುವಾಗ, ಮಲಗುವ ತಯಾರಿ ಮಾಡುತ್ತಿರುವಾಗ – ಎಲ್ಲಿ ಬೇಕೆಂದರೆ ಅಲ್ಲಿ, ಒಂದು ವಿಷಯದ ಕುರಿತು ಕೇಳಿದರೆ, ಆಯಾಸದ ಪರಿವೆ, ಸುತ್ತಲಿನ ಪರಿವೆಯೇ ಇಲ್ಲದೆ, ಉತ್ತರಿಸುತ್ತಿದ್ದರು. ಬಾರಿಸಿ ತೋರಿಸಲು ಏನೂ ಸಿಗದಿದ್ದರೆ, ತಮ್ಮ ಬೆರಳುಗಳಿಂದ ನಮ್ಮ ಭುಜದ ಮೇಲೋ, ಎದೆಯ ಮೇಲೋ ಬಾರಿಸಿ ತೋರಿಸುತ್ತಿದ್ದರು. ಅದು ನೇರವಾಗಿ ನಮ್ಮ ಮನಸ್ಸಿನ ಆಳಕ್ಕೆ ಇಳಿದು ಬೇರೂರುತ್ತಿತ್ತು. ಗುರುಗಳು, ಕಲಿಸುವುದನ್ನು ಪ್ರೀತಿಸುತ್ತಿದ್ದರು. ತಾನು ಕಲಿಸಿಕೊಟ್ಟದ್ದನ್ನು ಸರಿಯಾಗಿ ಬಾರಿಸಿ ತೋರಿಸಿದರೆ, ತುಂಬಾ ಆನಂದ ಪಡುತ್ತಿದ್ದರು. ಅವರ ಕಣ್ಣುಗಳು ಮಿನುಗುತ್ತಿದ್ದವು ಮತ್ತು ನಾಲಿಗೆ, ಇನ್ನೂ ಕಷ್ಟಕರವಾದ ಪಾಠವನ್ನು ಕಲಿಸಲು ಸಜ್ಜಾಗುತ್ತಿತ್ತು.

ಒಂದು ದಿನ ಎಲ್ಲವೂ ಮುಗಿದು ಹೋಯಿತು. ಭೀಮ–ಶಿವಲಯದಲ್ಲಿ ಲೀನರಾಗಿ ಹೋದರು. ಅವರ ಅದಮ್ಯ ನಿರಂತರ ಉತ್ಸಾಹಕ್ಕೆ, ಚಿರಂತನ ಪ್ರಯೋಗಶೀಲತೆಗೆ ಇದು ನುಡಿದಕ್ಷಿಣೆ.

## ಅನುಬಂಧ 1

**ಯಕ್ಷಗಾನ ತಾಂಡವ ನೃತ್ಯ : ಕಲ್ಪಿತ**
ಪ್ರಧಾನ ಪರಿಕಲ್ಪನೆ: ದಿವಾಣ ಭೀಮ ಭಟ್ಟ ಮತ್ತು ಮಂದಾರ ಕೇಶವ ಭಟ್ಟ
ಸಹಕಾರ:ಕಟೀಲು ಲಕ್ಷ್ಮೀನಾರಾಯಣ ಭಟ್ಟ (ವೇಷ), ಕಟೀಲು ಮುರಲೀಧರ ಭಟ್ಟ (ಮದ್ದಲೆ)
ಪ್ರಾರಂಭ: ಪೀಠಿಕೆಯ ಪ್ರಾರಂಭದಂತೆ (ಕೆಳಗೆ ಸೂಚಿಸಿದೆ)

ಈ ಭಾಗವನ್ನು ಜಲ್ದಿಯಲ್ಲಿ ಮುಂದುವರಿಸುತ್ತಾ ಹೋಗಿ, ಮುಕ್ತಾಯದ ನಂತರ ಆ ಲಯದ ಸರೀ ಇಮ್ಮಡಿ ಅಳತೆಯ ಲಯದ ಏಕತಾಳವನ್ನು ಜಾಗಟೆಯಲ್ಲಿ ಬಾರಿಸಬೇಕು.

ದಿಗೃದಿಗೃದಿಗೃದಿ। ದೀಂಗಿಣ ದಿಗೃದಿ। ದೀಂಗಿಣ ದಿಗೃದಿ. . . . ಡಗಡಗಡಗಡಗ। ಡಾಂ
(ಮುಕ್ತಾಯ)–ತರಿಕಿಟ। ದದ್ದಿಂದತ್ತಾ। ಕಿಟತಕತರಿಕಿಟ। ತಕ್ಕಿಟಾಂದಿಂ। ದತ್ತಾದದಿಗಿಣ ಏಕ1
ಡಡ್ಡಾಂಗ್ರ । ಡಡ್ಡಾಂಗ್ರ । ಡಡ್ಡಾಂಗ್ರ । ಥಿಂ, ತರಿಕಿಟ । (3 ಸಲ)
ಡಡ್ಡಾಂಗ್ರ । ಥಿಂ, ತರಿಕಿಟ ।(2 ಸಲ). ಡಡ್ಡಾಂಗ್ರ । ಥಿಂ, ಡ । ಡಿಂ, ಡ । ಡಿಂ, ಡ । ಡಿಂ
(ಮುಕ್ತಾಯ)–ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ ಏಕ 2
ಧೀಂಕಿಟಾಂ ಕಿಟ । ಧೀಂಕಿಟಾಂ ತ । ಧ್ಧೀಂಕಿಟಾಂ ಕಿಟ । ಧಿಂ– (3 ಸಲ)
ತ । ಧ್ಧೀಂಕಿಟಾಂ ಕಿಟ । ಧಿಂ (3 ಸಲ) ಕಿಟ । ಧಿಂ(3 ಸಲ)
(ಮುಕ್ತಾಯ)–ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ ಏಕ 3
ಕಿಟತಕತರಿಕಿಟ । ಕಿಟತಕತರಿಕಿಟ । ಕಿಟತಕತರಿಕಿಟ । ಧಿಂ, ತತ್ತಾಂ (3 ಸಲ)
ಕಿಟತಕತರಿಕಿಟ ।ಧಿಂ, ತತ್ತಾಂ ।(2 ಸಲ) ಕಿಟತಕತರಿಕಿಟ ।ಧಿಂ (1 ಸಲ). ತರಿಕಿಟ ।ದಿಂ (3 ಸಲ)
(ಮುಕ್ತಾಯ)–ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ ಮಟ್ಟೆ
ಧಿತ್ತದಿನ್ನಾಂ । ಧಿತ್ತದಿನ್ನಾಂ । ತತಾಂ ತತಾಂ । ದಿಂ, ತತಾಂ (3 ಸಲ)
ಧಿತ್ತದಿನ್ನಾಂ । ದಿಂ, ತತಾಂ (3 ಸಲ) । ದಿಂ, ತತಾಂ । (4 ಸಲ). ತತಾಂ । ದಿಂ (3 ಸಲ)
(ಮುಕ್ತಾಯ) – ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ

ರೂಪಕ
ತಕಿಟತಾಂ । ತಕಿಟತಾಂ । ತಕಿಟ ತಕಿಟ । ತಕಿಟತಕಿಟದಿಂ । (3 ಸಲ)
ತಕಿಟತಾಂ । ತಕಿಟದಿಂ । (3 ಸಲ) । ತಕಿಟದಿಂ । (3 ಸಲ) ತಕಿಟತಕಿಟದಿಂ (3 ಸಲ)
(ಮುಕ್ತಾಯ) – ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ
ನಿಧಾನ ಜಂಪೆ
ತೋಕಿಟತಕ । ದಾಂದಾಂ । ದಾಂ ತೋ । ಕಿಟತಕ ದಾಂ । ದಾಂದಾಂ ।
ದೀಂಕಿಟತಕ। ದ ದ್ದಿಂ। ದ ತ್ತಾ। ಕಿಟತಕತರಿಕಿಟ। ಕತ್ತಾದದಿಗಿಣ (ಈ 2ಸಾಲು 3ಸಲ)+ತೊ
(ಮುಕ್ತಾಯ) – ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ
ತ್ವರಿತ ಜಂಪೆ
ತಕತಕಿಟ । ತಕತಕಿಟ । ತಕತಕಿಟ । ಖತ್ತಾಂ । (3 ಸಲ) ತಕತಕಿಟ । ಖತ್ತಾಂ । (3 ಸಲ)
। ಖತ್ತಾಂ । 4 ಬಾರಿ. । ತಕತಕಿಟತಕತಕಿಟ । ದಿಂ (3 ಸಲ)
(ಮುಕ್ತಾಯ)–ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ ಅಷ್ಟ
ತದ್ದಿನ್ನ । ತಕದಿನ್ನ । ತದ್ದಿನ್ನ । ತಕದಿನ್ನ । ದಿಂ, ಕಿಟ । ತಕತದದಿಗಿಣ (3 ಸಲ)
ತದ್ದಿನ್ನ । ತಕದಿನ್ನ । ದಿಂ, ಕಿಟ । ತಕತದದಿಗಿಣ (3 ಸಲ)
ದಿಂ, ಕಿಟ । ತಕತದದಿಗಿಣ (3 ಸಲ) ದದಿಗಿಣ । ದಿಂ (3 ಸಲ)

(ಮುಕ್ತಾಯ)–ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ
ಅಂತ್ಯ

ತದ್ದಿನ್ನ ತಕದಿನ್ನ । ತೊಂಕತ್ತಾಂ ತರಿಕಿಟಖತ್ತಾಂ । – ಎಂದು ಬಾರಿಸುತ್ತಾ ಜಲ್ದಿಗೆ ಹೋಗಿ, ತೊಂಕತ್ತಾಂ ದಿದಿ । ಎಂದು ಹಲವಾರು ಸಲ ಬಾರಿಸಿ, ಕೊನೆಗೆ । ದೀಂ, ತರಿಕಿಟತಕತರಿ ।

ಕಿಟತಕತರಿಕಿಟತಕತರಿಕಿಟತಕ । ತರಿಕಿಟತಕತರಿಕಿಟತಕತರಿಕಿಟ . . . . . . . . . . . . . . . . ಎಂದು ಉರುಳಿಕೆ ಬಾರಿಸಿ, ಅಥವಾ ರಗ್‌ರಗ್ ಬಾರಿಸಿ, । ಧಿಂ.

(ಮುಕ್ತಾಯ) – ತರಿಕಿಟ । ದದ್ದಿಂದತ್ತಾ । ಕಿಟತಕತರಿಕಿಟ । ತಕ್ಕಿಟಾಂದಿಂ । ದತ್ತಾದದಿಗಿಣ । ತೊ

---------------------------

ಇದಕ್ಕೆ ಯಕ್ಷಗಾನ ಶೈಲಿಯ ವಿವಿಧ ಚಲನೆಗಳನ್ನು ಕುಣಿತಗಳನ್ನು ಕಲ್ಪಿಸಿ ಅಳವಡಿಸಿ ಪ್ರದರ್ಶಿಸಿದ್ದೆವು. ಸೂಕ್ತವಾದ ಒಂದು ನೃತ್ಯವೆಂದು ಹಲವರು ಹೇಳಿದರೂ, ಅದನ್ನು ಮತ್ತೆ ಮುಂದುವರಿಸಿ ಪ್ರಚುರಪಡಿಸಲು ಸಾಧ್ಯವಾಗಲಿಲ್ಲ.

**ಅನುಬಂಧ 2:**

**ಭೀಮೋವಾಚ**

- ರಾಗಗಳಲ್ಲಿ ಮೇಲುಸ್ಥಾಯಿಯ ಸಂಚಾರವೇ ಆಟಕ್ಕೆ ಹೆಚ್ಚು ಬಳಕೆಯಲ್ಲಿರುವುದರಿಂದ, ಕೆಳಸ್ಥಾಯಿಯ ಸಂಚಾರ ಕಡಿಮೆ ಇರುವುದರಿಂದ, ರಾಗಕ್ಕೆ ಶುದ್ಧತೆ ಬರಲಿಲ್ಲವೆಂದು ಸಂಗೀತಜ್ಞರು ಹೇಳಲಿಕ್ಕೆ ಸಾಕು. ಅದು ಸರಿಯಲ್ಲ.
- ಎಲ್ಲಾ ಭಾಗವತರೂ ಒಬ್ಬನ ಮೈಮೇಲೆ ಬರುವುದು, (ಅನುಕರಣೆ ಹಾಡುಗಾರಿಕೆ), ಅವನ ಸ್ವಂತದ್ದು ಏನೂ ಇಲ್ಲದೇ ಇರುವುದರಿಂದ. ಈ ಅಂಧಾನುಕರಣೆಗೆ ಈಗೀಗ ಮನ್ನಣೆಯೂ ದೊರಕುತ್ತಿದೆ.
- ಭಾಗವತಿಕೆಯೆಂಬುದು ಮನೆಯ ಅಡಿಪಾಯದ ಕಲ್ಲು. ಅದುವೇ ಅಲುಗಾಡುತ್ತಿದ್ರೆ, ಮೇಲಿನ ಗೋಡೆ ಮಾಡುಗಳು ನಿಲ್ಲುವುದಾದರೂ ಹೇಗೆ?
- ಕೆಲವು ಭಾಗವತರು ಎರಡು ಗಂಟೆಗೊಮ್ಮೆ ಶ್ರುತಿ ಏರಿಸಿ, ಬೆಳಗಿನ ಜಾವಕ್ಕೆ ಶ್ರುತಿಯಲ್ಲಿ ಲೀನವಾಗುವ ಬದಲು ಶ್ರುತಿ ಹಿಡಿದು ನೇತಾಡುತ್ತಾರೆ. ಒಂದೇ ಶ್ರುತಿಯಲ್ಲಿ ಕಾಲ ಭೇದಗಳನ್ನು ತೋರಿಸುವ ರಾಗ ಹಾಕಿ ಹಾಡುವುದು ಒಳ್ಳೇದಲ್ಲವೆ?
- ಯಾವುದೇ ವೇಷದವ ಬಣ್ಣಗಾರಿಕೆಯಲ್ಲಿ ಉದಾಸೀನ ಮಾಡಬಾರದು. ಅರ್ಧಗಂಟೆಯ ಕೆಲಸಕ್ಕಾಗಿ 3–4 ಗಂಟೆ ಚುಟ್ಟಿ ಇಟ್ಟು ಶ್ರದ್ಧೆಯಿಂದ ವೇಷ ಕಟ್ಟಿಕೊಳ್ಳುವ ಬಣ್ಣದ ವೇಷದವರನ್ನು ನೋಡಿಯಾದರೂ ಕಲಿಯಬೇಕು.
- ಆಟದಲ್ಲಿ ಭಾಗವತ, ಮದ್ದಲೆಗಾರ, ವೇಷದವ– ಈ ಮೂವರೂ ಒಮ್ಮತದಿಂದ ಕೆಲಸ ಮಾಡಿದರೆ, ಬಾಡಿಗೆಗೆ ತರಬೇಕಾದ್ದು ನಮಗೆ ಯಾವ ವಸ್ತುವೂ ಇಲ್ಲ.
- ಈಗಿನ ಕಾಲದಲ್ಲಿ ಮುಖಕ್ಕೆ ತಕ್ಕ ಮಾತಾಡಲು ಯಾರಿಗೆ ಗೊತ್ತಿಲ್ಲವೋ ಅವ ರಂಗದಿಂದ ಹೊರಕ್ಕೆ ಬಿದ್ದ ಎಂಬುದರಲ್ಲಿ ಅನುಮಾನವೇ ಇಲ್ಲ.
- ತಪ್ಪು ಯಾರೇ ಮಾಡಿದ್ರೂ ತಿದ್ದುವ ಹಕ್ಕು ತಿಳಿದವರಿಗಿದೆ ಖಂಡಿತ.
- ತಪ್ಪನ್ನು ಒಪ್ಪಿಕೊಳ್ಳುವ ಬುದ್ಧಿ ಎಲ್ಲರಲ್ಲಿಯೂ ಇರಬೇಕು.
- ಆಟದ ಅನ್ನವನ್ನೇ ತಿಂದುಕೊಂಡು, ಆಟವನ್ನು ಬೈದುಕೊಂಡು ಇರುವ ಕೃತಘ್ನರು ನಾವಾಗಬಾರದು.
- ಗೊತ್ತಿಲ್ಲದ ನೂರು ಜನ ಮೆಚ್ಚುವುದಕ್ಕಿಂತ, ಗೊತ್ತಿರುವ ಒಬ್ಬ ಮೆಚ್ಚಿದ್ರೆ ಸಾಕು.

# ಕಲಾಮಯ ಬಂಧು

**ಮಹಾಬಲ ಭಟ್ ಎಸ್.**
**ಕಲಾವಿದರು**
ಮಂಚಿ – ಸುಳ್ಯ ಮನೆ
ಮಂಚಿ ಗ್ರಾಮ ಮತ್ತು ಅಂಚೆ,
ಬಂಟ್ವಾಳ ತಾಲೂಕು,
ದಕ್ಷಿಣಕನ್ನಡ – 574 323

ದಿವಾಣ ಭೀಮ ಭಟ್ಟರು ನನ್ನ ತಾಯಿಯ ಸೋದರಮಾವನ ಮಗ. ನನ್ನ ತಂದೆ ದಿವಂಗತ ರಾಮ ಭಟ್ಟರು ಮತ್ತು ತಾಯಿ ದಿವಂಗತ ಸರಸ್ವತಿ ಅಮ್ಮನವರು ಭೀಮ ಭಟ್ಟರನ್ನು ಬಂಗಾರು ಎಂದೇ ಕರೆಯುತ್ತಿದ್ದರು. ಮಕ್ಕಳಾದ ನಮಗೆಲ್ಲರಿಗೂ ಅವರು ಬಂಗಾರಪ್ಪಚ್ಚಿಯಾಗಿದ್ದರು. ನಮ್ಮಲ್ಲಿ ಆಗಾಗ ಯಕ್ಷಗಾನ ಕಾರ್ಯಕ್ರಮಗಳು, ತಾಳಮದ್ದಳೆಗಳೂ ನಮ್ಮ ತಂದೆಯವರ ಮುತುವರ್ಜಿಯಿಂದ ನಡೆಯುತ್ತಿತ್ತು. ಭೀಮ ಭಟ್ಟರಿಲ್ಲದೆ ಈ ಕಾರ್ಯಕ್ರಮಗಳೆಂದೂ ಪೂರ್ಣಗೊಂಡದ್ದೇ ಇಲ್ಲ. ನಮ್ಮಣ್ಣ ದಿವಂಗತ ನಾರಾಯಣ ಭಟ್ಟರು ಭೀಮ ಭಟ್ಟರ ಶಿಷ್ಯರಾಗಿದ್ದರು. ಅವರು ಕೆಲವು ವರ್ಷಗಳ ಕಾಲ ಕೋಡಪದವು ವೀರಾಂಜನೇಯ ಪ್ರಸಾದಿತ ಮೇಳದಲ್ಲಿ ಕಲಾವಿದರಾಗಿ ದುಡಿದಿದ್ದರು. ನಾನು ಮತ್ತು ನನ್ನಣ್ಣ ದಿವಂಗತ ಸುಳ್ಯ ಸುಬ್ರಾಯ ಭಟ್ಟರು ಕೂಡಾ ಭೀಮ ಭಟ್ಟರಿಂದಲೇ ಕಲಿತವರು. ಅದರಿಂದಾಗಿಯೇ ನಮ್ಮೂರು ಕುಕ್ಕಾಜೆಯ ಯಕ್ಷಗಾನ ಕಲಾವಿಕಾಸ ಸಂಘದಲ್ಲಿ ಹವ್ಯಾಸಿಯಾಗಿ ಕಾರ್ಯಕ್ರಮಗಳನ್ನು ನೀಡಲು ಸಾಧ್ಯವಾದದ್ದು.

ಆಗ ಅಂದರೆ ಸುಮಾರು 1950–60ರ ಕಾಲದಲ್ಲಿ ನಮ್ಮ ಮನೆಯಲ್ಲಿ ಬಹಳ ವಿಜೃಂಭಣೆಯಿಂದ ತ್ರಿಕಾಲ ಪೂಜೆ ನಡೆಯುತ್ತಿತ್ತು. ಆದರೆ ವಿಶೇಷತೆಯೆಂದರೆ ಸುಮಾರು ಅರ್ಧ ಮುಕ್ಕಾಲು ಗಂಟೆಯ ಕಾಲ ನಡೆಯುತ್ತಿದ್ದ ಮಂಗಳಾರತಿಯ ವೈಭವ. ಇದಕ್ಕೆ ಶಂಖ ಜಾಗಟೆಗಳ ಜೊತೆಗೆ ನಮ್ಮಣ್ಣ ನಾರಾಯಣ ಭಟ್ಟರ ಮದ್ದಳೆ, ದಿವಾಣದವರ ಚೆಂಡೆಯೂ ಇರುತ್ತಿತ್ತು. ನನ್ನ

ಕ್ಕನ ಮಗ, ಈಗಿನ ಪ್ರಸಿದ್ಧ ಭಾಗವತರಾದ ತೆಂಕಬೈಲು ತಿರುಮಲೇಶ್ವರ ಶಾಸ್ತ್ರಿಗಳು
ಆಗ ಸಣ್ಣ ಹುಡುಗ. ಅಜ್ಜನ ಮನೆಗೆ ಪೂಜೆಗೆ ಬಂದಿದ್ದವನು ಮಲಗಿದ್ದ. ಈ ಸದ್ದಿಗೆ
ಎಚ್ಚೆತ್ತು ಕಣ್ಣುಜ್ಜಿಕೊಂಡು ಬಂದವನಿಗೆ ಕಾಣಿಸಿದ್ದು ವೀರಾವೇಶದಿಂದ ಚೆಂಡೆ ಬಾರಿಸುತ್ತಿದ್ದ
ದಿವಾಣರು. 'ಹೋಯ್ ಮುರಿಗು ಚೆಂಡೆ... ನಿಲ್ಸು ನಿಲ್ಸು...' ಎಂದು ಬೊಬ್ಬೆ ಹೊಡೆಯುತ್ತಾ
ಅವರನ್ನು ಚೆಂಡೆ ನಿಲ್ಲಿಸಲು ಒತ್ತಾಯಿಸಿದ್ದರು ಬಾಲಕನಾಗಿದ್ದ ಶಾಸ್ತ್ರಿಗಳು. ಹಾಗಿತ್ತು ಅವರ
ಅಬ್ಬರದ ಚೆಂಡೆ ಪೆಟ್ಟುಗಳು. ಡಾ. ಎಮ್. ಪ್ರಭಾಕರ ಜೋಶಿಯವರು ಹೇಳುವಂತೆ
ದಿವಾಣರು 'ಚೆಂಡೆಪ್ರಚಂಡ'ರೇ ಆಗಿದ್ದರು. ಭೀಮ ಭಟ್ಟರ ಚೆಂಡೆ ಮದ್ದಳೆಗಳೆಂದರೆ
ಅದೊಂದು ಅದ್ಭುತ ಕೈಚಳಕ ಮತ್ತು ಅನುಭವೀ ಪೆಟ್ಟುಗಳ ಸಮ್ಮಿಲನ. ಸ್ಪಷ್ಟವಾದ ತಾಳನಡೆ
ಮತ್ತು ಕರಾರುವಕ್ಕಾದ ಲೆಕ್ಕಾಚಾರವನ್ನು ಒಳಗೊಂಡ ಚೆಂಡೆ ಮೃದಂಗ ಎರಡನ್ನೂ
ನುಡಿಸುತ್ತಿದ್ದರು. ಖ್ಯಾತ ಅರ್ಥದಾರಿಯೂ, ವಕೀಲರೂ ಆಗಿದ್ದ ದಿವಂಗತ ಶ್ರೀ ಮುಳಿಯ
ಮಹಾಬಲ ಭಟ್ಟರು ನಡೆಸಿದ ಯಕ್ಷಗಾನ ಹಾಡುಗಾರಿಕೆಯ ಕಮ್ಮಟವೊಂದು ಕಟೀಲಿನಲ್ಲಿ
ನಡೆದಿತ್ತು. ಕಮ್ಮಟದಲ್ಲಿ ಚೌ ತಾಳದ ಪ್ರಾರಂಭದಿಂದ ಮೂರು ಮುಕ್ತಾಯದ ಪದ್ಯವನ್ನು
ಅಲ್ಲಿದ್ದ ಯಾವುದೇ ಭಾಗವತರಿಂದ ಹಾಡಲು ಸಾಧ್ಯವಾಗದೇ ನೆಡ್ಲೆ ನರಸಿಂಹ ಭಟ್ಟರು
ಮತ್ತು ದಿವಾಣರು ಆ ಪದವನ್ನು ಹಾಡಿ ತೋರಿಸಿದ್ದರು. ಚೆಂಡೆ ಮದ್ದಳೆಗಳನ್ನು ಶ್ರುತಿ
ಮಾಡುವುದರಲ್ಲಿಯೂ ದಿವಾಣರು ಸಿದ್ಧಹಸ್ತರು. ನಿಧಾನ ಝಂಪೆ ತಾಳದ ಪದ್ಯವನ್ನು
ನಿಧಾನ ಝಂಪೆಯಲ್ಲಿ ಹೇಳುತ್ತಾ ತ್ವರಿತ ಝಂಪೆಯಲ್ಲಿ ಅದಕ್ಕೆ ಮದ್ದಳೆ ನುಡಿಸುತ್ತಾ
ಜಿಡ್ತಿಗೆ ಮುಕ್ತಾಯವನ್ನು ಬಹಳ ಜಾಣ್ಮೆಯಿಂದ ನುಡಿಸುತ್ತಿದ್ದರು. ತಾಳ ನಿಧಾನ ಝಂಪೆ,
ಮದ್ದಳೆ ತ್ವರಿತ ಝಂಪೆಯಲ್ಲಿ ಅಷ್ಟು ಕರಾರುವಕ್ಕಾಗಿ ನಡೆ ಮುಕ್ತಾಯ ಬಾರಿಸುವ ಚಾಕಚಕ್ಯತೆ
ಅವರದ್ದು.

ದಿವಂಗತ ಮುಳಿಯ ಮಹಾಬಲ ಭಟ್ಟರ ಸಂಪಾದಕತ್ವದ 'ಯಕ್ಷಗಾನ ಮಕರಂದ'ದಲ್ಲಿ
ತೆಂಕು ತಿಟ್ಟಿನ ತಾಳಗಳ ಬಗ್ಗೆ ದಿವಾಣರು ವಿಸ್ತೃತವಾಗಿ ಬರೆದಿದ್ದಾರೆ. ಇದು ಕೂಡಾ
ಮುಳಿಯರ ಒತ್ತಾಯಕ್ಕೆ ದಿವಾಣರು ತಾಳಗಳನ್ನು ಹೇಳಿ ಹಸ್ತಪ್ರತಿಯನ್ನು ನನ್ನಿಂದ
ಬರೆಸಿದ್ದರು.

ದಿವಂಗತ ಹಿರಿಯ ಬಲಿಪ ನಾರಾಯಣ ಭಾಗವತರೊಂದಿಗೂ ಮದ್ದಳೆಗಾರರಾಗಿ.
ದಿವಂಗತ ನೆಡ್ಲೆಯರ ಜೊತೆಯಲ್ಲೇ ದುಡಿದವರು ದಿವಾಣರು. ಮೇರು ಕಲಾವಿದರಾದ
ನೆಡ್ಲೆಯವರೊಂದಿಗೆ ಅವರದ್ದು ಆತ್ಮೀಯ ಸಂಬಂಧ. ಆಗೆಲ್ಲ ಮಂಗಳೂರಿನಲ್ಲಿ
ತಾಳಮದ್ದಳೆಗಳು ನಡೆಯುತ್ತಿದ್ದವು. ಜೊತೆಯಲ್ಲಿ ಕಾರ್ಯಕ್ರಮ ನೀಡುತ್ತಿದ್ದ ನೆಡ್ಲೆ ಮತ್ತು
ದಿವಾಣರು ನಂತರ ರಾತ್ರಿಯನ್ನು ಸ್ನೇಹಿತ ಐತಾಳರಲ್ಲಿ ಕಳೆಯುತ್ತಿದ್ದರು. ಒಮ್ಮೆ ನೆಡ್ಲೆಯವರಿಗೆ
ಬೆಳಗ್ಗೆ ಬೇಗನೆ ಎದ್ದು ಹೋಗಬೇಕಾಗಿದ್ದ ಕಾರಣ ದಿವಾಣರು ಏಳುವ ಮೊದಲೇ ಅವರು
ಹೊರಟು ಹೋಗಿದ್ದರು. ನಂತರ ಎದ್ದ ದಿವಾಣರು ಪಕ್ಕದಲ್ಲಿದ್ದ ತಮ್ಮ ಅಂಗಿಗಾಗಿ
ಅರಸಿದರು. ನೋಡಿದರೆ ಅವರ ಅಂಗಿ ಎಲ್ಲೂ ಇಲ್ಲ. ಕತ್ತಲೆಯಲ್ಲಿ ಗೊತ್ತಾಗದೆ ನೆಡ್ಲೆಯವರು
ದಿವಾಣರ ಅಂಗಿಯನ್ನು ಏರಿಸಿಕೊಂಡು ಹೋಗಿದ್ದರು. ವಿಷಯ ತಿಳಿದ ದಿವಾಣರು
ಮರುಮಾತಿಲ್ಲದೆ ನೆಡ್ಲೆಯವರ ಅಂಗಿಯನ್ನು ಹಾಕಿಕೊಂಡು ಹೊರಟರಂತೆ. ದಿವಂಗತ
ಅಗರಿ ಶ್ರೀನಿವಾಸ ಭಾಗವತರು ದಿವಾಣರಿಗೆ ಅಚ್ಚುಮೆಚ್ಚಿನ ಭಾಗವತರಾಗಿದ್ದರು. ಸುರತ್ಕಲ್

ಮೇಳದಲ್ಲಿ ಅಗರಿಯವರೊಂದಿಗೆ ಪ್ರಸಿದ್ಧಿಯ ಉತ್ತುಂಗಕ್ಕೇರಿದವರು ದಿವಾಣರು. ಅದು ಅವರ ಸ್ಮರಣೀಯ ಉತ್ತುಂಗದ ಕಾಲ. ಅತ್ಯುತ್ತಮ ಕಲಾವಿದರಾಗಿದ್ದ ದಿವಾಣರು ಕೆಲವೊಮ್ಮೆ ತಮ್ಮ ಪ್ರೌಢ ಕಲೆಗಾರಿಕೆಯ ಪ್ರದರ್ಶನಕ್ಕೆ ವಿಷಮ ನಡೆಗಳನ್ನು ನುಡಿಸಿ ಭಾಗವತರನ್ನು ತಬ್ಬಿಬ್ಬುಗೊಳಿಸಿ ಅವರ ವಿರೋಧ ಕಟ್ಟಿಕೊಂಡದ್ದೂ ಇದೆ.

ಚೆಂಡೆ ವಾದನದ ನಾಡಿಯ ಪ್ರತಿ ಮಿಡಿತವನ್ನು ಬಲ್ಲವರಾಗಿದ್ದ ದಿವಾಣರ ಚೆಂಡೆಯನ್ನು ನಾವು ಕೇಳಿದ್ದೇವೆ, ನೋಡಿದ್ದೇವೆ. ಅವರು ನಮ್ಮ ಬಂಧು ಆ ಕಲಾನುಭೂತಿಯನ್ನು ಅನುಭವಿಸಿದ್ದೇವೆ ಎಂಬುದೇ ನಮಗಿರುವ ಸಾರ್ಥಕತೆ. ತಾನು ನಂಬಿದ ಕಲೆಯು ಕಲಾವಿದನನ್ನು ಅವನ ಕಾಲದ ಬಳಿಕವೂ ಜೀವಂತ ಇಡುವುದೆಂದರೆ ಈ ಭಾವಗಳೇ ಅಲ್ಲವೇ?



# ಸ್ಮರಣೀಯ ಗುರು

**ಪಿ. ಕೃಷ್ಣಮೂರ್ತಿ ರಾವ್**
**ಸಹಶಿಕ್ಷಕ**
ಭಾರತ ಮಾತಾ ಹಿರಿಯ ಪ್ರಾಥಮಿಕ ಶಾಲೆ
ಪುನರೂರು ಅಂಚೆ – 574 150
ಮಂಗಳೂರು ತಾಲೂಕು, ದಕ್ಷಿಣಕನ್ನಡ

ಸುಮಾರು ಹತ್ತು ಹದಿನೆರಡು ವರ್ಷಗಳ ಹಿಂದಿನ ನನ್ನ ಅನುಭವ. ದಿವಾಣ ಭೀಮ ಭಟ್ಟರು ಮತ್ತು ಮಂದಾರ ಕೇಶವ ಭಟ್ಟರು ಜಂಟಿಯಾಗಿ ಸುರತ್ಕಲ್ ಸದಾಶಿವ ಗಣೇಶ ದೇವಸ್ಥಾನದಲ್ಲಿ ವಾರಕ್ಕೊಮ್ಮೆ ಯಕ್ಷಗಾನ ತರಬೇತಿ (ಚೆಂಡೆ, ಮದ್ದಳೆ, ಹಾಡುಗಾರಿಕೆ ಆರಂಭದ ಪಾಠ) ನಡೆಸುತ್ತಿದ್ದರು. ಮಂದಾರರು ಸಂಗೀತ ರಾಗ ಜ್ಞಾನದ ಬಗ್ಗೆ ಪಾಠ ಹೇಳುತ್ತಿದ್ದರೆ ಭೀಮ ಭಟ್ಟರು ತಾಳಗತಿಯ ಬಗ್ಗೆ ಕಲಿಸುತ್ತಿದ್ದರು. ಆಗ ದಿವಾಣ ಭೀಮ ಭಟ್ಟರು ಪದೇ ಪದೇ ನಮ್ಮನ್ನು ಎಚ್ಚರಿಸುತ್ತಿದ್ದ ಒಂದು ಮಾತು ಹೀಗಿತ್ತು – "ಬಸ್ಸನ್ನಾದರು ನಿಲ್ಲಿಸಿ ನಿಲ್ಲಿಸಿ ಮುಂದೆ ಕೊಂಡು ಹೋಗಬಹುದು. ಆದರೆ ರಸ್ತೆಯನ್ನು ತುಂಡರಿಸಬಾರದು" ಎಂದು. ಈ ಮಾತು ಏಕೆ ಹೇಳುತ್ತಿದ್ದರೆಂದರೆ ನಾವು ಹಾಡುತ್ತಿರುವಾಗ ಕೆಲವೊಮ್ಮೆ ರಾಗದ ಕಡೆಗೆ ಗಮನ ಕೊಡುತ್ತಾ ತಾಳ ಹಾಕುವುದನ್ನು ನಿಲ್ಲಿಸಿ ಮತ್ತೆ ಮುಂದುವರಿಸಿಕೊಂಡು ಹೋಗುತ್ತಿದ್ದೆವು. ಆಗ ನಮಗೆ ಈ ರೀತಿ ಹೇಳಿ ನಮ್ಮನ್ನು ಎಚ್ಚರಿಸುತ್ತಿದ್ದರು. ಅವರು ತಾಳಗತಿಗೆ ರಾಗಕ್ಕಿಂತ ಹೆಚ್ಚಿನ ಮಹತ್ತ್ವ ಕೊಡುತ್ತಿದ್ದರು. ತಾಳಗತಿ ನಮ್ಮಲ್ಲಿ ಗಟ್ಟಿಯಾಗಿದ್ದರೆ ಯಾವುದೇ ಕೂಟದಲ್ಲಿ ಹಾಡಲು ಅಂಜಬೇಕಾಗಿಲ್ಲ ಎಂದು ಸದಾ ನಮ್ಮನ್ನು 'ತಾಳಗಟ್ಟಿ ಮಾಡಿ' ಎಂದು ಪ್ರೋತ್ಸಾಹಿಸುತ್ತಿದ್ದರು. ಅಂತಹ ಭೀಮ ಭಟ್ಟರು ಕಲಿಸಿದ ತಾಳಗಳ ಬಗ್ಗೆ ಇಂದೂ ನನ್ನಲ್ಲಿ ಗಟ್ಟಿತನದಲ್ಲಿ ಉಳಿದಿದೆ.

ಇಂತಹ ಗುರುಗಳನ್ನು ಪಡೆದ ನಾನು ಧನ್ಯ. ಅವರು ಸದಾ ಪ್ರಾತಃ ಸ್ಮರಣೀಯರು ಅನಿಸುತ್ತಿದೆ.

# ಯಕ್ಷರಂಗಕ್ಕೆ ದಿವಾನ

**ಕೆ. ಬಾಲಕೃಷ್ಣ ಆಚಾರ್ಯ**
**ರಾಷ್ಟ್ರ ಪ್ರಶಸ್ತಿ ಪುರಸ್ಕೃತ ನಿವೃತ್ತ ಶಿಕ್ಷಕ**
**'ಸೌರಭ', ಕೊರಂಗ್ರಪಾಡಿ – ಉಡುಪಿ**

ಸುಮಾರು 20–25 ವರ್ಷಗಳ ಹಿಂದಿನ ಮಾತು. ಕ್ರಿ.ಶ. 1992ರ ಸಮಯ ಇರಬೇಕು. ಕಿನ್ನಿಗೋಳಿಯಲ್ಲಿ ಯಕ್ಷ ಬಳಗದ ವತಿಯಿಂದ, ಭೀಮ ಭಟ್ಟರ ಸನ್ಮಾನ ಕಾರ್ಯಕ್ರಮವಿತ್ತು. ಕೊನೆಯಲ್ಲಿ ಬಲಿಪರ ಭಾಗವತಿಕೆ. ಭೀಮ ಭಟ್ಟರದು ಮದ್ದಳೆ ವಾದನ. ಜತೆಗೆ ಹೊಸ ಪ್ರಯೋಗವಾಗಿ ನನ್ನದು ಮೋರ್ಸಿಂಗ್‌ನ ಸಾಥಿ. ಲಯತಜ್ಞನಾಗದ ನಾನು ಅವರ ಕ್ಲಿಷ್ಟವಾದ ವೇಗದ ಮದ್ದಳೆ ಪೆಟ್ಟಿಗೆ ಅನುಸರಿಸಲಾಗದೆ, ಹಲವು ಸಲ ಬೇಸ್ತು ಬಿದ್ದುದಿದೆ. ಆದಾಗ್ಯೂ, ಅವರ ಪಕ್ಕದಲ್ಲೇ ಕುಳಿತು ನುಡಿಸುತ್ತಿದ್ದ ನನ್ನನ್ನು ಆಗಾಗ ಕಣ್ಸನ್ನೆ ಮೂಲಕ ನನ್ನ ಹೊಸ ಪ್ರಯೋಗ ಮುಂದುವರಿಸುವಂತೆ ಪ್ರೋತ್ಸಾಹಿಸುತ್ತಿದ್ದ ಅವರ ಉದಾರ ಹೃದಯ ವನ್ನು ಮರೆಯಲು ಸಾಧ್ಯವಿಲ್ಲ.

ನಾನಿದ್ದ ಪದ್ಮನೂರಿನ ಮನೆಯ ಪಕ್ಕದಲ್ಲಿ ಪ್ರತಿ ಆದಿತ್ಯವಾರ ಕೆಲವು ಘಂಟೆಗಳ ಕಾಲ ಭೀಮಭಟ್ಟರ ಯಕ್ಷಗಾನ ತರಗತಿಯಿತ್ತು. ನನ್ನ ಹುಡುಗ ಗುರುಚರಣ ಅವರ ತರಗತಿಗೆ ಹೋಗುತ್ತಿದ್ದ. ಮಧ್ಯಾಹ್ನ ಅವರಿಗೆ ಊಟ ನಮ್ಮಲ್ಲಿ. ಸರಳ ಮಿತ ಆಹಾರ, ಜತೆಗೆ ಸಜ್ಜನಿಕೆ.

ಯಕ್ಷಗಾನ ರಂಗದಲ್ಲಂತೂ, ಪ್ರತಿಯೊಂದು ಪ್ರಕಾರದಲ್ಲಿ ಭಾಗವತಿಗೆ ಇರಲಿ, ಚೆಂಡೆ ಇರಲಿ, ಮದ್ದಳೆ ಇರಲಿ ವೇಷ ಇರಲಿ, ಅವರೊಬ್ಬರು 'ದಿವಾನ'ರೇ ಆಗಿದ್ದರು. ಅವರು ತುಂಬಿದ ಕೊಡ. ಯಕ್ಷಗಾನದ ಸಂಪನ್ಮೂಲದ ಜ್ಞಾನ–ಅನುಭವಗಳ ಶ್ರೀಮಂತಿಕೆಯ ಜತೆಗೆ ತುಂಬು ವಿನಯ. ಚಿಕ್ಕವರಿಂದ ಹಿಡಿದು ಹಿರಿಯರ ವರೆಗೆ, ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ, ಸರಳ ವಿಧಾನದಲ್ಲಿ ಯಕ್ಷಗಾನದ ವಿವಿಧ ಪ್ರಕಾರಗಳ ಕಲಿಸುವಿಕೆ – ಬೋಧನೆ ಇವರದು. ವಯಸ್ಸನ್ನೂ ನಾಚಿಸುವಂತಹ, ಅದನ್ನು ಮೀರಿದ ಕಲೆಯ ಹುಚ್ಚು – ಹುಮ್ಮಸ್ಸು ಇವರದು.

ಯಕ್ಷರಂಗದ ಓ 'ದಿವಾನ' ! ಮದ್ದಳೆಯ ನಾದ–ನುಡಿಗೆ ಆದೆ 'ದಿವಾನ'! ನಿಮಗಿದೋ ಭಕ್ತಿಪೂರ್ವ 'ಕೃಷ್ಣ'ನ ನಮನ!!

# ಗುರು
# ದಿವಾಣ ಭೀಮ ಭಟ್ಟರು

**ಗುರುಚರಣ ಆಚಾರ್ಯ**
**ಕಲಾವಿದರು**
ಬೆಂಗಳೂರು

ಪೂಜ್ಯರಾದ ದಿವಾಣ ಭೀಮ ಭಟ್ಟರು ನನ್ನ ಮದ್ದಳೆ, ಚೆಂಡೆ ಗುರುಗಳು. ನಾನು ಪ್ರೌಢಶಾಲೆಯಲ್ಲಿ ಕಲಿಯುತ್ತಿರುವಾಗ ಕಿನ್ನಿಗೋಳಿ ಪದ್ಮನೂರಿನಲ್ಲಿ ವಾಸವಾಗಿದ್ದೆವು. ಆಗ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ಮದ್ದಳೆ, ಚೆಂಡೆ, ಭಾಗವತಿಕೆಯ ತರಗತಿ ಗಳು ಆದಿತ್ಯವಾರ ನಮ್ಮಂತಹ ವಿದ್ಯಾರ್ಥಿಗಳಿಗಾಗಿ ನಡೆಯು ತ್ತಿದ್ದುವು. ಯಕ್ಷಗಾನ ತರಬೇತಿಯ ತರಗತಿಗಳೂ ನಡೆಯುತ್ತಿದ್ದುವು.

ನಮ್ಮ ಗುರುಗಳ ಬಗ್ಗೆ ಹೇಳುವುದಾದರೆ ಸರಳ ಸಜ್ಜನಿಕೆಯ ವ್ಯಕ್ತಿ. ಆಗ ವಯೋವೃದ್ಧರಾಗಿದ್ದರೂ ಬಹಳ ಸಹನೆಯಿಂದ ನಮ್ಮಂತಹ ವಿದ್ಯಾರ್ಥಿಗಳಿಗೆ ಕಲಿಸುತ್ತಾ ಇದ್ದರು. ನನ್ನಲ್ಲಿ ಲಯದ ಬಗ್ಗೆ ಆಸಕ್ತಿಯನ್ನು ಹುಟ್ಟಿಸಿದವರು ಅವರೇ.

ಮಧ್ಯಾಹ್ನ ಊಟಕ್ಕೆ ನಾನು ನನ್ನ ಮನೆಗೆ ಕರೆದುಕೊಂಡು ಬರುತ್ತಾ ಇದ್ದೆನು. ನನ್ನ ಅಮ್ಮ ಅಜ್ಜಿ ಬಗೆ ಬಗೆಯ ಅಡುಗೆ ಮಾಡಿದರೂ ಅವರು ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಅವರು ಮಜ್ಜಿಗೆ ಅನ್ನ ಮಾತ್ರ ತೆಗೆದುಕೊಳ್ಳುತ್ತಿದ್ದರು. ಅಂತಹ ಸರಳ ವ್ಯಕ್ತಿ ಮಿತಭಾಷಿ ವ್ಯಕ್ತಿ.

# ನಾ ಕಂಡ ದಿವಾಣ

**ದೇವಕಾನ ಕೃಷ್ಣ ಭಟ್ಟ**
**ಅಧ್ಯಾಪಕ, ಕಲಾವಿದ, ಪ್ರಸಾಧನತಜ್ಞ**
ದೇವಕಾನ ಮನೆ, ಪೈವಳಿಕೆ ಅಂಚೆ,
ಕಾಸರಗೋಡು, ಕೇರಳ – 671 348

1966ನೇ ಇಸವಿ ಎಂದು ನನ್ನ ನೆನಪು. ಒಂದು ತಾಳಮದ್ದಳೆ ಕೂಟ. ಅಲ್ಲಿ ನಾನು ಒಬ್ಬ ಪ್ರೇಕ್ಷಕ ಮಾತ್ರ. ಹಿಮ್ಮೇಳಕ್ಕೆ ದಿವಾಣ ಭೀಮ ಭಟ್ಟರಿದ್ದಾರಂತೆ. ಒಳ್ಳೆಯ ಮದ್ದಳೆ ಕೈ ಮಾರಾಯ! ಚೆಂಡೆಗೂ ಸೈ ಎಂದು ಪ್ರೇಕ್ಷಕರೊಬ್ಬರು ತಮ್ಮ ಪಕ್ಕದವರಲ್ಲಿ ಹೇಳುತ್ತಿರುವುದನ್ನು ಕೇಳಿಸಿಕೊಂಡೆ. ಈ ಹಿಮ್ಮೇಳ ವಾದಕರು ಒಬ್ಬ ದೊಡ್ಡ ಕಲಾವಿದರಿರಬೇಕೆಂದು ಊಹಿಸಿಕೊಂಡೆ. ತಾಳಮದ್ದಳೆ ಆರಂಭವಾಯ್ತು. ದಿವಾಣದವರು ಮದ್ದಳೆ ಬಾರಿಸುತ್ತಿದ್ದರು. ಕೆಲ ಹೊತ್ತಿನ ನಂತರ ಅದೇ ಪ್ರೇಕ್ಷಕ "ಎಂತಹ ವಿಷಮ ಪೆಟ್ಟುಗಳು" ಮಹಾರಾಯಾ!" ಎಂದು ಪಕ್ಕದವರಲ್ಲಿ ಹೇಳುತ್ತಿದ್ದರು. ನಾನೋ ಸಮ ವಿಷಮ ಒಂದೂ ಗೊತ್ತಿಲ್ಲದ ಕೇವಲ ಕೇಳುಗ ಹಾಗೂ ನೋಡುಗ ಮಾತ್ರ!

1967ರಿಂದ ನಾನೂ ತಾಳಮದ್ದಳೆ ಕೂಟಗಳಲ್ಲಿ ಅರ್ಥ ಹೇಳುವ ಅಭ್ಯಾಸಕ್ಕೆ ತೊಡಗಿದೆ. 1969ರಲ್ಲಿ ಮುಖಕ್ಕೆ ಬಣ್ಣ ಹಚ್ಚಿಸಿಕೊಂಡು ವೇಷ ಮಾಡಿದೆ. ಮುಂದೆ ಒಬ್ಬ ಹವ್ಯಾಸಿ ಕಲಾವಿದನಾದೆ. ಈ ಸಂದರ್ಭದಲ್ಲಿ ಯಕ್ಷಗಾನದ ಮೇರು ಕಲಾವಿದರ ಹೆಸರುಗಳು ಅವರ ಯಕ್ಷಗಾನದ ಸಾಧನೆ ಇತ್ಯಾದಿಗಳನ್ನು ತಿಳಿದುಕೊಳ್ಳುವ ಸುಯೋಗ ಒದಗಿ ಬಂತು. ಇಪ್ಪತ್ತನೇ ದಶಕದ ಕಾಲಘಟ್ಟದಲ್ಲಿ ತೆಂಕುತಿಟ್ಟಿನ ಯಕ್ಷಗಾನದಲ್ಲಿ ಅನೇಕ ಮಹಾನ್ ಕಲಾವಿದರು (ಭಾಗವತರು, ಹಿಮ್ಮೇಳ ವಾದಕರು, ವೇಷಧಾರಿಗಳು) ಮೂಡಿ ಬಂದಿದ್ದಾರೆ. ಈ ಕಾಲದಲ್ಲಿ ಒಬ್ಬ ಮಹಾನ್ ಕಲಾವಿದನಾಗಿ ರೂಪುಗೊಳ್ಳುವುದು ಸಾಮಾನ್ಯ ವಿಚಾರವಲ್ಲ. ಕುದ್ರೆಕೋಡ್ಲು ರಾಮ ಭಟ್ಟರು, ಕೆಮ್ಮಣ್ಣು ಮದ್ದಳೆಗಾರರು, ಶಿವ ಮದ್ದಳೆಗಾರರು, ನೆಡ್ಲೆ ನರಸಿಂಹ ಭಟ್ಟರು.

ಚೆಂಡೆ ಮದ್ದಳೆಗಳಲ್ಲಿ ಹೆಸರು ಮಾಡಿದವರು. ಇವರ ಜೊತೆಯಲ್ಲಿ ಒಬ್ಬ ಸಮರ್ಥ ಮದ್ದಳೆಗಾರನಾಗುವುದು ಅಷ್ಟು ಸುಲಭದ ಮಾತಲ್ಲ. ಆ ಕಾಲದಲ್ಲಿ ಇವರ ಜೊತೆ ಜೊತೆಯಾಗಿ ಹೆಸರು ಮಾಡಿದವರು ದಿವಾಣ ಭೀಮ ಭಟ್ಟರು. ಒಬ್ಬ ಹವಾಸಿ ಕಲಾವಿದನಾದ್ದರಿಂದ ದಿವಾಣದವರ ಒಡನಾಟವೋ, ಸಾಹಚರ್ಯವೋ ನನಗಿಲ್ಲ. ಆದರೆ ಅವರ ಚೆಂಡೆವಾದನಕ್ಕೆ ಒಂದೆರಡು ವೇಷ ಮಾಡುವ ಭಾಗ್ಯ ದೊರಕಿದೆ. ಭೀಮ ಭಟ್ಟರಿಗೆ ತಾಳ, ಲಯಗಳಲ್ಲಿ ಅಪಾರ ಜ್ಞಾನವಿತ್ತು ಎಂದು ಹೇಳುತ್ತಿದ್ದುದನ್ನು ಕೇಳಿದ್ದೇನೆ. ಸಹಕಲಾವಿದರು ಸ್ವಲ್ಪ ಹೆಚ್ಚು ಕಮ್ಮಿ ಅವ್ಯವಸ್ಥೆ ಮಾಡಿದರೂ ಖಂಡಿಸುತ್ತಿದ್ದರು ಎಂಬುದನ್ನು ಕೇಳಿ ಬಲ್ಲೆ. ಒಂದೆರಡು ಸಂದರ್ಭಗಳಲ್ಲಿ ನೋಡಿಯೂ ಬಲ್ಲೆ.

ದಿವಾಣ ಭೀಮ ಭಟ್ಟರು ತಮ್ಮ ವೃದ್ಧಾಪ್ಯದಲ್ಲಿ ಒಂದು ವರ್ಷ ಕಟೀಲು ಮೇಳದ ತಿರುಗಾಟವನ್ನು ಮಾಡಿ ಮುಂದೆ ಯಕ್ಷಗಾನ ಕಾರ್ಯಕ್ರಮಗಳಿಗೆ ಹೋಗುವುದನ್ನೇ ಆಂಶಿಕವಾಗಿ ನಿಲ್ಲಿಸಿದ್ದರು. ಕಟೀಲಿನ ಈ ತಿರುಗಾಟ ನಮ್ಮಂತಹವರಿಗೆ ಅವಿಸ್ಮರಣೀಯ. ಯಾಕೆಂದರೆ ಅವರಿಗೆ ಜೊತೆಗಿದ್ದವರು ನೆಡ್ಲ ನರಸಿಂಹ ಭಟ್ಟರು. ಕುರಿಯ ಗಣಪತಿ ಶಾಸ್ತ್ರಿಗಳು ಭಾಗವತರು. ಈ ಸಂದರ್ಭದಲ್ಲಿ ನಡೆದ ಒಂದು ಘಟನೆ ಹೀಗಿದೆ–ಪ್ರಧಾನ ಭಾಗವತರಿಗೆ ಸಹಾಯಕರಾಗಿ ಬಲಿಪ ವಿಶ್ವೇಶ್ವರ ಭಟ್ಟರು ಭಾಗವತರು. ಪ್ರದರ್ಶನದ ಆರಂಭದಲ್ಲಿ ಅವರು ಭಾಗವತಿಗೆ ಮಾಡುತ್ತಿದ್ದರು. ಆರಂಭದಲ್ಲಿ 'ಬಿಳಿ ಎರಡು' ಶ್ರುತಿಯಲ್ಲಿ ಹಾಡುತ್ತಿದ್ದರು. ಮೂರು ನಾಲ್ಕು ಪದ್ಯಗಳನ್ನು ಹಾಡಿದ ನಂತರ, ಇಚ್ಛಾನುಸಾರ 'ಕಪ್ಪು ಮೂರೋ, ಬಿಳಿ ಮೂರೋ' ಶ್ರುತಿ ಬದಲಿಸುತ್ತಿದ್ದರು. ದಿವಾಣದವರು ಒಂದೆರಡು ಬಾರಿ ಹೀಗೆ ಶ್ರುತಿ ಬದಲಿಸಿದರೆ "ಮದ್ದಳೆ ಚೆಂಡೆ ಶ್ರುತಿ ಸರಿಪಡಿಸಲು ತೊಂದರೆಯಾಗುತ್ತೆ, ಹಾಗೆ ಮಾಡಬಾರದು" ಎಂದು ನಯವಾಗಿ ಸೂಚಿಸಿದರು. ಆದರೆ ಆ ಕಿರಿಯರು ಅದನ್ನು ಕಿವಿಗೆ ಹಾಕಿಕೊಳ್ಳದೆ ತಮ್ಮ ಚಾಳಿಯನ್ನು ಮುಂದುವರಿಸಿದರು. ಸಿಟ್ಟಿಗೆದ್ದ ದಿವಾಣರು ಒಂದು ದಿನ ರಂಗಸ್ಥಳದಲ್ಲಿ ತಮ್ಮ ಅಸಾಧ್ಯ ವಾದನದಿಂದ ಭಾಗವತನನ್ನು ತಬ್ಬಿಬ್ಬು ಮಾಡಿ "ಯಾಕೆ ನಿಲ್ಲಿಸಿದೆ ಮುಂದೆ ಹಾಡು ಮಂಗ" ಎಂದು ಎಲ್ಲರಿಗೂ ಕೇಳಿಸುವಂತೆ ಬೈದರು. ಮುಂದೆ ಆ ಭಾಗವತರು ತಮ್ಮ ಈ ಅಭ್ಯಾಸವನ್ನೇ ಬಿಟ್ಟು ಬಿಟ್ಟರು.

ಬಾಯಾರು ಮುಳಿಗದ್ದೆ ಎಂಬಲ್ಲಿ ಒಬ್ಬರು ಅಂಗಡಿ ಮಾಲಿಕರು ವರ್ಷಂಪ್ರತಿ ದೀಪಾವಳಿ ಹಬ್ಬದ ಅಂಗಡಿ ಪೂಜೆಯಂದು ತಾಳಮದ್ದಳೆ ಮಾಡಿಸುತ್ತಿದ್ದರು. ಊರಿನವರೂ, ಪ್ರಸಿದ್ಧ ಮದ್ದಳೆಗಾರರೂ ಆದ ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು ನೇತೃತ್ವ ವಹಿಸುತ್ತಿದ್ದರು. ಆ ಕಾಲದಲ್ಲಿ ಇಂತಹ ಕೂಟಗಳಲ್ಲಿ ಕಲಾವಿದರಿಗೆ ಸಂಭಾವನೆ ಇರುತ್ತಿರಲಿಲ್ಲ. ಆತ್ಮೀಯ ಕೂಟವೇ ಇಲ್ಲಿ ಮುಖ್ಯ. ಕೂಟಕ್ಕೆ ಒಪ್ಪಿಕೊಂಡ ಭಾಗವತರೊಬ್ಬರು ತನಗೆ ಇಂತಿಷ್ಟೆ ಸಂಭಾವನೆ ಸಿಗಬೇಕೆಂದು ಬೇಡಿಕೆ ಮುಂದಿಟ್ಟರು. ಅವರಿಗಿಂತ ಎಷ್ಟೋ ಹಿರಿಯರೂ ಪ್ರಸಿದ್ಧರೂ ಆದ ಚಿಪ್ಪಾರರಿಗೆ ಇದು ಸರಿ ಕಂಡುಬಾರದ್ದರಿಂದ ಭಾಗವತರನ್ನು ಬರುವುದೇ ಬೇಡವೆಂದು ಹೇಳಿ. ಸ್ವತಃ ಚಿಪ್ಪಾರರು ಮತ್ತು ದಿವಾಣದವರು ಬೆಳಗಿನ ತನಕ ಭಾಗವತಿಕೆಯನ್ನು ಮಾಡಿ ತಾಳಮದ್ದಳೆಯನ್ನು ಕಳೆಗಟ್ಟಿಸಿದ್ದು ಹಳೇ ಕತೆ. ದಿವಾಣದವರು ಚೆನ್ನಾಗಿ ಭಾಗವತಿಕೆಯನ್ನು ಮಾಡಬಲ್ಲರೆಂದು ನಾನು ತಿಳಿದುದು ಆಗಲೇ! ಕೆಲವು ದಿನಗಳ ನಂತರ ಕುರಿಯ ವಿಠಲ ಶಾಸ್ತ್ರಿಗಳ ಮನೆ ಚಾವಡಿ ತಾಳಮದ್ದಳೆಯಲ್ಲಿ

ದಿವಾಣರು ಈ ಮೇಲೆ ಹೇಳಿದ ಭಾಗವತರ ಬೆವರಿಳಿಸಿ ಬೈದು ಭಂಗಿಸಿದರು ಎನ್ನುವುದು ಯಾರಿಂದಲೋ ತಿಳಿದು ಬಂದ ವಿಚಾರ.

ನಮ್ಮ ತಲೆಮಾರಿಗೆ ಭಾಗವತರೊಬ್ಬರು ಪ್ರಸಿದ್ಧರು, ಒಳ್ಳೆಯ ಹಾಡುಗಾರರು, ಒಂದು ಕಡೆ ಬಯಲಾಟವೊಂದರಲ್ಲಿ ಭಾಗವತರು ಹಾಡುತ್ತಿದ್ದರಂತೆ. ದಿವಾಣದವರು ಮದ್ದಳೆ ಬಾರಿಸುವುದನ್ನು ನಿಲ್ಲಿಸಿಬಿಟ್ಟರು. ಭಾಗವತರು ಮದ್ದಳೆಗಾರರ ಮುಖ ನೋಡಿದಾಗ ಮದ್ದಳೆಗಾರರು "ಪ್ರಸಂಗದಲ್ಲಿ ಈ ಪದ್ಯದ ತಾಳ ಇದಲ್ಲ. ಪ್ರಸಂಗದಲ್ಲಿರುವ ತಾಳದಲ್ಲಿ ಹಾಡು" ಎಂದು ರಂಗಸ್ಥಳದಲ್ಲೇ ಗದರಿಸಿದರು. ಸ್ವಲ್ಪ ಹೊತ್ತು ಆಟವೇ ನಿಂತು ಹೋಯ್ತು. ತಮಗಾಗದ ವಿಷಯಗಳನ್ನು ಕೂಡಲೇ ವಿರೋಧಿಸುತ್ತಿದ್ದುದು ದಿವಾಣರ ಗುಣವಾಗಿತ್ತು.

1980ರ ನಂತರ ಜುಗಲಬಂದಿ ಎನ್ನುವ ಪ್ರಯೋಗ ಮಳೆಗಾಲದ ಕಾರ್ಯಕ್ರಮಗಳಲ್ಲಿ ಅಲ್ಲಲ್ಲಿ ನಡೆದುವು. ಇಬ್ಬರು ಮದ್ದಳೆಗಾರರು ಒಬ್ಬರ ನಂತರ ಒಬ್ಬರು ಸರದಿಯಲ್ಲಿ ಚೆಂಡೆ ಬಾರಿಸುವುದನ್ನೆ ಜುಗಲ್ ಬಂದಿ ಎನ್ನುತ್ತಾರೆ. ಪೀಠಿಕೆ ಬಾರಿಸುವ ಸಂದರ್ಭದಲ್ಲಿ ಈ ಪ್ರಯೋಗ ನಡೆಯುತ್ತದೆ. ಮಂಗಳೂರು ಪುರಭವನದಲ್ಲಿ ದಿವಾಣ ಭೀಮ ಭಟ್ಟರ ಮತ್ತು ಚಿಪ್ಪಾರು ಕೃಷ್ಣಯ್ಯ ಬಲ್ಲಾಳರ 'ಚೆಂಡೆ ಜುಗಲಬಂದಿ' ಅತ್ಯಂತ ರೋಚಕವಾಗಿತ್ತು. ದಿವಾಣ ಭೀಮ ಭಟ್ಟರ ಪ್ರತಿಯೊಂದು 'ನಡೆಗೂ' ಪುರಭವನದಲ್ಲಿ ಕಿಕ್ಕಿರಿದ ಸಭೆ ಚಪ್ಪಾಳೆಯಿಕ್ಕಿ ಸಂತೋಷಪಟ್ಟಿದ್ದರು. ಸ್ವತಃ ನಾನು ನೋಡಿದ್ದೇನೆ. ಮುಂದೆ ಎಡನೀರು ಶ್ರೀ ಮಠದಲ್ಲಿ ಯಕ್ಷಗಾನ ಕಾರ್ಯಕ್ರಮವೊಂದರಲ್ಲಿ ದಿವಾಣದವರು ಹಾಗೂ ಚಿಪ್ಪಾರರ ಜತೆ ಚೆಂಡೆ ವಾದನವಿತ್ತು. ಇಲ್ಲೂ ದಿವಾಣದವರು ತಮ್ಮ ಅದ್ಭುತ ಪಾಂಡಿತ್ಯವನ್ನು ಪ್ರದರ್ಶಿಸಿದ್ದರು. ಮಹಾನ್ ಮದ್ದಳೆಗಾರರೆಂದೂ, ಲಯಬ್ರಹ್ಮನೆಂದೂ, ಒಬ್ಬ ಅದ್ಭುತ ಕಲಾವಿದನೆಂದೂ ಅವರ ಮುಂದೆ ನಾನು ಒಬ್ಬ ಸಾಮಾನ್ಯ ಕಲಾವಿದನೆಂದು, ಚಿಪ್ಪಾರರು ತಮ್ಮ ಆತ್ಮೀಯ ರೊಬ್ಬರಲ್ಲಿ ಹೇಳಿದ್ದಾರೆ ಎಂಬುದು ದಿವಾಣ ಭೀಮ ಭಟ್ಟರ ಔನ್ನತ್ಯವನ್ನೂ ಸೂಚಿಸುತ್ತದೆ.

ತೆಂಕು ತಿಟ್ಟಿನ ಮಹಾನ್ ಕಲಾವಿದರಾದ, ದಿವಾಣ ಭೀಮ ಭಟ್ಟರ ಜನ್ಮ ಶತಮಾನೋತ್ಸವವೆಂಬ ಕಾರ್ಯಕ್ರಮ ಸ್ತುತ್ಯರ್ಹ. ದಿವಾಣರನ್ನು ಮುಖತ ಕಂಡವರು ಮಾತ್ರವಲ್ಲ ಮುಂದಿನ ಪೀಳಿಗೆಯೂ ಅವರನ್ನು ನೆನಪಿಸಿಕೊಳ್ಳಬಲ್ಲಂತಹ ಸಂಸ್ಮರಣ ಗ್ರಂಥ ಇದಾಗಲಿ ಎಂದು ಹಾರೈಸುತ್ತೇನೆ.



# ಕಂಡೆ ನಾ ಭೀಮನ

**ಬರೆ ಕೇಶವ ಭಟ್ಟ**
**ಅಧ್ಯಾಪಕ - ಕಲಾವಿದ**
ಶ್ರೀ ದುರ್ಗಾನಿಲಯ –ಸಣ್ಣಯಬೈಲು
ಇರಾ ಗ್ರಾಮ; ಬಂಟ್ವಾಳ ತಾಲೂಕು;
ಅಂಚೆ ಬಾಳೆಪುಣಿ –574153

ನನಗಾಗ ಹದಿನೇಳು ಹದಿನೆಂಟರ ವರ್ಷ ಪ್ರಾಯ. ನಮ್ಮ ಕೈರಂಗಳ ಬರೆಮನೆಯ ಸಮೀಪದ ಮುಡಿಪು ಎಂಬಲ್ಲಿ ಇರಾ ಶ್ರೀ ಸೋಮನಾಥೇಶ್ವರ ಕೃಪಾಪೋಷಿತ ಯಕ್ಷಗಾನ ಮಂಡಳಿ, ಕುಂಡಾವು– ನಾಮಾಂಕಿತ ಮೇಳದ ಆಟ. ದಿ. ಕಲ್ಲಾಡಿ ಕೊರಗ ಶೆಟ್ಟಿಯವರ ಯಾಜಮಾನ್ಯವಿದ್ದ ಕಾಲ. ಪೂರ್ವ ರಂಗದ ಕೋಡಂಗಿ, ಬಾಲಗೋಪಾಲರು ಹಾಗೂ ಸ್ತ್ರೀ ವೇಷಗಳ ಬದಲಿಗೆ, ಬೊಂಬೆಯಾಟ ಪ್ರದರ್ಶಿತವಾಗುತ್ತಿತ್ತು. ಇದಾದ ಅನಂತರ ನೀಳಕಾಯದ ವ್ಯಕ್ತಿಯೊಬ್ಬರು ಚೆಂಡೆ ಹೆಗಲಿಗೇರಿಸಿಕೊಂಡು ಬಂದು ರಂಗಸ್ಥಳದ ಪ್ರವೇಶ ದ್ವಾರದಲ್ಲಿ ನಿಂತರು. ಭಾಗವತರು, ಒತ್ತು ಮದ್ದಲೆಯವರು ಮತ್ತು ಚಕ್ರತಾಳದವರು ಸಜ್ಜಾದರು. ಸುಮಾರು 25–30 ನಿಮಿಷಗಳ ಕಾಲ ಪ್ರೇಕ್ಷಕ ವರ್ಗದವರನ್ನೆಲ್ಲ ಬೇರೆಯೆ ಲೋಕಕ್ಕೆ ಕೊಂಡೊಯ್ದಿರಿಸಿದರು. ನಾವು ನಿಜಸ್ಥಿತಿಗೆ ಬರಬೇಕಾದರೆ, ಬಾರಿಸುವಿಕೆಯ ಸಮ್ಮಿಳಿತ ಸ್ವರ ನಿಂತು ಕೆಲವು ಕ್ಷಣಗಳೇ ಕಳೆದು ಹೋಗಿದ್ದುವು. ಅದನ್ನೇ "ಪ್ರಸಂಗ ಪೀಠಿಕೆ" ಯೆನ್ನುವುದು. ಈ ದಿಸೆಯಲ್ಲಿ ಚೆಂಡೆಯದೇ ಪ್ರಧಾನ ಪಾತ್ರ, ಭಾತವತರ ಜಾಗಟೆ, ಒತ್ತಿನ ಮದ್ದಲೆ ಹಾಗೂ ಚಕ್ರತಾಳದವರಿಗೆ ಆಗಾಗ ಕೈ ತಡವರಿಸಿದಂತಾದುದನ್ನು ನಾನು ತಡವಾಗಿ ಗಮನಿಸಿದೆ. "ಅದೇನು ಹಾಗೆ" ? ಹತ್ತಿರವಿದ್ದ ಹಿರಿಯರಲ್ಲಿ ನಾನು ಪ್ರಶ್ನಿಸಿದೆ. ದಕ್ಷಿಣ ಕನ್ನಡದ ಹವ್ಯಕ ಭಾಷೆಯಲ್ಲಿ ಅವರಿಂದ ಬಂದ ಉತ್ತರವಿದು. 'ನಿನಗೆ ಗೊಂತಿಲ್ಲೆಯೊ? ಅಫ, ಆ ಚೆಂಡೆ ಬಾರಸಿದವ಼ ದಿವಾಣ ಭೀಮಣ್ಣ ಹೇಳಿ ವಿಷಮ ವೀರ ಹೇಳಿಯೇ ಅಫಂಗೆ ಹೆಸರು. ಅದು ಅವನ ಸ್ವಂತ ಸಿದ್ಧಿ.' ಮತ್ತೆ ಕೇಳಿ! ಬೆಳಗಿನ ಜಾವ

ಆಟ ಮುಗಿಯುವವರೆಗೂ ನೋಡಿದ್ದು ಚೆಂಡೆಯವರನ್ನೇ, ಕೇಳಿದ್ದು ಚೆಂಡೆಯನಾದವನ್ನೇ. ಕಿವಿ ತುಂಬಿದ ಚೆಂಡೆಯ ನಾದ ಮನತುಂಬಿದ ಭಾವೋನ್ಮಾದಗಳೊಂದಿಗೆ ಮನೆಗೆ ಮರಳಿದೆ. ಕಂಡ ಕಂಡವರಲ್ಲಿ ಕೇಳಿ ತಿಳಿದೆ. ಕೀರ್ತಿಶೇಷ ದಿವಾಣ ಭೀಮ ಭಟ್ಟರ ಸತ್ವವೇನು? ಸ್ವತ್ವವೆಷ್ಟು? ಎಂಬುದನ್ನು.

ಮುಂದಿನ ಆರೆಂಟು ವರ್ಷಗಳಲ್ಲಿ ಅವಕಾಶ ಸಿಕ್ಕಾಗಲೆಲ್ಲ ಆ ಮೇಳದ ಆಟಗಳನ್ನು ನೋಡುತ್ತಲೇ ಇದ್ದೆನೆಂಬುದಕ್ಕಿಂತ ಆ ಚೆಂಡೆಯ ನಾದವನ್ನು ಕೇಳುತ್ತಲೇ ಇದ್ದೆ. ಒಂದು ಸಲ ಅವರು ಹಿಮ್ಮೇಳ ವಾದಕರಾಗಿರುವ ತಾಳಮದ್ದಲೆಯಲ್ಲಿ ನಾನೊಂದು ಸಣ್ಣ ಪಾತ್ರದ ಅತಿಕಾಯಕಾಳಗದ ವಿಭೀಷಣ ಅರ್ಥ ಹೇಳಬೇಕಾಗಿ ಬಂತು. ತಾಳಮದ್ದಲೆ ಮುಗಿಯಿತು. ಬೆಳಗಿನ ಉಪಾಹಾರ ಪ್ರಾರಂಭವಾಯಿತು. ಈ ಮಹನೀಯರು ನನ್ನನ್ನು ಹುಡುಕಿಕೊಂಡೇ ಬಂದು, ಹತ್ತಿರ ಕುಳಿತು, ಪರಿಚಯ ಕೇಳಿ – ಹೇಳಿಯಾದ ಆನಂತರ ಪ್ರಾರಂಭವಾಯಿತು. ನನ್ನ ಅರ್ಥಗಾರಿಕೆಯ ವಿಮರ್ಶೆ. ಕೇಳುತ್ತಿದ್ದಂತೆಯೇ ನಾನು ನಿಬ್ಬೆರಗಾದೆ. ಕಾರಣ ಬೇರೇನೂ ಅಲ್ಲ. ಒಬ್ಬ ಹಿಮ್ಮೇಳವಾದಕನಲ್ಲಿ, ಅಷ್ಟರ ಮಟ್ಟಿನ ಪ್ರಸಂಗಾನುಭವ, ಕಂಠಸ್ಥವಾದ ಪದ್ಯಗಳು ಮತ್ತು ಪಾತ್ರ ಚಿತ್ರಣ ಕೌಶಲದೊಂದಿಗೆ ಹೊರ ಹೊಮ್ಮಿದ ಅರ್ಥಗಾರಿಕೆಯ ತಂತ್ರಾನುಭವ.

ಮತ್ತೆ ಹತ್ತಾರು ಬಾರಿ ಅವರ ಮನೆಗೆ ಹೋಗಿದ್ದು, ಅವರ ಆತಿಥ್ಯದ ಸವಿಯನ್ನುಂಡು, ಅದಕ್ಕಿಂತ ಹೆಚ್ಚಾಗಿ ಅನುಭವದ ಸುಧೆಯುಂಡು ಧನ್ಯನಾಗುವ ಯೋಗವೂ ನನಗೆ ಕೂಡಿ ಬಂದಿತ್ತು. ಕೆಲಕಾಲ ಕಳೆದ ನಂತರ ನನ್ನ ಸ್ನೇಹಿತರು ನನ್ನೊಂದಿಗೆ ಎದುರು ಪಾತ್ರಗಳನ್ನೇ ನಿರ್ವಹಿಸುತ್ತಿದ್ದ ಸಹಕಲಾವಿದರೊಬ್ಬರು ಏಕಾಂತದಲ್ಲಿ ನನಗೆ ಹೇಳಿದರು. "ಆ ಬರೆ ಮಾಣಿ ಇದ್ದನ್ನೆ! ಕಂಡ ಹಾಂಗಲ್ಲ. ಅವನೊಟ್ಟಿಂಗೆ ಅರ್ಥ ಹೇಳುವಾಗ ಜಾಗ್ರತೆಬೇಕು ಮಿನಿಯಾ" ಎಂದು ಭೀಮಣ್ಣ ಅವರಲ್ಲಿ ನುಡಿದಿದ್ದರಂತೆ. ಅಲ್ಲಿಗೆ ನನ್ನ ಅರ್ಥಗಾರಿಕೆಯ ಹವ್ಯಾಸವು ಸುಗಮತೆಯ ಹಾದಿಯಲ್ಲಿದೆ ಎಂದು ಮನದಟ್ಟಾಯಿತು. ಮಾತ್ರವಲ್ಲ; ಮುಂದೆಂದೂ ಅವರ ಮಾತು ಸುಳ್ಳಾಗದಂತೆ ವ್ಯವಹರಿಸುವ ಜಾಗೃತಭಾವವೂ ಮೈಗೂಡಿತು. ಕೇವಲ ಪಕ್ಕವಾದ್ಯ ವಾದನದಲ್ಲಿ ಮಾತ್ರವಲ್ಲದೆ, ಮುಮ್ಮೇಳದ ಅರ್ಥಗಾರಿಕೆಯಲ್ಲಿಯೂ, ವಿಷಮದಲ್ಲಿ ಸಮತೆಯನ್ನು ಸಾಧಿಸುವ ಮತ್ತದನ್ನು ಸಹೃದಯಿಯಾಗಿಯೇ ಆಸ್ವಾದಿಸುವ ಹಿರಿಮೆ–ಗರಿಮೆಗಳು ಸಾಕಾರಗೊಂಡ ಮೂರ್ತಿಯೇ ನಾ ಕಂಡ ಭೀಮಣ್ಣ.



# ನೀನು ವಿಷಮ ನಡೆಗಳನ್ನು ಕಲಿ, ರಂಗದಲ್ಲಿ ಮಾತ್ರ ಬಾರಿಸಬೇಡ

**ಪದ್ಯಾಣ ಶಂಕರನಾರಾಯಣ ಭಟ್ಟ**
ಪದ್ಯಾಣ ಮನೆ, ಸರಕಾರಿ
ಕಾಲೇಜಿನ ಹಿಂಭಾಗ
ಕೊಂಬೆಟ್ಟು, ಪುತ್ತೂರು–574 201

ಯಕ್ಷಗಾನದ ಹಿಮ್ಮೇಳದ ಭಾಷಾವಿದ ದಿವಾಣ ಭೀಮ ಭಟ್ಟರು ಆತ್ಮೀಯರಿಗೆಲ್ಲಾ ಭೀಮಣ್ಣ. ಅವರ ಜತೆಯಲ್ಲಿ ನನಗೆ ದೀರ್ಘ ತಿರುಗಾಟವಿಲ್ಲ, ಆಗಾಗ್ಗೆ ಒಡನಾಟವಿತ್ತು. ಅವರೊಂದಿಗೆ ಕಳೆದ ಕ್ಷಣಗಳು ನಿತ್ಯ ಕಾಡುತ್ತವೆ. ಅವರ ಮಾತುಕತೆಗಳನ್ನು ದಾಖಲಿಸುತ್ತಿದ್ದರೆ ಅದು ಹಿಮ್ಮೇಳದ ಪಠ್ಯವಾಗುವಷ್ಟು ಪರಿಪುಷ್ಟ ವಾಗಿತ್ತು. ಮಾತಿನಲ್ಲಿ ಒಣ ಹರಟೆಯಿರಲಿಲ್ಲ. ಪರದೂಷಣೆ ಯಿರಲಿಲ್ಲ. ಗೇಲಿಯಂತೂ ಇಲ್ಲವೇ ಇಲ್ಲ. ಏನಿದ್ದರೂ ಹಿಮ್ಮೇಳದ್ದೇ ಸುದ್ದಿ.

1970–73ನೇ ಇಸವಿ. ನನ್ನ ಕಾಲೇಜು ವಿದ್ಯಾಭ್ಯಾಸ ಮುಗಿದಿತ್ತು. ಜತೆಜತೆಗೆ ಅಣ್ಣ ತಿರುಮಲೇಶ್ವರ ಭಟ್ಟರಿಂದ ಮದ್ದಳೆಯ ಬಾಲಪಾಠವೂ ಆಗಿತ್ತು. ಅದೊಂದು ದಿನ ಎಡನೀರು ಶ್ರೀಮಠದಲ್ಲಿ ಕಾರ್ಯಕ್ರಮ. ನೆಡ್ಲೆ ನರಸಿಂಹ ಭಟ್ಟರು, ದಿವಾಣ ಭೀಮ ಭಟ್ಟರು, ದೇರಾಜೆ ಸೀತಾರಾಮಯ್ಯ.. ಮೊದಲಾದ ಆಢ್ಯರ ಉಪಸ್ಥಿತಿ. ಅಂದಿನ ಆಟಕ್ಕೆ ನನಗೆ ಮದ್ದಳೆ ನುಡಿಸಲು ಅವಕಾಶ ಸಿಕ್ಕಿತ್ತು. ಬಳಿಕ ಪ್ರಶಂಸೆಯೂ ಪಾಲಿಗೆ ಬಂತು. ಗುರುಗಳ ಆಶೀರ್ವಾದವೂ ಪ್ರಾಪ್ತವಾಗಿತ್ತು.

ನಿಜಕ್ಕೂ ಉದ್ದಾಮರ ಮಧ್ಯೆ ಮದ್ದಳೆಯನ್ನು ನುಡಿಸಲು ಬಿಡಿ, ಮುಟ್ಟಲೂ ನನಗೆ ಯೋಗ್ಯತೆಯಿರಲಿಲ್ಲ. ಅಂದಿನ ಯೋಗಾಯೋಗ ಹಾಗಿತ್ತು. ಇದಕ್ಕಿಂತ ಮೊದಲೇ ಭೀಮ ಭಟ್ಟರನ್ನು ನೋಡಿ ಗೊತ್ತಿತ್ತು. ಅವರ ಚೆಂಡೆಯ ನುಡಿಗಳನ್ನು ಆಲಿಸಿದ್ದೆ. ಮಠದ ತಾಳಮದ್ದಳೆಯ ಬಳಿಕ ಸ್ವಲ್ಪ ಹತ್ತಿರವಾದೆವು. ಬಳಿಕ ಅಲ್ಲಿಲ್ಲಿ ಸಿಕ್ಕಾಗ ಯಾವುದಾದರೂ ಪೆಟ್ಟುಗಳನ್ನು ಹಾಕಿದಾಗ, ಹಾಂಗಲ್ಲ ಶಂಕರೋ.. ಇದ ಹೀಂಗೆ.. ಎನ್ನುವಷ್ಟು ಆಪ್ತತೆ

ಉಂಟಾಗಿತ್ತು.

ಇದಾಗಿ ನಾಲ್ಕು ವರುಷ ಕಳೆದಿರಬಹುದು. ಶ್ರೀಮಠದಲ್ಲಿ ಯಕ್ಷಗಾನ ತಾಳಮದ್ದಳೆ ಸಪ್ತಾಹ ಏರ್ಪಾಡಾಗಿತ್ತು ನಾನೂ ಭಾಗವಹಿಸಿದ್ದೆ. ದಿವಾಣರ ಮದ್ದಳೆಯ ನುಡಿತವನ್ನು ಕೇಳಿ ನಿಬ್ಬೆರಗಾಗಿದ್ದೆ. ಥಕ್ಕನೆ ನೋಡುವಾಗ ನನಗೂ ಬಾರಿಸಬಹುದು ಎಂದೆನಿಸುತ್ತಿತ್ತು. ಅವರ ಕೈಚಳಕ, ಮದ್ದಳೆಯೊಂದಿಗೆ ಮಾತನಾಡುವ ಪರಿ, ಹೊಸ ಹೊಸ ನುಡಿತದ ಗೈರತ್ತುಗಳಿಂದ ಮೂಕವಿಸ್ಮಿತನಾಗಿದ್ದೆ. ರಾತ್ರಿ ತಾಳಮದ್ದಳೆಯಾದರೆ, ಹಗಲು ಹೊತ್ತು ದಿನವಿಡೀ ಅವರೊಂದಿಗೆ ಕಳೆಯುತ್ತಿದ್ದೆ.

ಹಗಲು ವಿಶ್ರಾಂತಿ ಪಡೆಯುತ್ತಿದ್ದುದು ಕಡಿಮೆ. ಕೈಗಳಲ್ಲಿ ಎರಡು ಚೆಂಡೆ ಕೋಲು. ಅದೇ ಅವರ ಸರ್ವಸ್ವ. ನನ್ನ ಆಸಕ್ತಿ ನೋಡಿ ಹಲವು ಚೆಂಡೆಯ ಪೆಟ್ಟುಗಳನ್ನು ಕಲಿಸಿಕೊಟ್ಟರು. ಏಳು ಅಕ್ಷರದ ತಾಳಕ್ಕೆ ಆರು ಅಕ್ಷರದ ತಾಳವನ್ನು ಸೇರಿಸುವುದು, ಐದು ಅಕ್ಷರದ ತಾಳಕ್ಕೆ ಏಳು ಅಕ್ಷರದ ತಾಳವನ್ನು ಮಿಳಿತಗೊಳಿಸುವ ವಿಶೇಷ ಪಾಠ ಅವರಿಂದಾಗಿತ್ತು. ಈ ರೀತಿಯ ಕರಾಮತ್ತುಗಳು ಯಕ್ಷಗಾನ ವಲಯದಲ್ಲಿ ವಿಷಮ ಪೆಟ್ಟುಗಳೆಂದು ಪ್ರಸಿದ್ಧ.

ಭೀಮ ಭಟ್ಟರೇ ಅಸಹಾಯಕತೆಯಿಂದ ಒಮ್ಮೆ ಹೇಳಿದ್ದರು, ಇದು ವಿಷಮವಲ್ಲ, ಸರಿಯಾದ ಪೆಟ್ಟು. ತಿಳಿದುಕೊಳ್ಳುವ ಜ್ಞಾನವಿಲ್ಲದಿದ್ದರೆ ನಾನೇನು ಮಾಡಲಿ? ಭಟ್ಟರ ನುಡಿ ಸತ್ಯ. ಅಲ್ಲಿ ವಿಷಮತೆಯಿರಲಿಲ್ಲ. ಸರಿಯಾದ ಪೆಟ್ಟುಗಳು. ಆವಿಷ್ಕಾರದಲ್ಲಿ ಮೂಡಿ ಬಂದ ಪಾಕಗಳು. ಆವಿಷ್ಕಾರಗಳಿಗೆ ತೆರೆದುಕೊಳ್ಳದಿದ್ದರೆ ಅರ್ಥವಾಗುವುದಾದರೂ ಹೇಗೆ?

1977. ಅಡ್ಯನಡ್ಕದಲ್ಲಿ ಕರ್ನಾಟಕ–ಕಟೀಲು ಮೇಳಗಳ ಕೂಡಾಟ. ಅಂದಿನ ಒಂದು ಪ್ರಸಂಗ ದುಶ್ಶಾಸನ ವಧೆ. ಹೊಸ ಕಥಾನಕ. ಇತರ ಪ್ರಸಂಗಗಳನ್ನು ಆಡಿಸಿದಂತಲ್ಲ. ಅದಕ್ಕೆ ಪರಂಪರೆಯ ಬಿಗಿಯಿದೆ. ವೇಗಕ್ಕೆ ಖಚಿತತೆಯಿದೆ. ಪದ್ಯದ ನಡೆಗೆ ಬೇರೆಯೇ ಆದ ಮಟ್ಟು ಇದೆ. ಚೆಂಡೆಯ ಬಡಿತಕ್ಕೂ ಕರಾರುವಾಕ್ಕಾದ ದಾರಿಯಿದೆ. ಈ ವಿಚಾರಗಳೇನೋ ಗೊತ್ತಿದ್ದುವು, ಆಡಿಸಿ ಗೊತ್ತಿರಲಿಲ್ಲ.

ಭೀಮ ಭಟ್ಟರ ಮನೆಗೆ ಹೋದೆ. ವಿಚಾರ ಅರುಹಿದೆ. ಸಂತೋಷದಿಂದ ಪ್ರಸಂಗ ಪದ್ಯದೊಂದಿಗೆ (ಪುಸ್ತಕ ನೋಡದೆ) ಚೆಂಡೆಯ ಪೆಟ್ಟುಗಳನ್ನು ಬಾಯಿ ತಾಳದ ಸಮೇತ ಹೇಳಿಕೊಟ್ಟರು. ಬಾರಿಸಲು ಹೇಳಿದರು. ತಪ್ಪನ್ನು ತಿದ್ದಿದರು. ಅವರು ಒಮ್ಮೆ ಹೇಳಿದರೆ ಸಾಕು, ಅದು ನಮ್ಮೊಳಗೆ ಆವಾಹನೆಯಾಗುವಂತಹ ಪಾಠ ಅವರದು. ಅವರಲ್ಲೇ ಪುನಃ ಅಭ್ಯಾಸ ಮಾಡಿ ಆಟದಲ್ಲಿ ಚೆಂಡೆ ಹೆಗಲಿಗೆ ಹಾಕಿ ನಿಂತೆ. ಅವರು ಹೇಳಿದಂತೆ ಚೆಂಡೆ ನುಡಿಸಿದೆ. ಆಟ ಚೆನ್ನಾಗಿ ಆಯಿತು. ವ್ಯಾಪಕ ಪ್ರಶಂಸೆ ಗಳಿಸಿತು.

ಸಾಮಾನ್ಯವಾಗಿ ಭೀಮ ಭಟ್ಟರು ರಂಗದಲ್ಲಿ ನಿಂತರೆ ಸಾಕು – ಭಾಗವತರು, ಮದ್ದಳೆಯವರು ಬೆವರುತ್ತಾರೆ. ಆವಿಷ್ಕಾರದ ಪೆಟ್ಟುಗಳು ಅರ್ಥವಾಗದೆ, ಬೌದ್ಧಿಕ ಪ್ರಖರತೆಯನ್ನು ತಾಳಿಕೊಳ್ಳಲು ಸಾಧ್ಯವಾಗದ ಕಲಾವಿದರೇ ಅವರಿಗೆ ವಿಷಮ ಪೆಟ್ಟಿನ ಸ್ಥಾನ ಕೊಟ್ಟರು. ಕಲಾವಿದರ ಈ ರೀತಿಯ ಅಪಕ್ವತೆಯ ವರ್ತನೆಯಿಂದಾಗಿ ಕಾರ್ಯಕ್ರಮ ಸಿಗುತ್ತಿದ್ದುದೂ ವಿರಳ. ಈ ವಿಚಾರ ಅವರಿಗೆ ಗೊತ್ತಿದ್ದರೂ ಸ್ಥಿತಪ್ರಜ್ಞನಂತೆ ಇರುತ್ತಿದ್ದರು. ತನಗೆ ಕಾರ್ಯಕ್ರಮ ಸಿಗದಿದ್ದರೂ ತೊಂದರೆಯಿಲ್ಲ, ಆವಿಷ್ಕಾರದಲ್ಲಿ, ರಂಗದ ಕಸುಬಿನಲ್ಲಿ ಮಾತ್ರ ರಾಜಿಯಿಲ್ಲ ಎನ್ನುವ ನಿಲುವು ಆದರ್ಶ.

ಅವರ ಪೀಠಿಕೆಗೆ ನಾನು ಎಷ್ಟೋ ಬಾರಿ ಮದ್ದಳೆ ಬಾರಿಸಿದ್ದೇನೆ. ತಾಳ ತಪ್ಪಿದಂತೆ ಭಾಸವಾಗುತ್ತಿತ್ತು. ತಾಳದ ನಿಖರತೆಯಿದ್ದವರಿಗೆ ಕೂದಲೆಳೆಯಷ್ಟೂ ತಪ್ಪದು. ಅವರು ಚೆಂಡೆ ಬಾರಿಸುವಾಗ ಅವರ ಕಾಲು ಕೂಡಾ ತಾಳ ಹಾಕುತ್ತಿತ್ತು. ಹೀಗಾಗಿ ಫಕ್ಕನೆ ತಾಳ ತಪ್ಪಿದಂತಾದರೂ, ಕಾಲಿನ ಬಡಿತ ಇದೆಯಲ್ಲಾ, ಅದಕ್ಕೆ ಸರಿಯಾಗಿ ತಾಳವನ್ನು ಹೊಂದಿಸಲು ಸಾಧ್ಯವಾಗುತ್ತಿತ್ತು.

ಬಿಡುವಿನ ಅವಧಿಯಲ್ಲಿ ಭೀಮ ಭಟ್ಟರು ನಿತ್ಯ ಅಭ್ಯಾಸಿ. ಗಡಿಯಾರದ ಟಿಕ್ ಟಿಕ್ ಶಬ್ದವನ್ನು ತಾಳ ಅಂತ ಗ್ರಹಿಸಿ, ಆ ತಾಳಕ್ಕೆ ತನ್ನ ಪೆಟ್ಟುಗಳನ್ನು ಸಮನ್ವಯಗೊಳಿಸಿ ಅಭ್ಯಾಸ ಮಾಡುತ್ತಿದ್ದರು. ಇಂತಹ ಹೊತ್ತಲ್ಲಿ ಕಾಲಿನಲ್ಲಿ ತಾಳ, ಬಾಯಲ್ಲಿ ಬಾಯಿತಾಳ, ಕೈಯಲ್ಲಿ ಪೆಟ್ಟು ಏಕಕಾಲದಲ್ಲಿ ಮೂರು ವಿಧದ ಕ್ರಿಯೆ. ಈ ರೀತಿಯ ನಿರಂತರ ಪ್ರಕ್ರಿಯೆ ಯಿಂದಾಗಿ ಆಟದಿಂದ ಆಟಕ್ಕೆ ಹೊಸ ಹೊಸ ಪೆಟ್ಟುಗಳನ್ನು ಕಂಡುಹಿಡಿಯಲು ಸಾಧ್ಯವಾಗುತ್ತಿತ್ತು.

ರಂಗದಲ್ಲಿ ಭಾಗವತರು ಸಾಹಿತ್ಯ ಲೋಪ ಮಾಡಿದಾಗ ಕೆರಳುತ್ತಿದ್ದರು. ಅಲ್ಲೇ ತಿಳಿಹೇಳುತ್ತಿದ್ದರು. ಚೌಕಿಯಲ್ಲೂ ಪಾಠ ಮಾಡುತ್ತಿದ್ದರು. ಒಳ್ಳೆಯ ಮನಸ್ಸಿನವರು ಅದನ್ನು ಸ್ವೀಕರಿಸಿದ್ದರು. ಭಾಗವತಿಕೆಯೂ ಸಲೀಸಾಗಿ ಬರುತ್ತಿದ್ದುದರಿಂದ ಲೋಪವನ್ನು ಗುರುತಿಸಲು ಸಾಧ್ಯವಾಗುತ್ತಿತ್ತು. ಬಹುತೇಕ ಎಲ್ಲಾ ಪ್ರಸಂಗಗಳ ಪದ್ಯಗಳು ಕಂಠಪಾಠ. ಆಟಕ್ಕೆ ಭೀಮಣ್ಣ ಇದ್ದಾರೆ ಅಂದರೆ ಸಾಕು, ಭಾಗವತ ಮನೆಯಿಂದ ಹೊರಡುವಾಗಲೇ ಅರ್ಧ ಕಂಗಾಲು!

ಸರಿ, ಕಲಾವಿದ ತಾಳ ತಪ್ಪಿ ಕುಣಿದ ಎಂದಿಟ್ಟುಕೊಳ್ಳಿ. ಭೀಮಣ್ಣ ಆತನ ತಪ್ಪಿದ ಹೆಜ್ಜೆಗೆ ಸರಿಯಾಗಿ, ತಾಳವನ್ನೇ ಆಧಾರವಾಗಿಟ್ಟುಕೊಂಡು ಹೊಸ ಪೆಟ್ಟುಗಳನ್ನು ರಂಗದಲ್ಲೇ ಸ್ಪಷ್ಟಪಡಿಸುತ್ತಿದ್ದರು. ಹೀಗೆ ಬಾರಿಸಿದಾಗಲೆಲ್ಲಾ ಆ ಪೆಟ್ಟುಗಳನ್ನು ಬಾಯಿತಾಳ ರೂಪದಲ್ಲಿ ಮತ್ತೆಯೂ ಹೇಳುತ್ತಿದ್ದರು. ಇದು ಅವರ ವೈಶಿಷ್ಟ್ಯ.

ಒಮ್ಮೆ ಎಡನೀರು ಮಠದಲ್ಲಿ ಉತ್ಸವದ ಸಮಯ. ಸಂಗೀತ ಕಛೇರಿಯಿತ್ತು. ಅಂದು ಆಟವೂ ಇತ್ತು. ದಿವಾಣ ಭೀಮ ಭಟ್ಟರ ಪೀಠಿಕೆ. ಸಂಗೀತ ಕಛೇರಿ ತಂಡದ ಮೃದಂಗ ವಾದಕರು ಸಭೆಯಲ್ಲಿ ಕುಳಿತು ಪೀಠಿಕೆಯ ನಡೆಗೆ ಕೈಯಲ್ಲಿ ತಾಳ ಹಾಕುತ್ತಿದ್ದರು! ಶಹಬ್ಬಾಸ್ ನುಡಿ ಹೇಳುತ್ತಿದ್ದರು. ಪೀಠಿಕೆ ಮುಗಿದಾದ ಬಳಿಕ ಚೌಕಿಗೆ ಬಂದು ಭಟ್ಟರ ಕೈಕುಲುಕಿ, ಕಾಲಿಗೆ ನಮಸ್ಕರಿಸಿ, ಅದ್ಭುತವಾದ ಪೆಟ್ಟುಗಳು ಎಂದು ಶ್ಲಾಘಿಸಿರುವುದು ನನಗಿನ್ನೂ ನೆನಪಿದೆ. ಇದು ದಿವಾಣರ ತಾಕತ್ತು.

ಅವರ ಪೆಟ್ಟು-ಮಟ್ಟುಗಳಿಗೆಲ್ಲಾ ಎಷ್ಟೋ ಸಲ ನನ್ನನ್ನು ಒಡ್ಡಿಸಿಕೊಂಡಿದ್ದೇನೆ. ಪ್ರಯೋಜನವನ್ನೂ ಪಡೆದಿದ್ದೇನೆ. ನಾನು ಹಿಂದೆ ಕಲಿತ ಎಷ್ಟೋ ನಡೆಗಳು ಅವರಿಂದಾಗಿ ಶುದ್ಧವಾಗಿವೆ. ಈಗಲೂ ಪೀಠಿಕೆ ಬಾರಿಸುವಾಗಲೆಲ್ಲಾ ಭೀಮಣ್ಣ ನೆನಪಿಗೆ ಬರುತ್ತಾರೆ. ಅವರ ಅಂದಿನ ಪೆಟ್ಟು-ಮಟ್ಟುಗಳನ್ನು ಗ್ರಹಿಸಿದಾಗಲೆಲ್ಲಾ ಪುಳಕಗೊಳ್ಳುತ್ತೇನೆ.

ಸಾಮಾನ್ಯವಾಗಿ ದಿವಾಣರು ಚೆಂಡೆಯಲ್ಲಿ ನಿಸ್ಸೀಮ ಅಂತಾರೆ. ವಿಷಯ ಹೌದು. ಆದರೆ ಚೆಂಡೆಗಿಂತಲೂ ಮದ್ದಳೆಯಲ್ಲಿ ಎತ್ತಿದ ಕೈ. ಶೀಮಂತೂರು ನಾರಾಯಣ ಶೆಟ್ಟರು ಹೇಳಿದ ಮಾತು ನೆನಪಾಗುತ್ತದೆ ನನ್ನೆಲ್ಲಾ ಮದ್ದಳೆ/ಚೆಂಡೆ/ಭಾಗವತಿಕೆಯ ಚೋದ್ಯಗಳಿಗೆ ಸರಿಯಾದ ಉತ್ತರವನ್ನು ಕೊಟ್ಟವರು ದಿವಾಣದವರು ಮಾತ್ರ.

ನೀನು ವಿಷಮ ನಡೆಗಳನ್ನು ಕಲಿ. ರಂಗದಲ್ಲಿ ಬಾರಿಸಬೇಡ. ನಾನು ಬಾರಿಸಿ ಯಾರಿಗೂ ಬೇಡದವನಾಗಿದ್ದೇನೆ.. ಎಂದು ಹಿಂದೊಮ್ಮೆ ಹೇಳಿ ಮೌನವಾಗಿದ್ದ ಕ್ಷಣ ನೆನಪಾಗುತ್ತದೆ. ಆ ಮೌನದ ಹಿಂದಿರುವ ಭಾವಗಳನ್ನು ಅರ್ಥ ಮಾಡಲು ಕಷ್ಟವೇನಿಲ್ಲ! ಅವರು ಮಾನಸಿಕವಾಗಿ ಎಷ್ಟೊಂದು ನೋವು ಉಂಡಿರಬಹುದಲ್ಲಾ? ನಮ್ಮಲ್ಲಿರುವ ಅಪಕ್ವತೆಗೆ, ನಮ್ಮ ಅಸಮರ್ಥತೆಗೆ ನಡೆದಾಡುವ ಕೋಶವೊಂದರ ಸಾಧ್ಯತೆಗಳು ನಿಲುಕಿಗೆ ಬಾರದೇ ಹೋಯಿತಲ್ಲಾ. ಅವರ ಬೌದ್ಧಿಕ ಗಟ್ಟಿತನಕ್ಕೆ ಮಾನ-ಸಂಮಾನವನ್ನು ಸೂಚಿಸುವ ಸಣ್ಣ ಕೃತಜ್ಞತೆಯ ಸೊಲ್ಲೂ ನಮ್ಮಲ್ಲಿಲ್ಲದೆ ಹೋಯಿತಲ್ಲಾ. ಯಾರನ್ನೂ ದೂಷಿಸಿ ಪ್ರಯೋಜನವಿಲ್ಲ.

ಅವರು ಆಶೀರ್ವದಿಸಿ ನೀಡಿದ ಚೆಂಡೆ ಕೋಲು ಮೊನ್ನೆಮೊನ್ನೆಯವರಿಗೆ ನನ್ನಲ್ಲಿ ಸುರಕ್ಷಿತವಾಗಿತ್ತು. ಚೆಂಡೆಯಲ್ಲಿ ಕುಣಿದಾಡುತ್ತಿತ್ತು. ಅದರಲ್ಲಿ ಬಾರಿಸುತ್ತಿದ್ದಾಗಲೆಲ್ಲಾ ಭೀಮಣ್ಣ ಮಿಂಚಿ ಮರೆಯಾಗುತ್ತಿದ್ದರು. ನನ್ನ ಅಜಾಗ್ರತೆಯಿಂದ ಅದನ್ನೂ ಕಳೆದುಕೊಂಡೆ!

ದಿವಾಣರು ನೋಡುವಾಗ ಬಿಗುವಿನಂತೆ ಕಂಡರೂ, ಮಾತನಾಡಿದರೆ ಮಗುವಿನ ಮನಸ್ಸು. ಮಾತು ಕಡಿಮೆಯಾದುದರಿಂದಲೇ ಇರಬೇಕು, ಅವರಿಗೆ ಹಿಮ್ಮೇಳದಲ್ಲಿ ಇಷ್ಟು ಏರಲು ಸಾಧ್ಯವಾಯಿತು "ಎರಡು ಚೆಂಡೆ ಕೋಲಿನಲ್ಲಿ ಮನೆ ಮಾಡಿದೆ. ಸಂಸಾರ ನಿರ್ವಹಿಸಿದೆ. ಸಮಾಜದಲ್ಲಿ ಗೌರವದಿಂದ ಬದುಕಿದೆ. ಇನ್ನೇನು ಬೇಕು" ಎಂದು ತಮಾಷೆಯಾಗಿ ಹೇಳಿದ್ದರು. ಈ ಮಾತಿನ ಹಿಂದೆ ಬದುಕೊಂದನ್ನು ಕಟ್ಟಿಕೊಂಡ ತನುಶ್ರಮವಿದೆ. ಕಲಾವಿದನೊಬ್ಬನ ಮನಸ್ಸಿದೆ. ನೊಂದ ಹೃದಯವಿದೆ.



# ಕಲಾಬಂಧು ಮಾವಯ್ಯನ ಮಾರ್ಗದರ್ಶನ

**ಮಹಾಬಲ ಕಲ್ಮಡ್ಕ**
ಕಲಾವಿದ, ರಂಗಕರ್ಮಿ
'ರಂಗಸುರಭಿ' ಕಲ್ಮಡ್ಕ
ಸುಳ್ಯ ತಾಲೂಕು, ದ.ಕ.

ಸುಮಾರು ನಲುವತ್ತು ವರ್ಷಗಳ ಹಿಂದೆ ದಿವಾಣ ಮತ್ತು ಕೆರೆಕ್ಕೋಡಿ ಕಲಾಕುಟುಂಬಗಳು ಒಂದಾದಲ್ಲಿಂದ ನಮ್ಮ ಕಲ್ಮಡ್ಕದ ಸಂಗಮ ಕಲಾ ಸಂಘಕ್ಕೂ ದಿವಾಣ ಭೀಮ ಮಾವಯ್ಯನವರಿಗೂ ಬಿಡಿಸಲಾಗದ ಬಾಂಧವ್ಯ ಬೆಸೆದುಕೊಂಡಿತ್ತು.

ಕಲ್ಮಡ್ಕ ಒಳ್ಳೆಯ ಕಲಾವಿದರ, ವಿಮರ್ಶಕರ, ಯಕ್ಷಗಾನ ಸಹೃದಯರ ಊರಾದ್ದರಿಂದ ಇಲ್ಲಿ ಒಂದು ಕಿರಿಯ ಯಕ್ಷಗಾನ ಕೇಂದ್ರವನ್ನು ಆರಂಭಿಸಬಹುದೆಂಬ ಸಲಹೆಯನ್ನು ಆಗಿನ ಸಂಗಮ ಕಲಾ ಸಂಘದ ಅಧ್ಯಕ್ಷರಾಗಿದ್ದ ನಮ್ಮ ತಂದೆ ಕೆರೆಕ್ಕೋಡಿ ಗಣಪತಿ ಭಟ್ಟರಲ್ಲಿ ನೀಡಿದ್ದ ನಮ್ಮ ಮಾವಯ್ಯ – "ಹಿಮ್ಮೇಳ ತರಬೇತಿಗಾಗಿ ಪದ್ಯಾಣ ಕಲಾವಿದರಿದ್ದಾರೆ. ಮಾತುಗಾರಿಕೆ ಬಲ್ಲ ಉಡುವೆ ಕೋಡಿಯವರಿದ್ದಾರೆ, ವೇಷಭೂಷಣ ತಯಾರಿ, ವಿನ್ಯಾಸ ತಿಳುವಳಿಕೆ ನೀಡಲು ನೀವಿದ್ದೀರಿ, ಮೇಳಗಳಲ್ಲಿ ದುಡಿಯುತ್ತಿರುವ ನುರಿತ ವೇಷಧಾರಿಗಳೂ ಇದ್ದಾರೆ. ಉತ್ತಮ ಪ್ರಸಾಧನ ಕಲಾವಿದರಿದ್ದಾರೆ. ಯಕ್ಷಗಾನದ ಬಗ್ಗೆ ಆಸಕ್ತಿಯಿಂದ ದುಡಿವ ಕಾರ್ಯಕರ್ತರಿದ್ದಾರೆ ಹಾಗಾಗಿಯೇ ಎಲ್ಲಾ ಸಂಪನ್ಮೂಲಗಳನ್ನು ಸದ್ಬಳಕೆ ಮಾಡಿಕೊಂಡರೆ ಸುಲಭವಾಗಿ ಒಂದು ಯಕ್ಷಗಾನ ಕೇಂದ್ರವನ್ನು ಆರಂಭಿಸಬಹುದು" ಎಂದರು. ಈ ರೀತಿಯ ಯೋಚನೆ ಮೊದಲು ಮಾಡಿದವರೇ ದಿವಾಣ ಮಾವಯ್ಯ. ಅವರ ಕಲಾಪರವಾದ ಸಲಹೆಗೆ ಸ್ಪಂದಿಸಿದ್ದ ಅಧ್ಯಕ್ಷರು ಆ ನಿಟ್ಟಿನಲ್ಲಿ ಪ್ರಯತ್ನವನ್ನೂ ಆರಂಭಿಸಿದ್ದರು. ಸಂಗಮ ಕಲಾಸಂಘಕ್ಕಾಗಿ ಸ್ವಂತ ನಿವೇಶನ ಮತ್ತು ಒಂದು ಸುಸಜ್ಜಿತ ಕಟ್ಟಡ ನಿರ್ಮಾಣದ ಕನಸು ಕಂಡು ಕಾರ್ಯತತ್ಪರರಾದರು.

ಯಕ್ಷಕೇಂದ್ರದ ಮೊದಲ ಹೆಜ್ಜೆಯಾಗಿ ಆಗತಾನೇ 'ತೆಂಕು' 'ಬಡಗು' ಯಕ್ಷಗಾನದ ಆದ್ಯಂತವನ್ನು ಅಧ್ಯಯನ ಮಾಡಿಬಂದ ಕರ್ಗಲ್ಲು ವಿಶ್ವೇಶ್ವರ ಭಟ್ಟರ ಸಾರಥ್ಯದಲ್ಲಿ ಯಕ್ಷಗಾನ ನಾಟ್ಯ ತರಬೇತಿ ಕೇಂದ್ರ ಆರಂಭವಾಗಿ ಹಲವಾರು ಕಲಾವಿದರು ಯಕ್ಷರಂಗವನ್ನು

ಪ್ರವೇಶಿಸಿದರು–ಈ ಸಂದರ್ಭದಲ್ಲಿ ದಿವಾಣ ಮಾವಯ್ಯ ನವರ ಅಮೂಲ್ಯ ಸಲಹೆ, ಮಾರ್ಗದರ್ಶನ ಇದ್ದೇ ಇರುತ್ತಿತ್ತು. ಕ್ರಮೇಣ ಮತ್ತೊಂದು ಹೆಜ್ಜೆ ಮುಂದೆ ಹೋದ ಸಂಗಮ ಕಲಾಸಂಸ್ಥೆ ದಿವಾಣರ ಸಾರಥ್ಯದಲ್ಲಿ ಹಿಮ್ಮೇಳ ಅಧ್ಯಯನ ಕೇಂದ್ರವನ್ನೂ ಆರಂಭಿಸಿತು – ಪ್ರತೀ ರವಿವಾರ ಹಾಡುಗಾರಿಕೆ, ಚೆಂಡೆ, ಮದ್ದಳೆ ವಾದನ ಅನುಕೃತಿ ಮೊದಲ್ಗೊಂಡಿತು. ನಾನೂ ಒಬ್ಬ ವಿದ್ಯಾರ್ಥಿಯಾಗಿ ಸೇರಿಕೊಂಡು ಮಾವಯ್ಯ ನವರ ಶಿಷ್ಯನಾದೆ.

ದಿವಾಣ ಮಾವಯ್ಯನವರ ಪಾಠ ಕ್ರಮಗಳೇ ವಿಶಿಷ್ಟವಾದದ್ದು. ಹಂತ ಹಂತವಾಗಿ ಒಂದೊಂದೇ ಮೆಟ್ಟಿಲೇರಿಸುತ್ತಿದ್ದರು. ಪ್ರಾಥಮಿಕ ಹಂತದ ಎಲ್ಲಾ ಪೆಟ್ಟುಗಳು ಕರಗತವಾಗದೆ ಮುಂದೆ ಹೋಗುವಂತಿಲ್ಲ. ಪಾಠಗಳ ಮಧ್ಯೆ ಯಕ್ಷಗಾನದ ಬಗ್ಗೆ ಅತ್ಯಮೂಲ್ಯವೆನಿಸುವ ಎಷ್ಟೋ ವಿಚಾರಗಳು, ವಿಮರ್ಶಾತ್ಮಕ ಟಿಪ್ಪಣಿಗಳು, ಅವರ ತಿರುಗಾಟದ ಅನುಭವದಿಂದ, ಹಿರಿಯರ ಒಡನಾಟದಿಂದ ಕಂಡುಕೊಂಡ ಹಲವಾರು ಸತ್ಯಗಳನ್ನು, ಇತ್ತೀಚಿಗಿನ ಪ್ರದರ್ಶನ ಗಳ ಬಗ್ಗೆ ಖಾರವಾದ ಟೀಕಾ ಪ್ರಹಾರಗಳನ್ನು ರಸವತ್ತಾಗಿ ಬಿಚ್ಚಿಡುತ್ತಿದ್ದರು. ಬಿಡುವಿನ ಸಮಯ ದಲ್ಲೂ ತಾಳಗಳನ್ನು ಗುಣಿಸುತ್ತಾ ಬೆರಳುಗಳಿಂದ ನಡೆಗಳನ್ನು ಬಾರಿಸುತ್ತಾ, ತಾಳಗಳ ಲೆಕ್ಕಾಚಾರಗಳ ಚಿಂತನ–ಮಂಥನ ಮಾಡುತ್ತಾ ಸದಾ 'ಲಯ'ದ ಗುಂಗಿನಲ್ಲೇ ಇರುತ್ತಿದ್ದ ಅವರು ಸೃಜನಶೀಲ ಕಲಾವಿದರು, ಹಲವಾರು ಹೊಸ ನಡೆಗಳನ್ನೇ ನಿರೂಪಿಸಿದ ಸೃಷ್ಟಿಕರ್ತರು.

ನಾವು ಹಾಡುಗಾರಿಕೆ ತರಗತಿ ಆರಂಭಿಸುವ ಮುನ್ನ ಯಕ್ಷಗಾನ ಭಾಗವತನಿಗಿರ ಬೇಕಾದ ಅರ್ಹತೆಗಳ ಬಗ್ಗೆ ಹೇಳುತ್ತಾ "ಭಾಗವತ ತನ್ನ ನಿರ್ದೇಶಕ ಪಟ್ಟ ಕಾಯ್ದುಕೊಳ್ಳ ಬೇಕಾದರೆ ಯಕ್ಷಗಾನದ ಸರ್ವಾಂಗ ಪರಿಜ್ಞಾನವನ್ನು ಹೊಂದಿರಬೇಕು. ಆತ ಉತ್ತಮ 'ವಿನ್ಯಾಸ'ಕಾರನಾಗಿರಬೇಕು. ಪ್ರತೀ ಪ್ರಸಂಗಕ್ಕೂ ಆರಂಭ, ಉಚ್ಚಕ್ಷಣ (Climax), ಅಂತ್ಯ ಇದ್ದೆ ಇದೆ. ಯಾವ ಭಾಗಕ್ಕೆ, ಯಾವ ರಸಕ್ಕೆ ಒತ್ತುನೀಡಬೇಕು, ಎಷ್ಟು ಬೆಳೆಸಬೇಕು, ಯಾವ ವೇಷವನ್ನು ಎಲ್ಲಿ? ಎಷ್ಟು? ಹೇಗೆ? ಅಭಿವ್ಯಕ್ತಿಸಬೇಕೆಂಬ ಅರಿವು, ಕಲಾವಿದರೆಲ್ಲರ ಸಾಮರ್ಥ್ಯ ಗೊತ್ತಿರಲೇಬೇಕು. ಪ್ರಸಂಗದ 'ಲಯ'ವನ್ನು ಹುಡುಕಿಕೊಂಡು ಯಕ್ಷಗಾನದ ಎಲ್ಲಾ ಮೂಲಗಳನ್ನು ಬಳಸಿ ಸುಸಂಬದ್ಧವಾದ ರಂಗಕೃತಿಯನ್ನು ಕಲಾತ್ಮಕವಾಗಿ ನೀಡುವುದು ಭಾಗವತನಿಂದ ಮಾತ್ರ ಸಾಧ್ಯ ಎಂಬುದು ಮಾವಯ್ಯನವರ ಅಭಿಮತ. ಇದು ಕಲಾಲೋಕದ ಆರಂಭವೂ ಹೌದು. ಪಾಠ ಪ್ರವಚನಗಳಿಂದ ಅರ್ಧದಷ್ಟು ಕಲಿಯಬಹುದೇ ವಿನಃ ಉಳಿದ ವಿಚಾರಗಳನ್ನು ಪ್ರದರ್ಶನಗಳಿಂದ ಅರಿತು ಕಲಾವಿದರೆನಿಸಿ ಕೊಳ್ಳಬಹುದೆಂಬುದು ಅವರ ಸ್ಪಷ್ಟ ಅಭಿಪ್ರಾಯ ಅನುಭವಕ್ಕಾಗಿ ತಾಳಮದ್ದಳೆ. ಕೂಟಗಳ ಪ್ರಯೋಗಕ್ಕೂ ಅವರು ಸಲಹೆ ನೀಡಿದ್ದರು.

ದಿವಾಣ ಮಾವಯ್ಯ ಪಾಠದ ಮಧ್ಯೆ ಆಗಾಗ 'ಲಯ'ದ ವಿಚಾರವಾಗಿ ವಹಿಸುವ ಎಚ್ಚರ ನನಗೆ ಅಚ್ಚರಿ ಮೂಡಿಸಿದ್ದು, ನಾನು ರಂಗ ಅಧ್ಯಯನಕ್ಕಾಗಿ ನೀನಾಸಂ ಸೇರಿಕೊಂಡಾಗ. ಅಲ್ಲಿ ಬಂಗಾಳದ ಖ್ಯಾತ ರಂಗನಿರ್ದೇಶಕ ಡಾ. ರುಸ್ತುಂ ಭರೂಚ ಅವರೂ ಕೂಡಾ "ಪ್ರತಿಯೊಬ್ಬ ಪಾತ್ರಧಾರಿಯೂ ಆತ ವಹಿಸಿಕೊಂಡ ಪಾತ್ರದ ಅಧ್ಯಯನ ದಿಂದ ಲಯವನ್ನು ಕಂಡುಕೊಳ್ಳಬೇಕು. ಪ್ರತೀ ಪಾತ್ರಕ್ಕೂ ಅದರದ್ದೇ ಆದ ಲಯವಿದೆ. ಅದು ರಂಗದಲ್ಲಿ ಅತೀ ಮಹತ್ವವನ್ನು ಪಡೆಯುತ್ತದೆ" ಎಂದಿದ್ದರು. ಆಗ ನಮ್ಮ ಮಾವಯ್ಯ ಹೇಳಿದ ಮಾತು ರಂಗಭೂಮಿಯ ಸಾರ್ವತ್ರಿಕ ಸತ್ಯ ಎಂಬ ಅರಿವು ನನಗಾಯ್ತು ಎಲ್ಲಾ ಪ್ರದರ್ಶನ ಕಲೆಗಳೂ ಲಯಾಧಾರಿತವಾಗಿದೆ ಎಂಬುದು ಸ್ಪಷ್ಟ.

ಚೆಂಡೆಯನ್ನು ಹೆಗಲೇರಿಸಿ ಗಂಭೀರವಾಗಿ ರಂಗದಲ್ಲಿ ಭೀಮ ಪ್ರಹಾರ–ಪ್ರಯೋಗ ನೊಂದಿಗೆ ಇಡೀ ದೇಹವೇ ಪ್ರತೀ ರಂಗ ಕ್ರಿಯೆಗಳಿಗೆ ಸ್ಪಂದಿಸುವುದು ಅವರ ವಿಶೇಷ. ಪ್ರದರ್ಶನದ ಮಧ್ಯೆ ಅನ್ಯ ವ್ಯವಹಾರಗಳಿಗೆ ಅವರು ತಲೆಕೆಡಿಸಿಕೊಂಡವರಲ್ಲ! ಎಲ್ಲವನ್ನೂ ಮರೆತು ಪ್ರದರ್ಶನದೊಂದಿಗೆ ಒಂದಾಗುತ್ತಿದ್ದ ಅಪ್ಪಟ ಕಲಾವಿದ ನಮ್ಮ ಮಾವಯ್ಯ.

ಒಳ್ಳೆಯ ಕಲಾವಿದರನ್ನು ಪ್ರೋತ್ಸಾಹಿಸಿ, ಹಿರಿಯ ಕಲಾವಿದರನ್ನು ಗೌರವಿಸುವುದರಲ್ಲೂ ಅವರು ಮುಂದೆ – ನಮ್ಮ ಪದ್ಯಾಣ ಸಹೋದರರನ್ನು, ಪದ್ಯಾಣ ಶಂಕರ ನಾರಾಯಣ ಭಟ್ಟರನ್ನು, ಕರ್ಗಲ್ಲು ವಿಶ್ವೇಶ್ವರ ಭಟ್ಟರನ್ನು, ಬಣ್ಣದ ಮಾಲಿಂಗರನ್ನು, ಗೋವಿಂದ ಭಟ್ಟರನ್ನು, ಬಲಿಪರನ್ನು, ನೆಡ್ಲೆಯಂತವರನೇಕರನ್ನು ತುಂಬಾ ಮೆಚ್ಚಿ ಕೊಂಡಾಡುತ್ತಿದ್ದರು.

ನಾನು ಯಕ್ಷ ವೇಷಭೂಷಣ ತಯಾರಿ ಮಾಡುತ್ತಿದ್ದ ಆರಂಭದ ದಿನಗಳಲ್ಲಿ ಹತ್ತಿರದಲ್ಲೇ ಕುಳಿತು ಎಲ್ಲವನ್ನೂ ಗಮನಿಸುತ್ತಿದ್ದ ಮಾವಯ್ಯ ಹಲವಾರು ಉಪಯುಕ್ತ ಮಾಹಿತಿಗಳನ್ನು ನೀಡಿ ಮಾರ್ಗದರ್ಶನ ಮಾಡಿದ್ದರು. ಒಮ್ಮೆ ಯಕ್ಷಗಾನದ ವೇಷಗಳು ಬಳಸುವ 'ಭುಜಕೀರ್ತಿ' ವ್ಯತ್ಯಾಸಗಳ ಬಗ್ಗೆ ಚರ್ಚಿಸುತ್ತಾ –

ಪೀಠಿಕೆ ವೇಷಗಳಿಗೆ ಭುಜಕೀರ್ತಿ
ಎದುರು ವೇಷಗಳಿಗೆ ಭುಜಮುಳ್ಳು
ರಾಜಬಣ್ಣಗಳಿಗೆ ಗಿಳಿ
ಕಾಟು ಬಣ್ಣಕ್ಕೆ ವಿಕೃತ ಗಿಳಿ
ಅರೆಬಣ್ಣಗಳಿಗೆ ದಂಬೆ
ಹೆಣ್ಣು ಬಣ್ಣಗಳಿಗೆ ದಂಬೆಮುಳ್ಳು

ಇತ್ಯಾದಿ ಪಾತ್ರಾನುಗುಣವಾಗಿ ವಿನ್ಯಾಸಗೊಳಿಸಿಕೊಳ್ಳಬೇಕೆಂಬುದನ್ನು ಚಿತ್ರ ಸಹಿತ ಮಾಹಿತಿ ಒದಗಿಸಿದ್ದರು.

ನಾನು ಕಲಾವಿದರ ಬೇಡಿಕೆಯಂತೆ 'ಥರ್ಮೋಫೋಮ್' ನಿಂದ ಚಿಟ್ಟೆ ತಯಾರಿಸಿ ಕೊಡುತ್ತಿದ್ದೆ. ಅದನ್ನು ನಯವಾಗಿ ಆಕ್ಷೇಪಿಸಿದ ನಮ್ಮ ಮಾವ "ಮೇಳಗಳ ಕಲಾವಿದರಿಗೆ ಕೊಟ್ಟೆಯಾದರೆ ಕ್ರಮೇಣ ಚಿಟ್ಟೆ ಎಂಬ ಕಲಾತ್ಮಕ ಅಂಗವೇ ಊನವಾಗಿ ಬಿಡಬಹುದು. ಮುಂದೆ ಯಾರಿಗೂ ಮಾಡಿಕೊಡಬೇಡ" ಎಂದಿದ್ದರು. ಅದನ್ನು ಅಲ್ಲಿಗೇ ನಾನು ನಿಲ್ಲಿಸಿದ್ದೆ.

ಕೆಲವಾರು ಬದಲಾವಣೆಗಳು ಕಾಲಕ್ಕೆ ತಕ್ಕಂತೆ ಸಹಜವೂ, ಸಹ್ಯವೂ ಆಗುತ್ತದೆ. ಆದರೆ ಯಕ್ಷಗಾನದ್ದೇ ಆದ ಅತ್ಯುತ್ತಮ ಕಲಾತ್ಮಕ ಅಂಶಗಳನ್ನು ಕಾಪಾಡಿಕೊಳ್ಳುವುದು ಇಂದಿನ ಅಗತ್ಯ ಎನ್ನುತ್ತಿದ್ದರು. ನಮ್ಮ 'ಸಂಗಮ ಕಲಾ ಸಂಘ'ವು ಅದ್ವಿತೀಯ ಸಾಧನೆಗಾಗಿ ದಿವಾಣರಿಗೆ ಆಗಿನ ಪ್ರಸಿದ್ಧ ಭಾಗವತರೆನಿಸಿಕೊಂಡಿದ್ದ ಮಂಡೆಚ್ಚರೊಂದಿಗೆ ಸನ್ಮಾನ ಕಾರ್ಯಕ್ರಮವೂ ಜರುಗಿತ್ತು. "ಮಂಡೆಚ್ಚರ ದಾರಿಯೇ ಬೇರೆ; ನನ್ನದೇ ಬೇರೆ, ನನ್ನದು ದೇಸಿ ಅವರದ್ದು ಮಾರ್ಗ, ನನ್ನದು ಹಳತ್ತು ಅವರದ್ದು ಹೊಸತ್ತು" ಎಂದಿದ್ದರು. ಹಳತು, ಹೊಸದನ್ನು ಜೊತೆಗಿರಿಸಿ ಗೌರವಿಸಿದಕ್ಕಾಗಿ ತುಂಬಾ ಸಂತಸಪಟ್ಟವರು ನಮ್ಮ ಮಾವಯ್ಯ.

ಕೊನೇ ಕ್ಷಣದವರೆಗೂ ತನ್ನದೇ ಭೀಮ ಹೆಜ್ಜೆಗಳನ್ನಿಡುತ್ತಾ, ಹಲವಾರು ಕಡೆಗಳಲ್ಲಿ ತರಗತಿಗಳನ್ನು ನಡೆಸುತ್ತಾ, ಪ್ರದರ್ಶನಗಳಲ್ಲಿ ಶಕ್ತಿ ಮೀರಿ ದುಡಿಯುತ್ತಾ, ಕಮ್ಮಟ, ವಿಚಾರಗೋಷ್ಠಿ ಗಳಲ್ಲಿ ಭಾಗವಹಿಸುತ್ತಾ, ಯಕ್ಷರಂಗದ ಉನ್ನತಿಗಾಗಿ ಹಗಲಿರುಳು ದುಡಿದ ನಮ್ಮ ಮಾವಯ್ಯ ಕಲಾ ಮಾತೆಯ ಕಿರೀಟದ ಅನರ್ಘ್ಯ ರತ್ನಗಳಲ್ಲಿ ಒಂದಾಗಿ ಮಿನುಗುತ್ತಾ ಅಮರರಾಗಿದ್ದಾರೆ.

# ಮರೆತುಹೋಗದ ದಿವಾಣ ಭೀಂ ಮಾವ

**ಮೂರ್ತಿ ದೇರಾಜೆ**
**ರಂಗನಿರ್ದೇಶಕ, ಲೇಖಕ**
**'ಆರಾಧನಾ', ಉಕ್ಕುಡ, ವಿಟ್ಲ**
**ದಕ್ಷಿಣಕನ್ನಡ**

ನನ್ನ ಬಾಲ್ಯದಲ್ಲಿ ಭೀಂ ಮಾವನನ್ನು ಕಂಡ ನೆನಪು ... ಅಷ್ಟು ಸ್ಪಷ್ಟವಾದದ್ದಲ್ಲ. ನನಗೆ ಅವರ ಒಡನಾಟದ ಭಾಗ್ಯ ಸಿಕ್ಕಿದ್ದು 70ರ ದಶಕ ಸುರುವಾದ ಮೇಲೆಯೇ...

ನನ್ನ ಅಪ್ಪಯ್ಯ, ದೇರಾಜೆ ಸೀತಾರಾಮಯ್ಯನವರು ವಿಟ್ಲಕ್ಕೆ ಬಂದು ನೆಲೆಸಿ, ಇನ್ನು ಸಾರ್ವಜನಿಕವಾಗಿ ತಾಳಮದ್ದಳೆಯಲ್ಲಿ ಅರ್ಥ ಹೇಳಿದ್ದು ಸಾಕು,ಎಂದು ನಿಲ್ಲಿಸಿದ ದಿನಗಳು. ಆದರೆ ಎಡನೀರು ಮಠ ಅವರನ್ನು ಬಿಟ್ಟಿರಲೇ ಇಲ್ಲ. ಸ್ವಾಮೀಜಿಯವರ ಆತ್ಮೀಯ ಒತ್ತಾಯದ ಮೇರೆಗೆ, ತೀರಾ ಖಾಸಗಿಯಾಗಿ.ಅವರ ಭಾಗವತಿಕೆಯ ತಾಳಮದ್ದಳೆಗಳಲ್ಲಿ ಅರ್ಥ ಹೇಳುತ್ತಾ ಇದ್ದ ಸಂದರ್ಭ.

ಆ ದಿನಗಳಲ್ಲಿ ನನ್ನ ಅಪ್ಪಯ್ಯನಿಗೆ ಅಲ್ಲಿ ಜೊತೆಯಾದವರು. ಕೀರಿಕ್ಕಾಡು ಮಾಸ್ತ್ರು, ವೆಂಕಟರಾಜ ಪುಣ್ಚಿತ್ತಾಯರು, ಪುಂಡೂರು ಗೋಪಾಲಕೃಷ್ಣ ಪುಣ್ಚಿತ್ತಾಯರು, ಮಂಡೆಚ್ಚರು, ಭಾಗವತ ಜಗನ್ನಾಥ ಶೆಟ್ಟರು, ನೆಡ್ಲೆ ನರಸಿಂಹ ಭಟ್ಟರು, ಚಿಪ್ಪಾರು ಬಲ್ಲಾಳರು, ಬಾಬು ರೈಗಳು ಮುಂತಾದವರೊಂದಿಗೆ ದಿವಾಣ ಭೀಮ ಭಟ್ಟರು ಕೂಡಾ.

ಆದರೆ, ಭೀಮ ಭಟ್ಟರು ಮಠದಲ್ಲಿ ಮಾತ್ರ ನನ್ನ ಅಪ್ಪಯ್ಯನ ಸಹವರ್ತಿ ಅಲ್ಲ, ಎಡನೀರಿಗೆ ಹೋಗುವ, ಬರುವ ಸಂದರ್ಭ, ಮಠದ ಜೀಪಿನಲ್ಲಿ, ಸೂಪರ್ ಬಸ್ಸಿನಲ್ಲಿ.

ಕಲಾಪ್ರೇಮಿ ಕಂಡೆಕ್ಟರ್ ವೈ.ಡಿ.ನಾಯಕರೊಂದಿಗೆ ಪಟ್ಟಾಂಗ ಹೊಡೆಯುತ್ತಾ ಕೆ.ಬಿ.ಟಿ ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಕೂಡಾ ಜೊತೆಗೇ ಇದ್ದವರು. ಆಗ ನಾನು ಕಾಲೇಜು ವಿದ್ಯಾಭ್ಯಾಸ ಮುಗಿಸಿದ್ದರೂ ನನಗೆ ಹೇಳಿಕೊಳ್ಳುವ ಕೆಲಸವೇನೂ ಇಲ್ಲದಿದ್ದುದ ರಿಂದ ಅಪ್ಪಯ್ಯನ ಸಂಗತ್ತಕ್ಕೆ ಎನ್ನುವ ನೆಪದಲ್ಲಿ ಅವರೊಂದಿಗೆ,

ನನ್ನದೂ ಎಡನೀರು ಸರ್ಕೀಟು ಸುರುವಾಗಿ ಭೀಂ ಮಾವನ ಒಡನಾಟ ನನಗೆ ಸಿಗುವಂತಾಯ್ತು. ನನಗೆ ಭೀಂಮಾವನ ಪಾಂಡಿತ್ಯದ ಬಗ್ಗೆ ಗೊತ್ತಿಲ್ಲ. ಅವರ ಚೆಂಡೆ,ಮದ್ದಳೆ ವಾದನದ ವಿವರಣೆ, ವಿಮರ್ಶೆ ನನ್ನ ಯೋಗ್ಯತೆಗೆ ಮೀರಿದ್ದು. ಆದರೆ ಅವರು ನನ್ನ ಮೇಲಿಟ್ಟ ಪ್ರೀತಿ,ವಾತ್ಸಲ್ಯಗಳಿಂದಾಗಿ ಅವರು ನನಗೆ ತೀರಾ ಹತ್ತಿರದವರು.

ಸಾಮಾನ್ಯವಾಗಿ ಈ ಯಕ್ಷಗಾನದ ಚೆಂಡೆ ಮದ್ದಲೆಯವರು ಅಂತ ಹೇಳಿದರೆ ಚೌಕಿಯ ಹಾಸ್ಯಗಾರರು ಅಂತ್ಲೇ ಲೆಕ್ಕ. ಭೀಂ ಮಾವನೂ ಇದಕ್ಕೆ ಅಪವಾದ ಏನಲ್ಲ. ಮಾತಿನ ನಡುವೆ ಏನಾದರೂ ಪಿಟ್ಕಾಯನಗಳು ಅವರದ್ದೂ ಧಾರಾಳ ಇತ್ತು.

ಒಂದು ಸಾರಿ, ಎಡನೀರಿನ ಮಠದ ಮಾಳಿಗೆಯಲ್ಲಿ... ಖಾಸಗಿ ತಾಳಮದ್ದಳೆ ಇತ್ತು. ರಾತ್ರಿ ಎಲ್ಲರ ಊಟದ ನಂತರ ಸ್ವಾಮೀಜಿಯವರು ಭೀಮ ಭಟ್ಟರ ಮಗ ಶಂಕರ ಭಟ್ಟರಲ್ಲಿ ಹಾಂ .. ಇನ್ನು ಸುರು ಮಾಡುವ, ಶಂಕರ, ಚೆಂಡೆ ಭಾರಿಸು ಅಂತ ಹೇಳಿದರು

ಶಂಕರ ಭಟ್ಟರು ಕುಶಾಲಿನಲ್ಲಿ ಸುರುಮಾಡ್ಲಕ್ಕು ಆದರೆ ಹಶು ಆವುತ್ತು ಎಂತಾರು ಪಲಾರ ಇದ್ದರೆ ಒಳ್ಳೆದಿತ್ತು. ಅಂತ ತಲೆ ಕೆರೆದುಕೊಂಡರು.

ಆಗ ಸ್ವಾಮೀಜಿಯವರು ಮೂಗಿನ ಮೇಲೆ ಬೆರಳಿಟ್ಟು ಅಲ್ಲೇ ಇದ್ದ ಭೀಮ ಭಟ್ಟರಲ್ಲಿ

"ಏ ಭೀಮ ಇದಾ ನಿನ್ನ ಮಗಂಗೆ ಹಶು ಆವ್ತಡೋ ಎಂತ ಕತೆ ಇದು!! ಮೂಗಿನವರೆಗೆ ಉಂಡು ಗಂಟೆ ಅರ್ದ ಆಯಿದಿಲ್ಲೆ!!" ಅಂದಾಗ ಭೀಮ ಭಟ್ಟರು

"ಅಪ್ಪೂ ಎನ್ನ ಅಪ್ಪ ಎನಗೆ ಭೀಮ ಹೇಳಿ ಹೆಸರು ಮಡುಗಿ ಆಗಿ ಹೋಯಿದು. ಇಲ್ಲದ್ದರೆ ಇವಂಗೇ ಭೀಮ ಹೇಳಿ ಮಡುಗುಲಾವುತ್ತಿತ್ತು ಆನು ಹೆಸರಿಂಗೆ ಮಾತ್ರ ಭೀಮ

ನಿಜವಾಗಿ ಭೀಮ ಅವನೇ ಎಂದರು. ಎಲ್ಲರೂ ನಗುವಾಗ ಮತ್ತೂ ಸೇರಿಸಿದರು ತಿಂಬದರಲ್ಲಿ ಮಾತ್ರ ಅಲ್ಲ ಕೆಲಸವೂ ಹಾಂಗೇ ....... ಮಾಡಿದರೆ ಭೀಮನೇ ಕ್ವಿಂಟಾಲು ಗೋಣಿಯ ನಾಕುಮ್ಮೈಲು ದೂರಕ್ಕೂ ಹೊರುಗು ಎಂದಾಗ ಮಗನ ಬಗ್ಗೆ ಅವರಿಗಿದ್ದ ಮೆಚ್ಚುಗೆ ವ್ಯಕ್ತವಾದದ್ದಲ್ಲದೇ ಎಲ್ಲರಿಗೂ ಶಂಕರಭಟ್ಟರ ಈ ಸಾಮರ್ಥ್ಯವೂ ಗೊತ್ತಾಯ್ತು.

ಒಂದು ಸಾರಿ ಎಡನೀರು ಮಠದಲ್ಲೇ ಪಂಚವಟಿ ಪ್ರಸಂಗ ಅಂತ ನಿಶ್ಚಯವಾಯ್ತು. ದೇರಾಜೆಯವರ ಶೂರ್ಪನಖಿ, ದೇರಾಜೆಯವರಿಗೆ ಚೆಂಡೆಯನ್ನು ಬಲವಾಗಿ ಭಾರಿಸುವುದು ಇಷ್ಟವಾಗ್ತಿರಲಿಲ್ಲ. ಬೆರಳಿಂದ ಸಿಡಿದರೇ ಶಬ್ದವಾಗುವುದಕ್ಕೆ .......

ಅಷ್ಟು ಶಕ್ತಿ ಹಾಳು ಮಾಡುದು ಯಾಕಪ್ಪಾ ಅಂತ ಹೇಳ್ತಿದ್ದವರು ಅವರು. ಆ ದಿನ ಭೀಮ ಭಟ್ಟರು ಇಂದು ದೇರಾಜೆಯ ಶೂರ್ಪನಖಿಯ ಪ್ರವೇಶ ಹೊಸ ನಮುನೆಲಿ ಅಪ್ಪಿ ಹಾಂಗೆ ಮಾಡ್ತೆ ನೋಡಿ ಅಂತ ಕೋಣೆಯಲ್ಲಿ, ಮೆತ್ತಗೆ ಯಾರಲ್ಲೋ ಹೇಳಿದ್ರು

ತಾಳಮದ್ದಳೆ ಸುರುವಾಗಿ ಶೂರ್ಪನಖಿ ಬಂದಳಾ ಕಾನನಕೆ ಕುಲಗೇಡಿ ಪದಕ್ಕೆ ಶಕ್ತಿ ಹಾಕಿ ಚೆಂಡೆ ಬಾರಿಸಿದರು. ದೇರಾಜೆಯವರು ಒಮ್ಮೆ ನಿಲ್ಲಿಸ್ತೀರೋ ನಿಮ್ಮ ಹರಟೆ ಎಂದಾಗ ಎಲ್ಲರೂ ಒಮ್ಮೆ ಗಲಿಬಿಲಿಯಾದರು. ಬೀಂ ಮಾವ ನಗು ತಡೆಯಲಾಗದೇ, ಬೈರಾಸನ್ನು ಮುಖಕ್ಕೆ ಮುಚ್ಚಿಕೊಂಡು ಒಳಗೆ ಓಡಿಯಾಯ್ತು

ದೇರಾಜೆಯವರು ನಗುತ್ತಾ ನೀವು ಹೀಗೆ ಗಲಾಟೆ ಮಾಡಿದ್ರೆ ಪಾಪ!! ಆ ಚಿಕ್ಕ ಹುಡುಗರಿಗೆ ಹೆದರಿಕೆ ಆಗದೇ ಇದ್ದೀತೆ ಮೆಲ್ಲ ಹೊಡೀರಿ ಎಂದು ಅರ್ಥ ಮುಂದುವರಿಸಿ ದಾಗ, ಸ್ವಾಮಿಗಳು ಸೇರಿದಂತೆ ಎಲ್ಲರಿಗೂ ವಿಪರೀತ ನಗು ಭೀಮ ಭಟ್ಟರು ಮೊದಲೇ ಒಳಗೆ ಓಡಿದ್ದನ್ನು ನೋಡಿ ಸ್ವಾಮಿಗಳು ಓ ಇದು ಭೀಂ ಭಟ್ಟರ ಕಿತಾಪತಿ ಅಂತ

ಉದ್ಗಾರವೆತ್ತಿದರು.

ದಿವಾಣ ಭೀಮ ಭಟ್ಟರದ್ದು ವಿಷಮ ಪೆಟ್ಟು ಅಂತ ಕೆಲವರು ಹೇಳ್ತಾ ಇದ್ದುದನ್ನು ಕೇಳಿದ್ದೆ. ಅದು ಏನು ಅಂತ ನನಗೆ ಸರೀ ಅರ್ಥ ಆಗಿರಲೇ ಇಲ್ಲ. ಉಳಿದವರಿಗಿಂತ ಸ್ವಲ್ಪ ಬೇರೆ ರೀತಿ ಇದ್ದುದರಿಂದ ನನಗೆ ಒಂದು ರೀತಿಯ ಇಷ್ಟ ಆಗ್ತಿತ್ತು. ಆದರೆ ಅವರ ಮದ್ದಳೆ ವಾದನದ ಥ್ರಿಲ್ ಆದದ್ದು ವಿಟ್ಲದಲ್ಲಿ. ಪ್ರಾಯಶಃ 1986 ರಲ್ಲಿ, ಎರಡನೇ ವರ್ಷದ ದೇರಾಜೆ ನೆನಪು ಕಾರ್ಯಕ್ರಮದಲ್ಲಿ.

ಬಲಿಪ ಭಾಗವತರ ಪದಕ್ಕೆ ಸಾಥಿಯಾಗಿ ಅಷ್ಟು ಚಂದದ ಹೊಂದಾಣಿಕೆ ಅಂತಾದ್ದು ಯಕ್ಷಗಾನದಲ್ಲಿ ನಾನು ಕೇಳಿರಲೇ ಇಲ್ಲ. ಪ್ರಾಯಷಃ ನಂತರವೂ ಕೇಳಿಲ್ಲ. ಸತ್ಯನ್ ದೇರಾಜೆ ಈಗಲೂ ನೆನಪಿಸಿಕೊಳ್ತಾನೆ.

ವಿಟ್ಲ ಶಂಭು ಶರ್ಮ ಹೇಳ್ತಾ ಇರ್ತಾರೆ : ಭೀಮಣ್ಣ ಮಂಡೆಚ್ಚಂಗೆ ಉಪದ್ರ ಕೊಟ್ಟಿದ ಹೇಳಿ ಕೆಲಾವು ಜನ ಹೇಳ್ತವು. ಇಲ್ಲೆಪ್ಪಾ ಅದು ಅಂತೇ ಸುದ್ದಿ ಆದ್ದು ಭೀಮಣ್ಣನ ಜೊತೆ ಒಳ್ಳೆದಾವ್ತು ಹೇಳಿ ಎಷ್ಟೋ ಸರ್ತಿ ಮಂಡೆಚ್ಚರೇ ಎನ್ನ ಹತ್ತರ ಹೇಳಿದ್ದಿದ್ದು ಅಂತ. ನನಗೂ ಹಾಗೇ ಕಂಡಿದೆ. ಭೀಮ ಭಟ್ಟರಲ್ಲಿ ಉದ್ದೇಶ ಪೂರ್ವಕ ಯಾರಿಗಾದರೂ ತೊಂದರೆ ಕೊಡುವ ಸ್ವಭಾವ ಇದ್ದಂತೆ ನಾನೆಂದೂ ಕಂಡಿಲ್ಲ. ಭೀಂ ಮಾವ ವಿಪರೀತ ಬಡತನವನ್ನೂ ಅನುಭಪಿಸಿದ್ದರಂತೆ. ಆದರೆ ಅದರಿಂದಾಗಿ ದಿಕ್ಕೆಟ್ಟವರಲ್ಲ. ಬಂದದ್ದನ್ನು ಬಂದಂತೆ ಅನುಭವಿಸಿದವರು. ತನ್ನ ನೋವನ್ನು ಯಾರಲ್ಲಾದರೂ ಹೇಳಿಕೊಂಡದ್ದು ಪ್ರಾಯಶಃ ಕಡಿಮೆ ಇದ್ದೀತು.

ನನ್ನ ತೀರ್ಥರೂಪರ ಕೊನೆಯ ತಾಳಮದ್ದಳೆಯಲ್ಲಿಯೂ ಶೇಣಿಯವರು, ಅಗರಿ ಭಾಗವತರು, ನೆಡ್ಲೆಯವರ ಜೊತೆಗೆ ಭೀಂ ಮಾವನೂ ಸಹವರ್ತಿಯಾಗಿದ್ರು. ದೇರಾಜೆ ಯವರಿಗೂ ಇದು ಖುಶಿ ಕೊಟ್ಟಿತ್ತು. ಜೊತೆಗಿದ್ದ ನಾಲ್ಕು ಜನರೂ ತನ್ನ ಮೆಚ್ಚಿನವರೇ ಆದದ್ದು ಒಳ್ಳೆಯದಾಯ್ತು ಎಂದಿದ್ರು. ಕೊನೆಯ ತಾಳಮದ್ದಳೆ ಎಂದು ಅರಿವಾಗಿತ್ತೋ ಏನೋ!! ದೇರಾಜೆಯವರು ನಿಧನರಾದಾಗ ಉದಯವಾಣಿಯವರು ಮೊದಲ ಪುಟದಲ್ಲಿ ಸುದ್ದಿ ಪ್ರಕಟಸಿದ್ದರು. ಆದರೆ ಫೊಟೊ ಮಾತ್ರ ಭೀಮ ಭಟ್ಟರದ್ದು!!! ಹೀಗೂ ಉಂಟೇ!!!

ಈ ಬೇಜವಾಬ್ದಾರಿಯನ್ನು ನೋಡಿ ಸಂಕಟವಾಗಿ ಕೆಲವು ಜನ ಅಭಿಮಾನಿಗಳು ಭೀಮಭಟ್ಟರಿಗೆ ಹೀಗೆ ಅವಮಾನ ಮಾಡಬಾರದು ಲಾಯರ್ ನೋಟೀಸ್ ಕೊಡಬೇಕು ಬಿಡಬಾರ್ದು ಅವರನ್ನು ಅಂತ ಹೇಳಿದಾಗ ಎನಗೆಂತ ಅವಮಾನ!!! ಇದು ಎನಗಾದ ಅವಮಾನ ಅಲ್ಲ. ಇದು ಸತ್ತವಂಗೆ ಮಾಡಿದ ಅವಮಾನ. ಎನ್ನ ಮಟ್ಟಿಂಗೆ ಒಳ್ಳೆದೇ ಆತು ಹೇಳುಂವ ಎಂತಕೆ ಹೇಳಿದರೆ ಆನು ಸತ್ತರೆ ಎನ್ನ ಪಟ ಹೇಂಗೂ ಹಾಕವು ಈ ಪೇಪರಿನವು. ಹೀಂಗಾದರೂ ಪೇಪರಿಲಿ ಎನ್ನ ಪಟ ಬಂತನ್ನೆ ಅಂತ ನಗು ನಗುತ್ತಾ ತೀರಾ ಸಹಜವಾಗಿ ಹೇಳಿದವರು ಈ ಭೀಮ ಭಟ್ಟರು.

ಅವರು ಹೇಳಿದ ಹಾಗೇ ಆಯ್ತು ಭೀಮ ಭಟ್ಟರು ನಿಧನರಾದಾಗ ಪತ್ರಿಕೆಯಲ್ಲಿ ಫೊಟೊ ಹಾಕುವುದು ಬಿಡಿ ಅದೊಂದು ಮಹತ್ವದ ಸುದ್ದಿ ಎಂದೂ ಪತ್ರಿಕೆಯವರಿಗೆ ಕಾಣ್ಲೆಲ್ಲ ಎಲ್ಲೋ ಮೂಲೆಯಲ್ಲಿ ಎರಡು ವಾಕ್ಯ ಇತ್ತೋ ಏನೋ. ಎಲ್ಲವನ್ನೂ ಮರೆಯಿಸ ಬಲ್ಲ ಕಾಲ ಭೀಂ ಮಾವನ ನೆನಪನ್ನು ನನ್ನಲ್ಲಿ ಇನ್ನೂ ಹಸಿರಾಗಿ ಇಟ್ಟದೆಯಲ್ಲ !!

ಆ ಕಾಲಕ್ಕೊಂದು ದೀರ್ಘದಂಡ ನಮಸ್ಕಾರ.

# ಮರೆಯಲಾರದ ನೆನಪು

**ಪಣಂಬೂರು ಪರಮೇಶ್ವರ ಐತಾಳ**
**ಜ್ಯೋತಿಷಿ, ಕಲಾವಿದ**
'ಭದ್ರ ನಾರಾಯಣ' ಕಾಪಿಕಾಡು
ಬಿಜೈ, ಮಂಗಳೂರು – 575 004

ನನ್ನ ಮತ್ತು ದಿವಾಣ ಭೀಮ ಭಟ್ಟರ ಪ್ರಪ್ರಥಮ ಭೇಟಿ ಕೂಡ್ಲು ಮೇಳದಲ್ಲಿ. ಕೂಡ್ಲು ಮೇಳವನ್ನು ಕುಕ್ಕಾಜೆ ದಿ। ಸಂಕಣ್ಣಯ್ಯ ನವರು ನಡೆಸುತ್ತಿದ್ದ ಕಾಲ ಅದು. ಸಂಕಣ್ಣಯ್ಯನವರ ಒತ್ತಾಯದ ಮೇಲೆ ನಾನು ಮತ್ತು ಕಟೀಲು ರಮೇಶ ಕಾಮತರು ಸದಾ ಮೇಳದಲ್ಲಿ ಇರುತ್ತಿದ್ದೆವು. ಮೇಳದಲ್ಲಿರುವ ಘಟಾನುಘಟಿ ಕಲಾವಿದರು ಬೇರೆ ಮೇಳಕ್ಕೆ ಹೋದಾಗ ಅಗರಿ ಭಾಗವತರ ನೇತೃತ್ವದಲ್ಲಿ ಸಾಮಾನ್ಯ ಕಲಾವಿದರ ಒಕ್ಕೂಟದಲ್ಲಿ ಅಸಾಮಾನ್ಯ ರೀತಿಯ ಪ್ರದರ್ಶನ ನೀಡುತ್ತಾ ಜಯಭೇರಿ ಬಾರಿಸಿದ ಕಾಲ ಅದು. ದಿವಾಣ ಭೀಮ ಭಟ್ಟರು ಚೆಂಡೆ ವಾದಕರಾಗಿ ಕೂಡ್ಲು ಮೇಳ ಸೇರಿದ್ದರು. ಅಗರಿ ಭಾಗವತರು ದಿವಾಣ ಭೀಮಭಟ್ಟರು, ಕುದ್ರೆಕೋಡ್ಲು ಸಣ್ಣರಾಮ ಭಟ್ಟರು ಕೂಡಿದ ಹಿಮ್ಮೇಳ ಒಂದು ಮರೆಯಲಾರದ ನೆನಪಾಗಿ ಉಳಿದಿದೆ. ಏನು ಹೊಂದಾಣಿಕೆ, ಏನು ಸೊಬಗು. ಕೇವಲ ಹಿಮ್ಮೇಳ ವನ್ನು ಆಸ್ವಾದಿಸುವುದಕ್ಕಾಗಿಯೇ ಕಲಾಭಿಮಾನಿಗಳು ಬಂದು ಸೇರುತ್ತಿದ್ದರು. ಈ ಸಂದರ್ಭ ಪೊಳಲಿ ಶಂಕರ ನಾರಾಯಣ ಶಾಸ್ತ್ರಿಗಳು ನೀಡಿದ ಲಲಿತೋಪಾಖ್ಯಾನದ ಮೂಲ ಕಥೆಯನ್ನು ಆಧರಿಸಿ ಅಗರಿ ಭಾಗವತರು ತನ್ನ ರಚನಾ ಕೌಶಲವನ್ನು ಕವಿತಾ ಸಾಮರ್ಥ್ಯವನ್ನು ಪೂರ್ತಿಯಾಗಿ ಧಾರೆಯೆರೆದು ಶ್ರೀ ದೇವಿ ಲಲಿತೋಪಾಖ್ಯಾನ ಎಂಬ ಪ್ರಸಂಗವನ್ನು ರಚಿಸಿದರು. ಇದು ಕೆಲವು ಶತಮಾನೋತ್ಸವವನ್ನು ಆಚರಿಸಿದೆ. ಈ ಸಂದರ್ಭ ದಿವಾಣ ಭೀಮ ಭಟ್ಟರ ಚೆಂಡೆಯ ಕೌಶಲ ಪ್ರದರ್ಶನದ ಯಶಸ್ಸಿಗೆ ಹೆಚ್ಚಿನ ನೆರವು ನೀಡಿತು. ವೀರರಸ ಪ್ರಧಾನವಾದ ಈ ಪ್ರಸಂಗದಲ್ಲಿ ದಿವಾಣರು ವಿಶ್ರಾಂತಿ ಬಯಸದೆ, ವಿಶ್ರಾಂತಿ ಇಲ್ಲದೆ ಹುಮ್ಮಸ್ಸಿನಿಂದ

ಚೆಂಡೆ ವಾದನದಲ್ಲಿ ಮೆರೆದದ್ದನ್ನು ನಾವು ಈಗ ಸ್ಮರಿಸಲಷ್ಟೇ ಸಾಧ್ಯ. ಕೂಡ್ಲು ಮೇಳದಲ್ಲಿ ದಿವಾಣ ಭೀಮ ಭಟ್ಟರಿಗೂ ನನಗೂ ನಿಕಟ ಸ್ನೇಹವುಂಟಾಯಿತು. ಸ್ನಾನ, ಊಟ, ನಿದ್ದೆ, ಮಾತುಕತೆ, ವಿನೋದ ಎಲ್ಲ ಜೊತೆಜೊತೆಯಾಗಿ ನಡೆಯಿತು. ಅವರ ಹಾಸ್ಯ ಪ್ರವೃತ್ತಿ, ಕಸುಬಿನ ಮೇಲಿರುವ ನಿಷ್ಠೆ, ಪ್ರಸಂಗ ಮಾಹಿತಿ, ತಾಳಜ್ಞಾನ, ರಂಗಸ್ಥಳದ ಪರಿಜ್ಞಾನ ಇವೆಲ್ಲವನ್ನು ಕಂಡು ಬೆರಗಾಗಿದ್ದೇನೆ.

ಮುಂದೆ ಅವರು ಮೇಳ ಬಿಟ್ಟು ವಿಶ್ರಾಂತಿ ಜೀವನಕ್ಕೆ ಕಾಲಿಟ್ಟಾಗಲೂ ನಮ್ಮ ಬಾಂಧವ್ಯ ಸ್ನೇಹ ಹಾಗೇ ಉಳಿಯಿತು. ಇನ್ನೂ ಹೆಚ್ಚಾಯಿತು. ನಂದನೇಶ್ವರ ಯಕ್ಷಗಾನ ಮಿತ್ರ ಮಂಡಳಿಯ ಪ್ರದರ್ಶನಕ್ಕೆ ಅಗರಿಯವರ ಜೊತೆ ದಿವಾಣ ಭೀಮ ಭಟ್ಟರನ್ನೂ ಆಹ್ವಾನಿಸುತ್ತಿದ್ದೆವು. ಹವ್ಯಾಸಿಗಳ ತಂಡವಾದರೂ ಅಗರಿ ಮತ್ತು ದಿವಾಣರು ನಮ್ಮನ್ನೆಲ್ಲಾ ಬಹಳ ಪ್ರೋತ್ಸಾಹಿಸಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದರು. ನನ್ನ ಭಾಗವತಿಕೆಗೂ ದಿವಾಣ ಭೀಮ ಭಟ್ಟರು ಚೆಂಡೆ ಮದ್ದಲೆಯಲ್ಲಿ ಸಹಕರಿಸಿ ಹಲವಾರು ಅನುಭವಗಳನ್ನು ನೀಡಿ ರಂಗ ಮಾಹಿತಿಯನ್ನು ತಿಳಿಸಿ ನನ್ನ ಪದ್ಯವನ್ನು ಮೇಲೆತ್ತುವುದಕ್ಕೆ ಪ್ರಯತ್ನಿಸಿರುತ್ತಾರೆ. ಪೊಳಲಿ ಶಾಸ್ತ್ರಿ ಸಮಿತಿಯ ಎಲ್ಲ ಕಾರ್ಯಕ್ರಮಗಳಿಗೆ ದಿವಾಣ ಭೀಮ ಭಟ್ಟರು ಬಂದೇ ಬರುತ್ತಿದ್ದರು. ಪುರಭವನದಲ್ಲಿ ಶ್ರೀಧರ ಐತಾಳರ ನಿರ್ದೇಶನದಲ್ಲಿ ಜರಗಿದ ಮಹಿಳೆಯರ ಯಕ್ಷಗಾನ ಪ್ರದರ್ಶನಕ್ಕೂ ದಿವಾಣ ಭೀಮ ಭಟ್ಟರೇ ಚೆಂಡೆಯಲ್ಲಿ ಸಹಕರಿಸಿದ್ದರು. ತಿದ್ದಿ ತೀಡಿ ಒಂದಿಷ್ಟು ಬೇಸರಿಸದೆ ಅತ್ಯುತ್ಸಾಹದಿಂದ ಚೆಂಡೆ ಬಾರಿಸಿದ್ದು ಅವರಲ್ಲಿರುವ ದೊಡ್ಡ ಗುಣಕ್ಕೆ ಸಾಕ್ಷಿಯಾಗಿದೆ.

ದಿವಾಣ ಭೀಮ ಭಟ್ಟರನ್ನು ನಾವು ಕುಟುಂಬದ ಆಪ್ತ ಬಂಧುವೆಂದೇ ಭಾವಿಸಿರುತ್ತೇವೆ. ಅವರೂ ಅಷ್ಟೆ. ನಮ್ಮನ್ನು ಸಹೋದರ ಪ್ರೀತಿಯಲ್ಲಿ ಕಂಡವರು. ಮಂಗಳೂರಿಗೆ ಬಂದರೆ ನಮ್ಮ ಮನೆಗೆ ಬಾರದೆ ಹೋದವರಲ್ಲ. ನಮ್ಮ ಯಕ್ಷಗಾನ ಕಾರ್ಯಕ್ರಮವಿದ್ದರೆ, ಅಥವಾ ಇತರ ಕಡೆ ಇದ್ದರೆ ಎರಡು ಮೂರು ದಿನ ನಮ್ಮ ಮನೆಯಲ್ಲಿ ತಂಗಿದ್ದೂ ಇದೆ. ಅವರು ಬಂದರೆಂದರೆ ಮನೆಯವರೆಲ್ಲರಿಗೂ ಬಹಳ ಸಂತೋಷ ಸಂಭ್ರಮ. ಅವರನ್ನು ಸತ್ಕರಿಸುವುದರಲ್ಲಿ ಎಲ್ಲಿಲ್ಲದ ಉಮೇದು. ಭೀಮ ಭಟ್ಟರು ಮನೆಗೆ ಬಂದರೆಂದರೆ ಮಲಗುವಾಗ ಗಂಟೆ ಹನ್ನೆರಡಾಗದೆ ಇರುವುದೇ ಇಲ್ಲ. ನಮ್ಮ ತೀರ್ಥರೂಪರಾದ ಬಾಬು ಯಾನೆ ನಾರಾಯಣ ಐತಾಳರು ಬಿಡುವಿಲ್ಲದ ಜ್ಯೋತಿಷ್ಯದ ಕೆಲಸದಲ್ಲಿ ತಲ್ಲೀನರಾಗಿದ್ದರೂ ಭಟ್ಟರೇ ಬನ್ನಿ, ಬನ್ನಿ ಎಂದು ಅತ್ಯಾದರದಿಂದ ಸ್ವಾಗತಿಸುತ್ತಿದ್ದರು.

ಅಗರಿ, ಮಂದಾರ ಕೇಶವ ಭಟ್ಟ, ದಿವಾಣ ಭೀಮ ಭಟ್ಟರು ನಮ್ಮ ಮನೆಯಲ್ಲಿ ಒಟ್ಟಾದರೆ ಒಂದು ಯಕ್ಷಗಾನ ಗೋಷ್ಠಿ ನಡೆಯಿತೋ ಎಂಬಷ್ಟರ ಮಟ್ಟಿಗೆ ಅನುಭವಗಳ ವಿನಿಮಯ ನಡೆಯುತ್ತಿತ್ತು. ಮಂದಾರ ಕೇಶವ ಭಟ್ಟರಿಗೂ, ಭೀಮಭಟ್ಟರಿಗೂ ನಿಕಟ ಸ್ನೇಹವಿತ್ತು. ತಾಳದ ಬಗ್ಗೆ ಬಗೆಬಗೆಯಾಗಿ ಚರ್ಚಿಸುತ್ತಿದ್ದರು. ಅದನ್ನು ಕೇಳುವುದೇ ಒಂದು ಸಂಭ್ರಮವಾಗಿತ್ತು. ವೇಷ, ಹಿಮ್ಮೇಳ ಎರಡರಲ್ಲೂ ಪಳಗಿದ್ದ ನಮ್ಮ ಅಣ್ಣ ದಿ। ವೆಂಕಟರಾಯ ಐತಾಳರು, ಅಗರಿಯವರು, ದಿವಾಣರು ಸೇರಿದಾಗ ಆಗುತ್ತಿದ್ದ ಚರ್ಚೆ, ಅನುಭವಗಳ ವಿನಿಮಯ ಅದ್ಭುತವಾಗಿತ್ತು. ನಾವು ಭೀಮ ಭಟ್ಟರನ್ನು ಭೀಮಣ್ಣಯೆಂದೇ ಕರೆಯುತ್ತಿದ್ದೆವು. ನಮ್ಮ ಕಾರ್ಯಕ್ರಮಗಳಿಗೆ ಕೊಡುವ ಸಂಭಾವನೆ ಬಗ್ಗೆ ಗಮನಹರಿಸಿದ್ದೇ

ಇಲ್ಲ. 'ಐತಾಳ ಬಂಧುಗಳು ಬೇಕು' ಎಂಬ ಪ್ರೀತಿ ಉದಾತ್ತ ಗುಣ ಅವರಲ್ಲಿತ್ತು. ನಂದನೇಶ್ವರ ಯಕ್ಷಗಾನ ಮಿತ್ರ ಮಂಡಳಿಯ ವತಿಯಿಂದ ದಿವಾಣ ಭೀಮ ಭಟ್ಟರನ್ನು ಸನ್ಮಾನಿಸಿ ಕೃತಾರ್ಥರಾಗಿದ್ದೇವೆ.

ಸುರತ್ಕಲ್‌ನಲ್ಲಿ ವಾರಕ್ಕೆ ಎರಡು ದಿನ ಮದ್ದಲೆ ಕ್ಲಾಸು ನಡೆಸುತ್ತಿದ್ದರು. ವಿದ್ವಾಂಸರೆಲ್ಲರಿಗೂ ಹೇಳಿಕೊಡುವ ಪರಿಜ್ಞಾನವಿರುವುದಿಲ್ಲ. ಆದರೆ ದಿವಾಣರ ಪಾಠವೆಂದರೆ ಅಷ್ಟು ನಿಖರವಾದ್ದು. ಬಾಯಿ ತಾಳ ಹಾಕಿ ಕಲಿಸುವ ವಿಧಾನ ಅನುಕರಣೀಯ. ಒಂದಿಷ್ಟು ಆಲಸ್ಯವಿಲ್ಲ. ಅರ್ಥವಾಗದವರಿಗೆ ಹಲವು ಸಲ ಹೇಳಿಕೊಡುತ್ತಿದ್ದರು. ಸಿಟ್ಟಿಲ್ಲ. ಮುಗುಳ್ನಗೆಯಲ್ಲೇ ಅವರ ಪಾಠ ನಡೆಯುತ್ತಿತ್ತು. ನನ್ನ ಮಗನಿಗೆ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಮದ್ದೆ ಪಾಠ ಕಲಿಸುತ್ತಿದ್ದರು. ಅವರ ಉತ್ಸಾಹಕ್ಕೆ ಉದಾಹರಣೆಯೇ ಇಲ್ಲ.

ಮೃದಂಗ ವಿದ್ವಾಂಸ ಕೃಷ್ಣನ್ ಎಂಬವರಲ್ಲಿ ಹೋಗಿ ತಾಳದ ಬಗ್ಗೆ ಬಹಳ ಚರ್ಚಿಸುತ್ತಿದ್ದರು. ಅನುಭವಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ರಾತ್ರಿ ಬಹಳ ಹೊತ್ತಿನ ವರೆಗೆ ಅಲ್ಲಿ ಉಂಟಾದ ಸಂಶಯವನ್ನು ನಿವಾರಿಸಿಕೊಳ್ಳುತ್ತಿದ್ದರು. ಕಲಿತು ಪೂರ್ತಿಯಾದವನಿಲ್ಲ ಎಂಬುದು ಅವರ ಸಿದ್ಧಾಂತವಾಗಿತ್ತು. ಮಂಗಳೂರು ಆಕಾಶವಾಣಿಯಲ್ಲಿ ಅಗರಿಯವರ ಹಾಡುಗಳನ್ನು ದಾಖಲಿಸುವ ಸಂದರ್ಭ ಅಗರಿಯವರು ಸ್ವಲ್ಪ ಉದಾಸೀನ ಮಾಡಿದಾಗ ಅವರನ್ನು ಬಿಡದೆ ಪ್ರೋತ್ಸಾಹಿಸಿ ಆಕಾಶವಾಣಿ ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಲು ಸಹಕರಿಸಿದ್ದು ನಾನು ಇಂದೂ ಜ್ಞಾಪಕದಲ್ಲಿಟ್ಟು ಕೊಂಡಿದ್ದೇನೆ.

ಒಮ್ಮೆ ನೆಡ್ಲೆ ನರಸಿಂಹ ಭಟ್ಟರು ಮತ್ತು ಇವರ ಚೆಂಡೆ ವಾದನದ ಜುಗಲಬಂದಿ ಪ್ರದರ್ಶನ ಪುರಭವನದಲ್ಲಿ ಜರಗಿತ್ತು. ಪ್ರೇಕ್ಷಕರು ಪ್ರಚಂಡ ಕರತಾಡನದ ಮೂಲಕ ಈ ಕಾರ್ಯಕ್ರಮವನ್ನು ಪ್ರೋತ್ಸಾಹಿಸಿದ್ದರು. ಈ ಪ್ರದರ್ಶನಕ್ಕಾಗಿ ದಿವಾಣರು ಅಭ್ಯಾಸ ನಮ್ಮ ಮನೆಯಲ್ಲೇ ಮಾಡಿದ್ದರು. ಎಲ್ಲಿಯವರೆಗೆ ಎಂದರೆ ರಾತ್ರಿ ಎಚ್ಚರವಾದಾಗ ಎದ್ದು ವಿವಿಧ ನಡೆಗಳ ಅಭ್ಯಾಸ ನಡೆಸಿದ್ದರು.

ಭೀಮ ಭಟ್ಟರ ವಿಷಮ ನಡೆಗಳಿಗೆ ಸರಿಸಾಟಿಯಾಗುವವರು ಯಾರೂ ಇಲ್ಲ. ನರಸಿಂಹ ಭಟ್ಟರೂ ಭೀಮ ಭಟ್ಟರು ಹತ್ತಿರದ ಸಂಬಂಧಿಗಳು. ಆದರೆ ರಂಗದಲ್ಲಿ ಇದನ್ನು ಇಬ್ಬರೂ ತೋರಿಸಿದವರಲ್ಲ. ಸ್ಪರ್ಧಾತ್ಮಕವಾದ ಉತ್ಕೃಷ್ಟವಾದ ಪ್ರದರ್ಶನ ನೀಡಿದ್ದು ಕಲಾಭಿಮಾನಿಗಳ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ.



# ನಮ್ಮ ತಂದೆಯವರು ಮತ್ತು ದಿವಾಣದವರು

**ಮಂದಾರ ಶಾರದಾಮಣಿ**
'ಮಂದಾರ'
ಕುಡುಪು, ಮಂಗಳೂರು

ಯಕ್ಷಗಾನ ಕ್ಷೇತ್ರದ ಸಮಾನ ಪ್ರತಿಭೆಗಳ ಸಂಗಮದಂತಿರುವ ಚೆಂಡೆವಾದಕ ದಿವಾಣ ಭೀಮ ಭಟ್ಟರು ಹಾಗೂ ಭಾಗವತ ಮತ್ತು ಅರ್ಥದಾರಿಗಳಾದ ಮಂದಾರ ಕೇಶವ ಭಟ್ಟರು. ಇವರಿಬ್ಬರು ಪರಸ್ಪರ ಭೇಟಿಯಾದಾಗ ಅವರ ಸಂವಾದದ ಸ್ವಾರಸ್ಯಗಳೇ ನಮ್ಮ ನೆನಪಿನಲ್ಲಿ ಉಳಿಯುವಂತಹವುಗಳು. ಅವುಗಳಲ್ಲಿ ಕೆಲವು ಘಟನೆಗಳು ಚಿರಸ್ಮರಣೀಯವಾದವುಗಳು. ನನ್ನ ಸೀಮಿತ ತಿಳುವಳಿಕೆಗೆ ಬಂದವುಗಳನ್ನು ಇಲ್ಲಿ ದಾಖಲಿಸಿದ್ದೇನೆ.

ನಮ್ಮ ತಂದೆಯವರು ನಮ್ಮ ಮನೆಯಲ್ಲಿ ಆಗಾಗ ದಿವಾಣ ಭೀಮ ಭಟ್ಟರ ಹೆಸರನ್ನು ಹೇಳುತ್ತಿದ್ದರು. ನಾವಾರೂ ಅವರನ್ನು ನೋಡಿದವರಲ್ಲ. ಒಮ್ಮೆ ಹೊಸಪೇಟೆಯಲ್ಲಿ ತಾಳಮದ್ದಳೆ ಕಾರ್ಯಕ್ರಮಕ್ಕೆ ಹೋಗುವ ಸಂದರ್ಭ. ಎಲ್ಲರೂ ಜೊತೆಯಾಗಿ ಹೊರಟು ಕಾರಲ್ಲಿ ನಮ್ಮಲ್ಲಿಗೆ ಬೆಳಗ್ಗೆ ಬಂದರು. ನಮ್ಮಲ್ಲಿಂದ ತಂದೆಯವರನ್ನು ಕರೆದೊಯ್ಯಲು ಬಂದಿದ್ದರು. ಮನೆಗೆ ಬಂದವರಿಗೆ ಚಹಾದ ಉಪಚಾರವೂ ನಡೆಯಿತು. ಎಲ್ಲರೂ ಚಹ ಸೇವಿಸಿ ಅಂಗಳ ಇಳಿದು ಕಾರಿನತ್ತ ಹೊರಟರು. ಆಗ ದಿವಾಣ ಭೀಮ ಭಟ್ಟರು ತಂದೆಯವರ ಜೊತೆ ಸ್ವಲ್ಪ ಹಿಂದೆ ಉಳಿದರು. ಆಗ ಅಮ್ಮನನ್ನು ಕರೆದು ನಮ್ಮಪ್ಪ ಹೌದೆನೇ ಇವರೇ ದಿವಾಣ ಭೀಮ ಭಟ್ಟರು ಎಂದು ಪರಿಚಯಿಸಿದರು. ಆಗ ನಮ್ಮಮ್ಮ 'ಇವರು ಭೀಮನ ಹಾಗಿಲ್ಲ' ಎಂದರು. ಆಗ ನಮ್ಮ ಅಪ್ಪಯ್ಯ ದೇಹದಲ್ಲಿ (ಆಕಾರ) ಭೀಮ ಅಲ್ಲ. ಆದರೆ ಚೆಂಡೆಯಲ್ಲಿ ಭೀಮನೇ, ಎಂಬುದಾಗಿ ಹೇಳಿದ್ರು. ಅಂದಿನಿಂದ ನನಗೂ ನನ್ನ ಅಮ್ಮನಿಗೂ ಅವರ ಪರಿಚಯವಾದದ್ದು. ಮುಂದೆ ನಮಗೂ ಆತ್ಮೀಯರಾದರು.

ದಿವಾಣರನ್ನು 'ಭೀಮಣ್ಣ' ಎಂದೇ ಅಪ್ಪಯ್ಯ ಕರೆಯುತ್ತಿದ್ದರು.

ಕಾರ್ಯಕ್ರಮಕ್ಕೆ ಹೊರಡುವ ತರಾತುರಿಯಲ್ಲಿಯೂ ತಂದೆಯವರು "ಭೀಮಣ್ಣ ಹದಾಕೆ ಚೆಂಡೆ ಬಡಿಯಕ್ಕು ಇಲ್ಲದ್ದರೆ ಆನು ಜಾಗಂಟೆ, ಕೋಲು ಕೆಳಮಡುಗಿ ಪುಡ್ಯೋ" ಎಂದಾಗ ಹಲ್ಲಿಲ್ಲದ ಬಾಯಗಲಿಸಿ ಜೋರಾಗಿ ನಕ್ಕು "ಹಾಂಗೆತದು ಆವುತ್ತಿಲ್ಲೆ, ಈಗ ಹೋಪ" ಎಂದರು. ಮುಂದೆ ನಮ್ಮಲ್ಲಿ ಆಗಾಗ (ಮಂಗಳೂರಿನಲ್ಲಿ ಆಟ, ಕೂಟ ಇದ್ದರೆ), ತಿಳಿದಿದ್ದಲ್ಲಿ ನಮ್ಮ ತಂದೆಯವರು 'ಹೌದೆನೇ ಭೀಮಣ್ಣ ರಾತ್ರೆ ಬರ್ತಾರೆ. ಬೆಳಗ್ಗೆಗೆ ತಿಂಡಿ ಏನು ಮಾಡ್ತಿ. ಅವ್ರಿಗೆ ಹಲ್ಲಿಲ್ಲ' ಎಂದು ಅಮ್ಮನಿಗೆ ನೆನಪಿಸುತ್ತಿದ್ದರು.

ಅವರು ನಮ್ಮಲ್ಲಿಗೆ ಬರಲು ಆರಂಭಿಸಿದಾಗ ನಮ್ಮಲ್ಲಿ ನಾನೇ ಇದ್ದವಳು. ನಾನು ಅವರನ್ನು ಅಜ್ಜ ಎಂದೇ ಕರೆಯುತ್ತಿದ್ದೆ. ನನಗೂ ಅವರು ಅಷ್ಟು ಪ್ರೀತಿಯವರಾಗಿದ್ದರು. 'ಅಜ್ಜ ಬಂದ್ರು' ಅಂದರೆ ಅದು ದಿವಾಣ ಭೀಮ ಭಟ್ಟರೆನ್ನುವುದು ಖಚಿತ.

ಮಳೆಗಾಲದಲ್ಲಿ ಕಟೀಲು ದೇವಳದಲ್ಲಿ ಯಕ್ಷಗಾನದ ಹಾಡುಗಾರಿಕೆಯ ತರಬೇತಿ ಕಮ್ಮಟಗಳು 15 ದಿನಗಳ ವರೆಗೆ, ಕೆಲವೊಮ್ಮೆ ಒಂದು ತಿಂಗಳವರೆಗೆ ಇರುತ್ತಿತ್ತು. ಭಾಗವತಿಗೆ ಕಲಿಸಲು ತಂದೆಯವರು ಹೋಗುತ್ತಿದ್ದರು. ಕೆಲವೊಮ್ಮೆ ಜೊತೆಗೆ ದಿವಾಣರೂ ಇರುತ್ತಿದ್ದರು.

ಯಕ್ಷಗಾನದ ಹಾಡುಗಳನ್ನು ನಮ್ಮ ತಂದೆಯವರು ಯಕ್ಷಗಾನದ ಶೈಲಿಯಲ್ಲಿಯೂ, ಶಾಸ್ತ್ರೀಯ ಸಂಗೀತದ ಶೈಲಿಯಲ್ಲಿಯೂ ಹಾಡುತ್ತಿದ್ದರು. ದಿವಾಣರು ನಮ್ಮಲ್ಲಿದ್ರೆ ಹಾಡಿಗೆ ಮದ್ದಳೆ ಬಾರಿಸುತ್ತಿದ್ದರು. ನಮ್ಮದು ಹಳ್ಳಿಯ ಮನೆಯಾದುದರಿಂದ ಆಚೀಚೆ ಮನೆಯವರಿಗೆ ತೊಂದರೆಯಾಗಬಹುದೆಂಬ ಆತಂಕವಿರಲಿಲ್ಲ. ರಾತ್ರಿ ಹೊತ್ತು ಕುಳಿತು ಭಾಗವತರ ಹಾಡುಗಾರಿಕೆಯ ಲೋಪದೋಷ, ಕುಣಿತದ ಬಗ್ಗೆ ಮಾತುಗಾರಿಕೆಯ ಬಗ್ಗೆ ಏನೆಲ್ಲ ಪ್ರಮಾದಗಳು ನಡೆಯುತ್ತವೆ, ಕಾರ್ಯಕ್ರಮ ಹೇಗಿತ್ತು ಇತ್ಯಾದಿ ಇತ್ಯಾದಿ ಚರ್ಚೆಗಳು ನಡೆಯುತ್ತಿತ್ತು.

ದಿವಾಣ ಭೀಮ ಭಟ್ಟರ ತಿಳಿ ಹಾಸ್ಯಗಳನ್ನು ಆಗೊಮ್ಮೆ ಈಗೊಮ್ಮೆ ಆಸ್ವಾದಿಸುವ ಭಾಗ್ಯ ನಮಗೂ ಲಭಿಸುತ್ತಿತ್ತು. ಒಮ್ಮೆ ಬೆಳಗ್ಗಿನ ಉಪಾಹಾರದ ವೇಳೆ ಮಾತುಕತೆಯ ಮಧ್ಯೆ ದಿವಾಣರು ಹೀಗೆನ್ನುತ್ತಾರೆ. ನಾನು ಚೆಂಡೆ ಬಡಿಯುವುದರಲ್ಲಿ ಪ್ರಸಿದ್ಧನಾದರೂ, ಅರ್ಥಗಾರಿಕೆಯಲ್ಲಿ ನನ್ನ ಹೆಂಡತಿಯು ಏನೂ ಕಡಿಮೆ ಇಲ್ಲ. ಉತ್ತರಕ್ಕೆ ಮಾರುತ್ತರ ಅವಳ ಬತ್ತಳಿಕೆಯಲ್ಲಿಯೇ ಇರ್‍ತದೆ ಎಂದು ಉದಾಹರಣೆಯಾಗಿ ಹೀಗೆಂದ್ರು. ಒಮ್ಮೆ ಅವರು ಪತ್ನಿಯನ್ನು ರೇಗಿಸಲು 'ಹೆಂಡತೀ ಪ್ರಾಣ ಹಿಂಡುತಿ' ಎಂದು ಇವರು ಹೇಳಿದ ಕೂಡಲೇ ಇವರ ಪತ್ನಿ ಒಂದು ಕ್ಷಣವೂ ಯೋಚಿಸದೆ 'ಗಂಡ ಬರೇ ದಂಡ' ಎಂದರಂತೆ. ಹೀಗೆ ಹೇಳಿ ನಗುತ್ತ, ಹೇಗೆ ಕೇಶವ ಭಟ್ರೆ ನನ್ನ ಹೆಂಡ್ತಿಯ ಯಕ್ಷಗಾನ ಎಂದು ಎಲ್ಲರೂ ನಗುವಂತೆ ಅವರ ಕೌಟುಂಬಿಕ ವಿಷಯಗಳನ್ನು ಸ್ವಾರಸ್ಯಕರವಾಗಿ ವರ್ಣಿಸುತ್ತಿದ್ದರು.

ಅವರ ಕಾಲದ ಯಕ್ಷಗಾನ ಹಾಡುಗಾರಿಕೆ, ಅರ್ಥಗಾರಿಕೆ, ವೇಷ, ಕುಣಿತ ನಂತರದ ಪೀಳಿಗೆಯ ಯಕ್ಷಗಾನದಲ್ಲಿ ವ್ಯತ್ಯಾಸಗಳು. ಶ್ರಮಪಡದೆ ಭಾಗವತರು, ಅರ್ಥಧಾರಿಗಳು ಸುಲಭದಲ್ಲಿ ಆಗಬಹುದೆಂಬ ಇಂದಿನ ನಂಬಿಕೆಯ ಬಗ್ಗೆ ಇಬ್ಬರೂ ತುಂಬಾ ವಿಷಾದ ವ್ಯಕ್ತಪಡಿಸುತ್ತಿದ್ದರು. ಇಂದಿನವರಿಗೆ ಅನುಭವ ಸಾಲದು ಎಂಬುದಾಗಿ ಬೇಸರಿಸುತ್ತಿದ್ದರು. ದಿನಪೂರ್ತಿ ಯಕ್ಷಗಾನದ ವಿಷಯವಾಗಿಯೇ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಯಕ್ಷಗಾನದಲ್ಲಿ ಇಂದಿಗೆ ಕೆಲವು ಮಾರ್ಪಾಡುಗಳು ಬೇಕೇ? ಬೇಡವೇ? ಎಂಬಲ್ಲಿ

ಚರ್ಚೆಗಳನ್ನು ನಡೆಸುತ್ತಿದ್ದರು. ಈ ಕಾಲಕ್ಕೆ ಕೆಲವು ವ್ಯತ್ಯಾಸಗಳನ್ನು ಮಾಡಬಹುದಾದರೂ ಅದರ ಮೂಲಕ್ಕೆ ಚ್ಯುತಿ ಬರಬಾರದು. ಬಣ್ಣಗಾರಿಕೆ, ವೇಷಭೂಷಣಗಳನ್ನು ಆಧುನೀಕರಿಸಿದರೆ ಅದರ ಚಂದ ಉಳಿಯುವುದಿಲ್ಲ. ಬಣ್ಣ ಹಚ್ಚುವ ಕಲೆಯಲ್ಲಿಯೇ (ಅಂದರೆ ವೇಷ ನೋಡಿಯೇ) ಆ ವೇಷ ಯಾವುದು ಎಂದು ದೂರದಲ್ಲಿ ಇದ್ರೂ ಗುರುತಿಸುವಂತಿರಬೇಕು. ಮಾತುಗಾರಿಕೆಯೂ ಆಭಾಸವಾಗಬಾರದು. ಯಾವ ರೀತಿಯ ಮಾರ್ಪಾಡನ್ನು ಎಷ್ಟು ಮಾಡಬಹುದು. ಮಾಡಿದ್ರೆ ಹೇಗಾದೀತು? ಏನಾದೀತು? ಎಂಬ ಬಗ್ಗೆ ಚಿಂತನೆ ಮಾಡುತ್ತಿದ್ದರು.

ನಮ್ಮ ತಂದೆಯವರು ಮಂದಾರ ರಾಮಾಯಣವನ್ನು ಬರೆಯುತ್ತಿದ್ದ ಕಾಲ. ಅವರು ಬರೆದ ಭಾಗಗಳನ್ನು ದಿವಾಣರು ಬಂದಾಗ ವಾಚಿಸುತ್ತಿದ್ದರು. ಕೇಳುತ್ತಿದ್ದ ದಿವಾಣರು ಅದರ ಅಂದ ಚಂದಕ್ಕೆ ತಲೆಯಾಡಿಸಿ, ಜಾಣ್ಮೆಯನ್ನು ಪ್ರಶಂಸಿಸಿ ತಮಗೆ ತೋರಿದ ಅಭಿಪ್ರಾಯ ಅನಿಸಿಕೆಗಳನ್ನು ಹೇಳುತ್ತಿದ್ದರು. ಮಂದಾರ ರಾಮಾಯಣದ ಬಗೆಗೆ ವಿವರಣೆ ಗಳನ್ನು ಕೇಳಿ, ಆ ರೀತಿಯ ಕೆಲವು ಬದಲಾವಣೆಗಳನ್ನು ಮಾಡಲು ಕಾರಣವೇನೆಂದು ತಿಳಿದು ಸಂತೋಷಪಡುತ್ತಿದ್ದರು. ಊರಿನ ರೀತಿ, ನೀತಿ, ರಿವಾಜು, ಪದಪ್ರಯೋಗ ಇತ್ಯಾದಿ ಗಳಿಗೆ ಅವರ ಊರಿನಲ್ಲಿ (ದಿವಾಣ ಪರಿಸರ) ಹೇಗಿರುತ್ತಿತ್ತು ಎಂದು ಹೇಳಿ ಅಗತ್ಯವಿದ್ದಲ್ಲಿ ಇದನ್ನು ಸೇರಿಸಿಕೊಳ್ಳಿ, ನನಗೆ ಗೊತ್ತಿದ್ದದ್ದನ್ನು ಹೇಳಿದೆ ಕೇಶವ ಭಟ್ರೆ ಎನ್ನುತ್ತಿದ್ದರು.

ನಮ್ಮಲ್ಲಿಗೆ 'ಅಜ್ಜ' ದಿವಾಣ ಭೀಮ ಭಟ್ಟರು ಬಂದಾಗ ಉಂಟಾಗುವ ಆನಂದ ಅಂತಿಂಥದ್ದಲ್ಲ. ನಾವು ಮನೆಯೊಳಗೆ ಏನಾದ್ರೂ ಕೆಲಸ ಮಾಡುವಾಗ ಕೇಳಿಸುವ ಅವರ ಮಾತುಕತೆಗಳು ಅಥವಾ ನಮಗೆ ಪುರುಸೊತ್ತಿದ್ರೆ ಒಳಗಿನ ಕೋಣೆಯಲ್ಲಿ ಕುಳಿತು ಅವರು ಮಾತನಾಡುವುದನ್ನು ಆಲಿಸುತ್ತ ನಮ್ಮಷ್ಟಕ್ಕೆ ಸಂತೋಷ ಪಡುತ್ತಿದ್ದೆವು.

ಓತಮಿತವಾದ ಅವರ ಮಾತುಗಳು ಸರಳತೆ, ನಮ್ಮ ತಂದೆಯವರೊಂದಿಗೆ ಅವರ ಒಡನಾಟ, ನಮಗೆ ಅವರು ಬಂದಾಗ ಮನೆಯವರಂತೆಯೇ ಹೊರತು ಅನ್ಯರಂತೆ ಕಾಣುತ್ತಿರಲಿಲ್ಲ. ನಮ್ಮ ಚಾವಡಿಯಲ್ಲಿ ರಾತ್ರಿ ಹಗಲೆನ್ನದೆ ಮಾತಾಡಿಕೊಂಡಿದ್ದ ದೃಶ್ಯ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಆಗ, ಅವರಿಬ್ಬರಿಗೂ ಆತ್ಮೀಯರಾದ ಎಂ. ಪ್ರಭಾಕರ ಜೋಶಿ ಅವರು ಒಮ್ಮೊಮ್ಮೆ ಜತೆಗಿರುತ್ತಿದ್ದರು.

ಹೀಗೆ ಅಜ್ಜನವರು ಬಂದಾಗಲೆಲ್ಲ ಸಾಹಿತ್ಯ, ಯಕ್ಷಗಾನ ಸಂಗೀತ ಇತ್ಯಾದಿಗಳ ವಿಚಾರ-ವಿನಿಮಯ ನಡೆಯುತ್ತಿದ್ದುದರಿಂದ ನನಗೂ ಅವುಗಳ ಪೂರ್ಣ ಪಾಠ ಲಭಿಸಿದಂತಾಗುತ್ತಿತ್ತು. ಆ ದಿನಗಳನ್ನು ಸ್ಮರಿಸಿಕೊಳ್ಳುವ ಈ ಸಂದರ್ಭವೇ ಅತ್ಯಂತ ಧನ್ಯತಾಭಾವವನ್ನು ಉಂಟು ಮಾಡುತ್ತದೆ.



# ತಂದೆಯವರಿಂದ ತಿಳಿದ ದಿವಾಣದವರು

**ಕಡತೋಕಾ**
**ಗೋಪಾಲಕೃಷ್ಣ ಭಾಗವತ**
ಸಂಪಾದಕ,
ಯಕ್ಷರಂಗ ಮಾಸಪತ್ರಿಕೆ
ಹಳದೀಪುರ – 581 327

ಬಡಗುತಿಟ್ಟಿನ ನೆಲದಲ್ಲಿ ನನ್ನ ಬಾಲ್ಯವನ್ನು ಕಳೆದ ನನಗೆ ತೆಂಕುತಿಟ್ಟಿನ ಒಂದು ಆಯಾಮದ ಪರಿಚಯ ಮಾತ್ರವಿದೆ ಎಂಬ ಸತ್ಯವನ್ನು ಮೊದಲಿಗೆ ನಿವೇದಿಸುತ್ತ, ದಿವಾಣ ಭೀಮ ಭಟ್ಟರ ಕುರಿತು ನಾನು ನಮ್ಮ ತಂದೆ ದಿವಂಗತ ಕಡತೋಕಾ ಮಂಜುನಾಥ ಭಾಗವತರಿಂದ ಪಡೆದ ಶಬ್ದಚಿತ್ರದ ಸಹಾಯದಿಂದ ಮತ್ತೊಮ್ಮೆ ಭೀಮಭಟ್ಟರನ್ನು ಕಲ್ಪಿಸಿಕೊಳ್ಳಲು ಪ್ರಯತ್ನಿಸುತ್ತೇನೆ.

ಕೋಡಪದವು ವೀರಾಂಜನೇಯ ಪ್ರತಿಷ್ಠಾನದಿಂದ ನಮ್ಮ ತಂದೆ ಕಡತೋಕರಿಗೆ ದಿವಾಣ ಪ್ರಶಸ್ತಿಯುನ್ನು ನೀಡಿ ಸಮ್ಮಾನಿಸಿದ್ದರು. ಆ ಸಂದರ್ಭದಲ್ಲಿ ಅವರು ದಿವಾಣರ ಸಂಗಡ ತಾವು ಕಳೆದ ಹಳೆಯ ದಿನಗಳನ್ನು ಮೆಲುಕು ಹಾಕುತ್ತಾ ದೂರದ ದಿವಾಣರು ಆಪ್ತರಾಗುವಂತೆ ಅವರ ಕುರಿತು ನನಗೆ ಹೇಳಿದ್ದರು. ಕಡತೋಕರಿಗೆ ಅಚ್ಚುಮೆಚ್ಚಿನ ಮದ್ದಳೆಗಾರರಲ್ಲಿ ದಿವಾಣರು ಒಬ್ಬರು. ಕುದ್ರೆಕೊಡ್ಲು ರಾಮ ಭಟ್ಟರೊಂದಿಗೆ ಕೆಲವು ಕಾಲ ಮಾತ್ರ ಪದ್ಯ ಹೇಳಿದ ಕಡತೋಕರಿಗೆ ನೆಡ್ಲೆಯವರು, ಚಿಪ್ಪಾರು ಬಲ್ಲಾಳರು, ದಿವಾಣರು ಹೆಚ್ಚು ಖುಷಿ ಕೊಡುವ ಮದ್ದಳೆಗಾರರಾಗಿದ್ದರಂತೆ. ತಮ್ಮ ತಾಳ–ಲಯದ ಚಿತ್ರ ವಿಚಿತ್ರವಾದ ಕಲ್ಪನೆಗಳನ್ನು ಕೂಡಲೇ ಗ್ರಹಿಸಬಲ್ಲ ಚಾಣಾಕ್ಷರಾಗಿದ್ದ ದಿವಾಣರು ರಂಗಸ್ಥಳದಲ್ಲಿ ತಾನು ನಡೆಸುವ ಚಮತ್ಕಾರಗಳಿಗೆ ಸಹಕಾರಿಯಾಗಿ ಮದ್ದಳೆ ನುಡಿಸಬಲ್ಲವ ರಾದುದರಿಂದ ಅವರನ್ನು ಧರ್ಮಸ್ಥಳ ಮೇಳಕ್ಕೆ ಮದ್ದಳೆಗಾರ ರನ್ನಾಗಿ ಸೇರಿಸಿಕೊಳ್ಳುವ ಪ್ರಯತ್ನವನ್ನೂ ತಾನು ಮಾಡಿದ್ದೆನೆಂದೂ, ಆದರೆ ಹಲವು ವ್ಯಾವಹಾರಿಕ ಕಾರಣಗಳಿಗಾಗಿ ಅದು ಸಾಧ್ಯವಾಗಿಲ್ಲ

ವಾಗಿ ತನಗೆ ನಿರಾಸೆಯಾಗಿತ್ತೆಂದೂ ಕಡತೋಕರು ಹೇಳುತ್ತಿದ್ದರು. ಆದರೂ ಧರ್ಮಸ್ಥಳ ಮೇಳದ ಪ್ರಧಾನ ಮದ್ದಳೆಗಾರರು ರಜೆಯ ಮೇಲೆ ಹೋದಾಗ ಮದ್ದಳೆಗಾರರಾಗಿ ಬರುತ್ತಿದ್ದ ದಿವಾಣ ಭೀಮ ಭಟ್ಟರು ಕೆಲವೇ ದಿನವಾದರೂ ಸಮರ್ಥವಾಗಿ ಮದ್ದಳೆ ನುಡಿಸಿ ತನಗೆ ನೆಚ್ಚಿನ ಸ್ನೇಹಿತರಾಗಿದ್ದರು ಎಂದು ಕಡತೋಕರು ಅವರ ಪ್ರತಿಭೆಯ ಪರಿಚಯವನ್ನು ನನಗೆ ಮಾಡಿಕೊಟ್ಟಿದ್ದರು. ತಮ್ಮ ವೃತ್ತಿ ಜೀವನದಲ್ಲಿ ಮೂರು ತಲೆಮಾರಿನ ಅನೇಕ ಮದ್ದಳೆಗಾರರೊಂದಿಗೆ ಒಡನಾಡಿದರೂ ಕಡತೋಕರು ಕೆಲವು ಮದ್ದಳೆಗಾರರನ್ನು ಮಾತ್ರ ಆಗಾಗ ಸ್ಮರಿಸಿಕೊಳ್ಳುತ್ತಿದ್ದುದು ಕುತೂಹಲಕರ. ಅಂಥ ಕೆಲವೇ ಮದ್ದಳೆಗಾರರಲ್ಲಿ ದಿವಾಣ ಭೀಮ ಭಟ್ಟರು ಒಬ್ಬರಾಗಿದ್ದುದರಿಂದಲೇ ಒಮ್ಮೆಯೂ ನಾನು ಅವರನ್ನು ನೋಡಿಲ್ಲದಿದ್ದರೂ ದಿವಾಣರ ಕುರಿತು ನನಗೆ ಗೌರವ ಮೂಡುವಂತಾಯಿತು.



# ದಿವಾಣರ ಎಡ

**ಪಿ. ಮಧುಕರ ಭಾಗವತ ಕುಳಾಯಿ**
ನಿವೃತ್ತ ವಾಯು ಸೇನಾಧಿಕಾರಿ, ಜ್ಯೋತಿಷಿ
ದಕ್ಷಿಣಕನ್ನಡ

1972ರ ಸಮಯ, ಆರನೆಯ ತರಗತಿಯಲ್ಲಿ ಕಲಿಯುತ್ತಿದ್ದ ನಾನು ಯಕ್ಷಗಾನದ ಹೆಜ್ಜೆಗಾರಿಕೆಯನ್ನು ಅಭ್ಯಸಿಸುತ್ತಿದ್ದ ವರುಷ. ಕುಳಾಯಿ ಶ್ರೀ ವಿಷ್ಣುಮೂರ್ತಿ ದೇವಸ್ಥಾನದಲ್ಲಿ, ಶ್ರೀ ನಂದನೇಶ್ವರ ಮಿತ್ರ ಮಂಡಳಿಯವರ 'ಬ್ರಹ್ಮಕಪಾಲ'ದಲ್ಲಿ ದೇವೇಂದ್ರನ ಬಲ ವೇಷಧಾರಿಯಾಗಿ ರಂಗ ಪ್ರವೇಶದ ಸಂಭ್ರಮ. ದಿವಾಣ ಭೀಮ ಭಟ್ಟ, ನೆಡ್ಲೆ ನರಸಿಂಹ ಭಟ್, ಅಗರಿ ಶ್ರೀನಿವಾಸ ಭಾಗವತ, ಶಂಕರ ನಾರಾಯಣ ಸಾಮಗ, ಕೋಳ್ಯೂರು ರಾಮಚಂದ್ರ ರಾವ್ ಮೊದಲಾದವರ ಆಶೀರ್ವಾದ ಪಡೆದು ಗೆಜ್ಜೆ ಕಟ್ಟಿ ನಲಿದ ಸಂಭ್ರಮದ ನೆನೆವರಿಕೆಯೇ ಈಗ ರೋಮಾಂಚನ!

ಕುಳಾಯಿ, ಪಣಂಬೂರು ಅವರ ಊರೇ ಆಗಿತ್ತು. ನಮ್ಮ ತೀರ್ಥರೂಪರಾದ ವರ್ಣ ಕಲಾವಿದ ರಾಘವರಾಯರ ಒಡನಾಟ ಇದ್ದರೂ ಮನೆಗೆ ಬಂದಿರಲಿಲ್ಲ. ಯಾವುದೋ ಒಂದು ಕಾರಣಕ್ಕಾಗಿ ಮನೆಗೆ ಭೇಟಿ ಇತ್ತಾಗ, ನನ್ನ ತಾಯಿಯನ್ನು ನೋಡಿ "ನೀವು ಶಾಂಭವಿ ಅಮ್ಮನವರು, ಚಂಡೆ ಶ್ಯಾಂ ವೆಂಕಟ್ರಾಯ ಮಗಳು ನೀವೇನು ಇಲ್ಲಿ" ಎಂಬುದಾಗಿ ರಾಘವ ರಾಯರ ಪತ್ನಿ ಎಂದು ತಿಳಿದು, ಅಯ್ಯೋ ದೇವರೆ ಶ್ಯಾಂ ವೆಂಕಟರಾಯರು ನನಗೂ ಗುರುಗಳು ಎಂದರು. ಇನ್ನು ಈಚೆಗೆ ಬಂದರೆ ಗುರು ಪುತ್ರಿಯ ಮನೆಯ ಭೇಟಿ ತಪ್ಪಲಿಕ್ಕಿಲ್ಲ. ಎಂದುಸುರಿ, ಪಣಂಬೂರು, ಕುಳಾಯಿ ಕಡೆ ಬಂದಾಗ ತಪ್ಪದೇ ಒಂದು ಘಳಿಗೆ ಮನೆಗೆ ಬಂದು ಚಹಾಪಾನ ಆಗಿಯೇ ಮುಂದಿನ ಕೆಲಸ.

ನಂದನೇಶ್ವರ ಯಕ್ಷ ಮಿತ್ರ ಮಂಡಳಿಯಿಂದ ಪೂಜ್ಯ ಅಗರಿಯವರ ಶ್ರೀ ಕಟೀಲು ಕ್ಷೇತ್ರ ಮಹಾತ್ಮೆ ಪ್ರಸಂಗದ ಪ್ರಥಮ ಪ್ರದರ್ಶನಕ್ಕೆ ತಯಾರಿ. ಕುಳಾಯಿ ದೇವಸ್ಥಾನದಲ್ಲಿ ಪ್ರಾಕ್ಟೀಸ್ ಮುಗಿದು ರಾತ್ರಿ ಬೆಳಗು ಮಾಡುವುದಕ್ಕೆ ಪಣಂಬೂರಿನ

ವಿಷ್ಣುಮೂರ್ತಿ ದೇವಸ್ಥಾನದಲ್ಲಿ ಕಟೀಲು ಮೇಳದ ಹರಕೆ ಆಟಕ್ಕೆ ಭೇಟಿ. ಆ ದಿನದ ಮದ್ದಳೆ ಏನೂ ಸುಖ ಇರಲಿಲ್ಲ. ಮೇಳದ ಮದ್ದಳೆಗಾರರ ಮದ್ದಳೆಯ ಬಗ್ಗೆ ಆರೋಪ "ಎಡ ದಾಲಾ ಎಡ್ಡೆ ಇಜ್ಜ, ಜತ್ತ್‌ದ್‌ಂಡ್, ಶಾಯಿಲಾ ಇಜ್ಜಿ ಸಾಕಾಂಡ್ – ಮದ್ದಳೆಯ 'ಎಡ' ಏನೂ ಒಳ್ಳೆಯದಿಲ್ಲ. ಇಳಿದಿದೆ, ಶಾಯಿಯೂ ಇಲ್ಲ, ಸಾಕಾಯಿತು) ಭೀಮ ಭಟ್ಟರು ಹೇಳಿದರು "ಈರೆಗ್ ಸಾಕಾಂಡ ಯಾನ್ ಕುಲ್ಲುವೆ" (ನಿಮಗೆ ಸಾಕಾದರೆ ನಾನು ಕುಳಿತುಕೊಳ್ಳುತ್ತೇನೆ) ಎಂದು ಬೆಳಗಿನ ತನಕ ಮದ್ದಳೆ ಈ ಹಿಂದೆ ಬಾರಿಸಿದ್ದನ್ನು ನುಡಿಸಿದರು. ನಿರ್ಜೀವ ಎಡಕ್ಕೆ ಚೆನ್ನಾಗಿ ಜೀವ ತುಂಬಿದರು. ಅಂದಿನ ಮದ್ದಳೆ ಅದ್ಭುತವಾಗಿತ್ತು.

ವಕೀಲ ದಿವಂಗತ ಪಿ.ವಿ. ಐತಾಳರ (ಇಂಗ್ಲಿಷ್ ಯಕ್ಷಗಾನದ ರೂವಾರಿ) ಸುಪರ್ದಿಯಲ್ಲಿ ಮೂಡುಬಿದಿರೆಯ ಪುತ್ತಿಗೆಯಲ್ಲಿ ಶ್ರೀ ಸೋಮನಾಥೇಶ್ವರ ದೇವಳದ ಜಾತ್ರೆಗೆ 'ದಕ್ಷಾಧ್ವರ' ಬಯಲಾಟ. ಅಂದು ನನಗೆ ವೇಷ ಇರಲಿಲ್ಲ. ನಾನೂ ನನ್ನ ಮಿತ್ರ ಶಂಕರ ನಾರಾಯಣನೂ ಆಟ ನೋಡಲೆಂದೇ ಹೋಗಿದ್ದೆವು. ಅಲ್ಲಿಗೆ ತಲುಪುವಾಗ ವೀರಭದ್ರ ಮಾಡುವವರಿಗೆ 'ವಾಂತಿ-ಭೇದಿ' ಹಾಗಾಗಿ ನಮ್ಮಿಬ್ಬರಲ್ಲಿ ಒಬ್ಬರು ವೀರಭದ್ರ ಮಾಡಬೇಕೆಂದು ಕರೆ ಬಂತು. ಅಭ್ಯಾಸವಿಲ್ಲದ ನನಗೆ ತಳಮಳವಾಯಿತು. ದೇವಸ್ಥಾನದ ಒಳಗೆ ಅಗರಿಯವರು ದಿವಾಣರು ಜಗಲಿಯಲ್ಲಿ ಕುಳಿತು ಮಾತುಕತೆಯಾಗುತ್ತಿತ್ತು. ನಾನು ನೇರವಾಗಿ ಹೋಗಿ ಇಬ್ಬರಿಗೂ ಅಡ್ಡ ಬಿದ್ದು ನಮಸ್ಕರಿಸಿ, ವೀರಭದ್ರನ ಪ್ರವೇಶ ನಡೆ, ನುಡಿಯನ್ನು ತಿಳಿದು, ದಿವಾಣ ಅಗರಿಯವರ ನಿರ್ದೇಶನದಂತೆ ವೀರಭದ್ರ ಭದ್ರವಾಗಿ ವಿಜೃಂಭಿಸಿದೆ! ಅವರ ಹೇಳುವ ಕ್ರಮ, ತೋರಿದ ನಡೆ, ಅದು ಉಳಿಯಲ್ಲಿ ಕೆತ್ತಿ ಬರೆದಂತೆ! ಅಳಿಸಲಾಗದು!

ಅದೇ ಸಮಯದಲ್ಲಿ ನನ್ನ ಮಿತ್ರರ ಆಹ್ವಾನದ ಮೇರೆಗೆ ಪುತ್ತೂರು ಬಳಿ ಬಡೆಕ್ಕಿಲದಲ್ಲಿ ಸತ್ಯನಾರಾಯಣ ಪೂಜೆಯ ನಂತರ ಹವ್ಯಾಸಿಗಳೆ ಹೆಚ್ಚು ಇದ್ದ ದೇವಿ ಮಹಾತ್ಮೆ ಆಟ. ಬಡೆಕ್ಕಿಲ ಮನೆಯವರು ನನ್ನ ಸಹಪಾಠಿಗಳು. ಅಲ್ಲಿ ನನಗೆ ದೇವೇಂದ್ರನ ಪಾತ್ರವಿತ್ತು. ಚಂಡೆಗೆ ದಿವಾಣ ಶಂಕರ ಭಟ್ಟರು ಮಾಮೂಲು ಬರುವವರು. ಕಾರಣಾಂತರದಿಂದ ತಂದೆ ಭೀಮಣ್ಣ ಬಂದಿದ್ದರು. ನನ್ನನ್ನು ಅಲ್ಲಿ ಕಂಡು ಅವರಿಗೆ ಆನಂದವಾಯಿತು. ಅಂದಿನ ಮಹಿಷಾಸುರ ಈಗಿನ ಖ್ಯಾತ ಭಾಗವತ ಕುರಿಯ ಶಾಸ್ತ್ರಿಯವರು. ಅದ್ಭುತ ಮಹಿಷಾಸುರ. ಅಬ್ಬರದ ಚಂಡೆ ಇಂದಿಗೂ ಕಣ್ಣೆದುರಿದೆ. ಇಂತಹ ಆಟಗಳು ಹಬ್ಬಗಳಂತೆ ನಮಗೆ ಸದಾ ಮೆಲುಕು ಹಾಕುವ ನೆನಪುಗಳು.

ಹೀಗೆ ದೊಡ್ಡವರಿಂದ ಹಿಡಿದು ಎಳೆಯವರೊಂದಿಗೂ ಬೆರೆತು ಅತೀ ಸೌಜನ್ಯದ ಎರಡೇ ಮಾತು ನಮ್ಮ ಭೀಮ ಭಟ್ಟರದ್ದು. ಮದ್ದಳೆಯ ಎಡಕ್ಕೆ ಜೀವ ತುಂಬಿದಂತೆ ಆಟಕ್ಕೂ, ಅದರ ಸುತ್ತಲಿನ ವಾತಾವರಣಕ್ಕೂ ಅವರು ಜೀವ ತುಂಬುತ್ತಿದ್ದರು.



# ಮದ್ದಳೆಯ ಕಚಗುಳಿ

**ಸೇರಾಜೆ ಸೀತಾರಾಮ ಭಟ್ಟ**
**ಕಲಾವಿದ, ಲೇಖಕ**
'ದೀಪ್ತಿ', ಪಾಂಚಜನ್ಯ ರೆಸಿಡೆನ್ಸಿ,
ಕುಲಾಲ ಭವನದ ಎದುರು
ತಡಂಬೈಲು, ಸುರತ್ಕಲ್ಲು
ದಕ್ಷಿಣಕನ್ನಡ – 575 014

ತೆಂಕುತಿಟ್ಟು ಯಕ್ಷಗಾನ ರಂಗದ ಬಹುಶ್ರುತ ಹಿರಿಯ ಭಾಗವತರ, ರಂಗಸ್ಥಳದಲ್ಲಿ ರಾರಾಜಿಸಿದ ಮೇರು ಕಲಾವಿದರ ಹಾಗೂ ಉತ್ತುಂಗ ಕಲಾವಿದರ ಕುರಿತಾಗಿ ಬರೆಯುವಾಗಲೆಲ್ಲಾ ಕುರಿಯ ಗುರುಕುಲದ ಹೆಸರಿನ ಉಲ್ಲೇಖ ಅನಿವಾರ್ಯ. ನಯ ನಾಜೂಕಿನ ಮದ್ದಳೆ ವಾದನದ ಮೂಲಕ ಕಲಾರಸಿಕರಿಗೆ ಕಚಗುಳಿಯನ್ನಿಡುತ್ತಿದ್ದ ಶ್ರೇಷ್ಠ ಮದ್ದಳೆಗಾರರಲ್ಲೊಬ್ಬರಾದ ದಿವಂಗತ ದಿವಾಣ ಭೀಮ ಭಟ್ಟರ ವಿಷಯವೂ ಇದಕ್ಕೆ ಹೊರತಲ್ಲ. ಹಿರಿಯ ಬಲಿಪ, ಅಗರಿ, ನೆಡ್ಲೆ, ಕುದುರೆ ಕೂಡ್ಲು, ಚಿಪ್ಪಾರು, ಅಳಿಕೆ, ಕೋಳ್ಯೂರು (ಹೆಸರಿಸಿ ಮುಗಿಯದು) ಮುಂತಾದವರನ್ನೆಲ್ಲಾ ಯಾವುದೋ ವಾತ್ಸಲ್ಯದ ಅಗೋಚರ ತಂತು ಕುರಿಯದೊಂದಿಗೆ ಒಂದಲ್ಲ ಒಂದು ವಿಧದಲ್ಲಿ ಬಂಧಿಸಿರುವುದು ನಾನು ಕಂಡ ವಾಸ್ತವ. ಅಂತೆಯೇ ದಿವಾಣರೂ ಕುರಿಯದ ಸಂಬಂಧಿಯೇ.

ಯಕ್ಷಗಾನ ಕಲಾಸಕ್ತರೂ, ಪೋಷಕರೂ, ಬಯಲಾಟವನ್ನು ಏರ್ಪಡಿಸುವವರೂ ಆಗಿದ್ದ ದಿವಾಣ ನಾರಾಯಣ ಭಟ್ಟರ ಅಣ್ಣನೇ ಭೀಮ ಭಟ್ಟರು. ಪ್ರಸಿದ್ಧ ಮದ್ದಳೆಗಾರ ನೆಡ್ಲೆ ನರಸಿಂಹ ಭಟ್ಟರು ಇವರ ಭಾವ. ಪ್ರಸಿದ್ಧ ವೇಷಧಾರಿ ಕರ್ಗಲ್ಲು ಸುಬ್ಬಣ್ಣ (ಈಗಿನ ಗುರು ಕರ್ಗಲ್ಲು ವಿಶ್ವೇಶ್ವರ ಭಟ್ಟರ ತಂದೆ) ಭಟ್ಟರು ಇವರ ನೆರೆಕರೆ ಯವರು. ಅವರೂ ಕುರಿಯ ವಿಠಲ ಶಾಸ್ತ್ರಿಗಳ ಗರಡಿಯವರೇ. ಕುರಿಯ ನನ್ನ ಅಜ್ಜನ ಮನೆಯಾದ್ದರಿಂದ ಈ ಎಲ್ಲಾ ಕಲಾವಿದ ರನ್ನೂ ನನ್ನ ಎಳವೆಯಿಂದಲೇ ಕಂಡು ಆರಾಧಿಸಿದವ.

ಚಿಕ್ಕವನಾಗಿದ್ದಾಗ ನನಗೆ ಭೀಮಣ್ಣನಲ್ಲಿ ಭಯಮಿಶ್ರಿತ ಗೌರವ. ಇದಕ್ಕೆ ಕಾರಣ ಅವರ ದೊಡ್ಡ ಕಣ್ಣುಗಳು, ನೀಳಕಾಯ ಹಾಗೂ ಗಂಭೀರ ಮುಖ. ಆದರೆ ಬರುತ್ತಾ ಬರುತ್ತಾ ನಾನು ಅವರ ಆಪ್ತರಲ್ಲಿ ಒಬ್ಬನಾದೆ. ಕುರಿಯವೇ ನಮ್ಮ ಭೇಟಿಯ ಸ್ಥಳ. ಅಂತಹ ಭೀಮಣ್ಣ ಮುಂದೆ ನಾನು ಹವ್ಯಾಸಿ ವೇಷಧಾರಿಯಾದಾಗ ಹಲವಾರು ರಂಗಸ್ಥಳಗಳಲ್ಲಿ ಚೆಂಡೆವಾದಕರಾಗಿ ನನ್ನನ್ನು ಕುಣಿಸಿದ್ದು ನನ್ನ ಭಾಗ್ಯ. ಪ್ರದರ್ಶನ ಮುಗಿದ ಮರುದಿನ ನನ್ನನ್ನು ಪ್ರತ್ಯೇಕವಾಗಿ ಕರೆದು ನನ್ನ ಕುಣಿತ ಹಾಗೂ ಅರ್ಥಗಾರಿಕೆಯ ಬೆಳವಣಿಗೆಗೆ ಮಾರ್ಗದರ್ಶನವೀಯುತ್ತಿದ್ದರು. ಅತಿಕಾಯನಿಗೆ 'ಅಹುದು ಮತ್ತೇನಾರ ಚಿತ್ತದಲಿ....' ಎಂಬ ಒಂದು ಪದ್ಯವಿದೆ. ನನ್ನದು ಅಭಿನಯ ಪ್ರಧಾನ ವೇಷಗಾರಿಕೆ. ಕುರಿಯದ ತೋಟಕ್ಕೆ ನನ್ನನ್ನು ಕರೆದುಕೊಂಡು ಹೋದ ಭೀಮಣ್ಣ ತುಂಬಾ ಸಲಹೆಗಳನ್ನಿತ್ತರು. ಮೇಲೆ ಹೇಳಿದ ಪದ್ಯಕ್ಕೆ ನಾನು ಅವಳವಡಿಸಿಕೊಳ್ಳಬೇಕಾದ ಇನ್ನಷ್ಟು ವಿಷಯಗಳನ್ನು ಅವರು ಹೇಳಿ ತೋರಿಸಿದಾಗ ನಾನು ಬೆರಗಾದೆ. ಅವರ ಪುರಾಣಜ್ಞಾನ ಬಹಳ ಆಳವಾಗಿತ್ತು. ಎಳೆಯ ಕಲಾವಿದನ ಪ್ರಸ್ತುತಿಯನ್ನು ಗಮನಿಸಿ, ಅವನಿಗೆ ಸೂಚನೆಗಳನ್ನೀಯುವ ಅವರ ಔದಾರ್ಯ ವಿಶಾಲವಾಗಿತ್ತು.

ಅವರ ಮದ್ದಳೆವಾದನ ಹಿತವಾಗಿ ಕಚಗುಳಿಯಿಟ್ಟ ಅನುಭವವನ್ನು ಕೊಡುತ್ತಿತ್ತು. ಭೀಮಣ್ಣನ ಮದ್ದಳೆಯ 'ಕಸರತ್ತಿನ' ರುಚಿಯೇ ಬೇರೆ. ಮಳೆಗಾಲದಲ್ಲಿ ಕುರಿಯದಲ್ಲಿ ಆಗಾಗ ತಾಳಮದ್ದಳೆ ನಡೆಯುತ್ತಿತ್ತು. ಒಮ್ಮೆ ನೆಡ್ಲೆ, ದಿವಾಣ, ಚಿಪ್ಪಾರರ ಉಪಸ್ಥಿತಿ. ಪೀಠಿಕೆ ಬಾರಿಸುವುದು ಯಾರೆಂಬ ಪ್ರಶ್ನೆ (ಚೆಂಡೆ) "ಜವ್ವನಿಗ ಬಲ್ಲಾಳು ಬಡಿಯಲಿ" ಎಂದವರು ನೆಡ್ಲೆ. "ನಿಂಗೊ ಇಪ್ಪಗ ಆನು ಬಡಿತ್ತಿಲ್ಲೆ" ಎಂಬುದು ಬಲ್ಲಾಳರ ಉತ್ತರ. "ಭಾವನೇ (ನರಸಿಂಹ ಭಟ್ಟರು) ಬಡಿಯೆಕ್ಕು" ಎಂಬುದು ಭೀಮ ಭಟ್ಟರ ವಾದ. ಕೊನೆಗೆ ಕುರಿಯ ವೆಂಕಟ್ರಮಣ ಶಾಸ್ತ್ರಿ (ವಿಠಲ ಶಾಸ್ತ್ರಿಗಳ ತಂದೆ) ಗಳಿಂದ ಭೀಮಣ್ಣನೇ ಬಡಿಯಲಿ ಎನ್ನುವ ತೀರ್ಮಾನ. ಆ ದಿವಸದ ದಿವಾಣರ ಚೆಂಡೆಯ ಪೀಠಿಕೆ (ನೆಡ್ಲೆಯವರ ಮದ್ದಳೆ, ಚಿಪ್ಪಾರರ ಚಕ್ರತಾಳ) ಇಂದಿಗೂ ನನ್ನ ನೆನಪಿನಲ್ಲುಳಿದಿದೆ. ಉಡುಪಿಯ ಪೂರ್ಣಪ್ರಜ್ಞ ಹಾಗೂ ಲಾ ಕಾಲೇಜಿನ ನನ್ನ ಸಂಯೋಜನೆಯ ಆಟಗಳಿಗೆ ಭೀಮಣ್ಣನವರೇ ಚೆಂಡೆಗೆ. ಮುಂದೆ ಕೇರಳದ ಕಣ್ಣನೂರಿನಲ್ಲಿ ನನ್ನ ತಂಡದ ಅಂಧಕಾಸುರ ಮೋಕ್ಷವೆಂಬ ಆಟಕ್ಕೂ ದಿವಾಣರೇ ಬಂದಿದ್ದರು. ಅಲ್ಲಿಯ (ಕೇರಳದ) ಹತ್ತಾರು ಚೆಂಡೆವಾದಕರು ಭೀಮಣ್ಣನನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು.

ಅಪಶ್ರುತಿ, ಅವಲಯಗಳನ್ನು ಸಹಿಸದ ದಿವಾಣರು ಈ ಕಾರಣದಿಂದ ನಿಷ್ಠುರವಾದಿಗಳೆಂದು ಕಂಡು ಬಂದದ್ದೂ ಇದೆ. ಇದು ಕಲೆಯ ಕುರಿತಾದ ಅವರಿಗಿದ್ದ ಗೌರವವೇ ಹೊರತು ಬೇರೇನಲ್ಲ. ಶ್ರೀಯುತರ ಜನ್ಮ ಶತಮಾನೋತ್ಸವದ ಈ ಸಂದರ್ಭದಲ್ಲಿ ನನ್ನ ನೆನಪಿನಂಗಳದಿಂದ ತೆಗೆದ ವಿಚಾರಗಳನ್ನೇ ಆ ಸಹೃದಯಿಗೆ ನುಡಿನಮನವಾಗಿ ಅರ್ಪಿಸುತ್ತಿದ್ದೇನೆ.

# ತಾಳವಾದ್ಯಗಳ ತಪಸ್ವಿ

**ಪಾತಾಳ ವೆಂಕಟ್ರಮಣ ಭಟ್ಟ**
**ಕಲಾವಿದರು**
**ಉಪ್ಪಿನಂಗಡಿ, ದಕ್ಷಿಣಕನ್ನಡ**

ನಮ್ಮ ಕಾಲದ ಹಿರಿಯ ಮದ್ದಳೆಗಾರ ಲೋಕದಲ್ಲಿ ತ್ರಿಮೂರ್ತಿಗಳು. ಇವರುಗಳು ಇದನ್ನು ವಾದ್ಯವಾಗಿ ಬಾರಿಸಿ ತೋರಿಸಿದರು. ಇವರೇ ಕುದ್ರೆಕೂಡ್ಲು ರಾಮಭಟ್ರು, ನೆಡ್ಲೆ ನರಸಿಂಹ ಭಟ್ರು, ಮತ್ತು ದಿವಾಣ ಭೀಮ ಭಟ್ರು. ಈ ಮೂವರಲ್ಲಿ ಮೂರು ವಿಧದ ಸಂಶೋಧನೆ. ಕೂಟದಲ್ಲಿ ನಿರ್ಮಲವಾದ ಸ್ನೇಹ, ಸೌಹಾರ್ದತೆ, ಸಂಭಾಷಣೆ ನಿರ್ಮತ್ಸರ ಮೂವರಲ್ಲೂ. ಆದರೆ ಕಸಬಿನಲ್ಲಿ ಕುಳಿತರೆ ಬದ್ಧ ಹಟವಾದಿಗಳು. ಅದನ್ನು ಸಾಧಿಸಿಯೇ ಬಿಟ್ಟಿದ್ದರು. ಈ ತ್ರಿಮೂರ್ತಿಗಳು ಮದ್ದಳೆಯನ್ನು ಮಥಿಸಿದವರು ಸಂಗತಿಗಳನ್ನು ಸೃಷ್ಟಿಸಿದವರು ಯಾ ಪಡೆದು ಎತ್ತಿದರು. ಒಂದು ದಕ್ಷಿಣಾದಿ ಮೃದಂಗದಿಂದ, ಆವರ್ತ, ಕೃತಿಗಳು, ಎರಡನೆ ಭಾಗವತರ ಹಾಡಿನ ಲಘು ಬಿಗುಗಳಿಗೆ ಮೌಲ್ಯವಿತ್ತು, ಹಾಡನ್ನೇ ಮದ್ದಳೆಯಲ್ಲಿ ನುಡಿಸುವುದು ಮಾತ್ರವಲ್ಲ ರಂಗದಲ್ಲಿ ಅಭಿನಯಿಸುವವರ ಆಂಗಿಕ, ಚೇಷ್ಟೆಗಳನ್ನು ಚಿತ್ರಿಸುತ್ತಿದ್ದರು. ಹಾಗೂ ನರ್ತನಕ್ಕೆ ಪೋಷಣೆ ಕೊಡುತ್ತಿದ್ದರು. ಮೂರೂ ಜನ ಉಕ್ಕಿನ ಕಡಲೆಯಂತೆ ಕಸುಬಿನಲ್ಲಿ ರಾಜಿಯಿಲ್ಲ, ಬಲಿಪ, ಅಗರಿ, ಮಂಡೆಚ್ಚ ಹಾಡಲಿ, ಅಳಿಕೆ, ಶಾಸ್ತ್ರಿ. ಲಿಂಗಣ್ಣ ಕುಣಿಯುತ್ತಿರಲಿ, ತಾಳದಲ್ಲಿ ಜಾಗ್ರತರಾಗಿರುವಂತೆ ಬಾರಿಸುತ್ತಿದ್ದರು. ಇವರೇ ದಿವಾಣ ಭೀಮಣ್ಣ.

ದಿವಾಣ ಭೀಮಣ್ಣ ಚೆಂಡೆ ಮದ್ದಳೆಗೆ ಕುಳಿತರೆ ಚರ್ಮವಾದ್ಯಗಳು ಹೆದರುತ್ತಿದ್ದವು. ಅಂತಹ ಬಿಗಿಯಾದ ಬಾರಿಸುವಿಕೆ. ಚಳಿಗಾಲದಲ್ಲಿ ಬಾರಿಸುವ ಅವರಿಗೆ ಮಾತ್ರವಲ್ಲ ಹಾಡುವ, ಕುಣಿಯುವ ಬೇಕಾದರೆ ಕೇಳುವವರಿಗೂ ಬೆವರೂರುತ್ತಿತ್ತು. ಅವರ ವಾದ್ಯರವ ಭೀಮರವ ಅವರ ವಾದನ ಉಲ್ಲಾಸದ ರಂಗದೃಶ್ಯ. ಕೋಡಪದವಿಗೆ ಯಾವ ಮೇಳ ಹೋದರೂ ಕಲಾವಿದರು ದಿವಾಣ

ಭೀಮ ಭಟ್ರಲ್ಲಿಗೆ ಭೇಟಿ. ಭೀಮಭಟ್ರು ಸಾಧಕ ತಪಸ್ವಿ. ಯಾರು ಬಂದರೂ ಅವರ ರಾಜ ಚಾವಡಿಯ ಮಧ್ಯದಲ್ಲಿ ಹುಲ್ಲಿನ ಚಾಪೆಯ ಮೇಲೆ ಪೈಜಾಮ ಉಟ್ಟು ಕುಳಿತು ಬಾರಿಸುವಿಕೆಯಲ್ಲಿ ತಲ್ಲೀನರಾಗಿರುವುದೇ ಬಿಟ್ಟರೆ ಬಂದವರಲ್ಲಿ ಪಟ್ಟಾಂಗಕ್ಕೆ ಬರುವವರಲ್ಲ. ಒಂದು ವೇಳೆ ತಾಳದ ವಿಷಯದಲ್ಲಿ ಯಾರಾದರೂ ಕೇಳಿದರೆ ಎರಡು ಮಾತು ಆಡಿಯಾರು. ಒಂದು ನಗೆಯಾಡಿಯಾರು. ಮತ್ತಿಷ್ಟು ಎಲೆ ಅಡಿಕೆ ಬಾಯಿಗೆ ಹಾಕುತ್ತಾ ಕುಳಿತಾರು. ಮೊದಲ ಮನೆ ಯಜಮಾನ ತಮ್ಮ ನಾರಾಯಣ ಏನಿದ್ದರೂ ನಾರಾಯಣನಿಗೆ ಗೊತ್ತು. ತಮ್ಮ ತೊಲಗಿದ ಬಳಿಕ ಹಿರಿಮಗ ಶಂಕರ ಅಂತೂ ತಾನು ನಿರ್ಲಿಪ್ತ. ಜೀವನದುದ್ದಕ್ಕೂ ಚಂಡೆ ಮದ್ದಳೆ ಸಹವಾಸ. ಚೆಂಡೆ ಮದ್ದಳೆಗಾಗಿ ಸರ್ವ ತ್ಯಾಗಿ ಕಸಬಿನಲ್ಲಿ ಯೋಗಿ.

ದೊಡ್ಡ ಬಲಿಪ ನಾರಾಯಣ ಭಾಗವತರು ಎಷ್ಟೋ ಸಲ "ಏರ್ದುಲಯ ಬಾರಸಡದೊ' ಎಂದು ಹೇಳಿ ವಿಷಮ ಮದ್ದಳೆಗಾರ ಭೀಮ ಎಂದು ಬಿರುದು ಕೊಟ್ಟಿದ್ದರು. ಆ ಬಳಿಕ ಭೀಮಣ್ಣ ಇದ್ದಷ್ಟು ಕಾಲ ಎಚ್ಚರದಲ್ಲಿದ್ದರೆ ವಿಷಮ–ಲೆಕ್ಕಚಾರ ಮಾಡುವುದು. ಭಾವ, ನರಸಿಂಹ ಭಟ್ರಲ್ಲಿ ಮತ್ತು ಕುದ್ರೆಕೂಡ್ಲು ರಾಮ ಭಟ್ರಲ್ಲಿ ಚರ್ಚಿಸುವುದು ಬಿಟ್ಟರೆ ಬೇರೆ ವ್ಯವಹಾರ ವಿರಲಿಲ್ಲ. ವಿಷಮ ತಾಳದ ವಿದ್ವಾಂಸ ನಭೂತೊ ನಭವಿಷ್ಯತಿ, ವಿಸ್ತಾರ ನೀಡಿದವರು.

ದಿವಾಣರು ಸದಾ ಹಸನ್ಮುಖಿ. ನಗುವುದೇ ಅವರ ಜೀವನ ನಗಿಸುವುದೂ ಅಭ್ಯಾಸ ಜೊತೆಗೆ ತುಂಟಾಟಿಕೆಯೂ ಇತ್ತು. ಚೆನ್ನೈನಲ್ಲಿ ಕುರಿಯ ಶಾಸ್ತ್ರಿಗಳ ಜತೆಗೆ ಹೋದಾಗ ನಾನು ಅವರಿಗೆ ಬಹಳ ಹತ್ತಿರವಾಗಿದ್ದೆ. ಆ ದಿನಗಳಲ್ಲಿ, ಭೀಮಣ್ಣರಿಗೆ ಆಗದಿದ್ದವರೇಯಿಲ್ಲ. ರಂಗಸ್ಥಳದಲ್ಲಿ ತಾಳ ತಪ್ಪಿ ಕುಣಿದರೆ ಹೊಂದಾಣಿಕೆಯಲ್ಲಿ ಒಂದು ಮಾತು ದುರ್ವ್ಯಸನ ಅವರ ಹತ್ತಿರ ಸೋಕದು. ವ್ಯಸನಿಗಳ ಸಹವಾಸವೂ ಅವರಿಗೆ ಬೇಡ ಆಗಿತ್ತು. ದೇವರಲ್ಲೂ ಅವರಿಗೆ ಭೀಮ ಭಕ್ತಿ. ಚೆಂಡೆ, ಮದ್ದಳೆಯೇ ಅವರಿಗೆ ದೇವರು. ಚೌಕಿಗೆ ಬಂದಕ್ಷಣ ಮೊದಲು ವಾದ್ಯಗಳ ಸುಲ್ತಾನು ಮಾಡುವುದು ಅವರ ಪೂಜೆ.

ಯಾರನ್ನೂ ಓಲೈಸುವವರಲ್ಲ, ಗೌರವ, ಗಾಂಭೀರ್ಯಗಳನ್ನು ಕಾಪಾಡಿಕೊಂಡ ಮೇರು ಕಲಾವಿದ.



# ಕಲಾಜಗತ್ತಿನ ಒಂದು ವಿಸ್ಮಯ

**ಗಣಪತಿ ಶಾಸ್ತ್ರೀ**
**ಭಾಗವತರು**
ಕುರಿಯ ಮನೆ, ಕುರುಡಪದವು ಅಂಚೆ
ವಯಾ ಉಪ್ಪಳ
ಕಾಸರಗೋಡು, ಕೇರಳ

ಈ ಶತಮಾನದ ಯಕ್ಷಗಾನ ಕಲಾಜಗತ್ತು ಕಂಡ ಒಂದು ಸಾರಸ್ವತ ವಿಸ್ಮಯ, ಲಯಬ್ರಹ್ಮ ದಿವಾಣ ಭೀಮಭಟ್ಟರು. ತಮ್ಮ ಅನುಭವ ದಿಂದ, ಸಂಶೋಧನೆಯಿಂದ, ಅಧ್ಯಯನದಿಂದ, ಉತ್ಸಾಹದಿಂದ ಕಲಾಸಾಮ್ರಾಜ್ಯದ ಸಾಮ್ರಾಟನಾಗಿ ಬಾಳಿದವರು ಇವರು.

ಕುರಿಯ ಮನೆಗೆ ಅವರೊಡನೆ ಬಿಡಿಸಲಾರದ ನಂಟಿತ್ತು. ಅವರು ಮನೆಗೆ ಬಂದಾಗ ಮಹಾತಪಸ್ವಿಯೊಬ್ಬ ಬಂದಂತೆ ನನಗೆ ಭಾಸವಾಗುತ್ತಿತ್ತು. ಅವರು ಬಂದರೆ ನಮ್ಮ ಮನೆಯಲ್ಲಿ ಕೆಲವು ದಿವಸ ನಿಲ್ಲುತ್ತಿದ್ದರು. ಅವರು ಇದ್ದಷ್ಟು ಕಾಲ ನಮ್ಮ ಮನೆ ನಾದಬ್ರಹ್ಮನ ಭವ್ಯ ದೇಗುಲವಾಗುತ್ತಿತ್ತು. ಮದ್ದಳೆಯೋ ಚೆಂಡೆಯೋ ಹಿಡಿದು ಕೂತರೆ ಅವರು ಭೌತ ಪ್ರಪಂಚದಿಂದ ದೂರವಾಗಿಬಿಡುತ್ತಿದ್ದರು! ಅಲೌಕಿಕವಾದ ಕಲಾದಿಗಂತದ ದಿವ್ಯ ಸುಹಾದಿಯಲ್ಲಿ ವಿಹರಿಸುತ್ತಿದ್ದರು. ಆ ಕ್ಷಣದಲ್ಲಿ ನಾದಪ್ರಪಂಚವೇ ಅವರೊಡನೆ ಏಕೀಭವಿಸುತ್ತಿತ್ತು. ಕ್ಷಣಕ್ಷಣಕ್ಕೂ ಹೊಸ ಸೃಷ್ಟಿ, ಹೊಸ ದೃಷ್ಟಿ ಹೊರಹೊಮ್ಮುತ್ತಿತ್ತು. ಚೆಂಡೆ ಮದ್ದಳೆಗಳು ವಿನೀತ ಭಾವದಿಂದ ಇವರಿಗೆ ಕೈಮುಗಿದು ಮೈಯೊಡ್ಡುತ್ತಿದ್ದಂತೆ ನನಗೆ ಭಾಸವಾಗುತ್ತಿತ್ತು.

ನನ್ನ ತಂದೆಯವರಲ್ಲಿ ಭೀಮಭಟ್ಟರಿಗೆ ಅತ್ಯಂತ ಪ್ರೀತಿ ಹಾಗೂ ಸ್ನೇಹಾಚಾರವಿತ್ತು. ಭೀಮಭಟ್ಟರು ಮನೆಗೆ ಬಂದಾಗ ಕೆಲವೊಮ್ಮೆ ತಂದೆಯವರು ಪದ್ಯ ಹಾಡುತ್ತಿದ್ದರು. ತಂದೆಯವರದ್ದು ಬಲಿಪಶೈಲಿಯ ಪದ್ಯ. ಅದಕ್ಕೆ ಇವರು ಮದ್ದಳೆ ನುಡಿಸುತ್ತಿದ್ದರು. ನಾವೆಲ್ಲಾ ಕುಳಿತು ಕೇಳುತ್ತಿದ್ದೆವು. ಅವರ ಮದ್ದಳೆಯ ನುಡಿತದ

ಮಾರ್ಮಿಕತೆಗೆ ನಾವು ಮರುಳಾಗುತ್ತಿದ್ದೆವು. ಕೆಲವರಿಗೆ ರಂಗದಲ್ಲಾದರೆ ಒಂದುರೀತಿಯ ಉತ್ಸಾಹವಿರುತ್ತದೆ, ಯಾಕೆಂದರೆ ಅಲ್ಲಿ ಸಾವಿರಾರು ಪ್ರೇಕ್ಷಕರಿರುತ್ತಾರೆ. ಚೆನ್ನಾಗಿ ನುಡಿಸಿ ಅವರ ನುಡಿ ಮೆಚ್ಚನ್ನು ಗಳಿಸಬೇಕೆಂಬ ಹಂಬಲವಿರುತ್ತದೆ. ಆದರೆ ಒಂದು ಮನೆಯಲ್ಲಿ ಸುಮ್ಮನೆ ಕಾಲ ಕಳೆಯುವುದಕ್ಕೆ ನುಡಿಸಲು ಅವರಲ್ಲಿ ಉತ್ಸಾಹ ಇರಲಾರದು. ಭೀಮಭಟ್ಟರು ಹಾಗಲ್ಲ. ರಂಗವಾಗಲಿ, ಮನೆಯಾಗಲಿ ಪ್ರೇಕ್ಷಕರು ಇರಲಿ, ಇಲ್ಲದೇ ಇರಲಿ ಅವರು ಎಂದೂ ಕಲಾಸರಸ್ವತಿಗೆ ಮೋಸ ಮಾಡಿದವರಲ್ಲ. ಅವರು ಯಾವಾಗಲೂ ಮೈದುಂಬಿ, ಮನದುಂಬಿ ನುಡಿಸುತ್ತಿದ್ದರು.

ನಾನು ಡಿಗ್ರಿ ಮುಗಿಸಿದ ಮೇಲೆ ಒಂದು ವರ್ಷಕಾಲ ಅಲ್ಲಲ್ಲಿ ಕೆಲಸವಿಲ್ಲದೆ ಅಲೆದಾಡುತ್ತಿದ್ದೆ. ಕೆಲವೊಮ್ಮೆ ಇವರ ಜೊತೆಗೆ ತಾಳ ಮದ್ದಳೆ ಕಾರ್ಯಕ್ರಮಗಳನ್ನು ನೋಡಲು ಹೋಗುತ್ತಿದ್ದೆ. ಒಂದುಸಲ ಕೆದಿಲ ಶಾಲೆಯ ಮುಖ್ಯೋಪಾಧ್ಯಾಯರಾದ ಎನ್.ವಿ. ಕೃಷ್ಣರಾವ್ ಅವರಲ್ಲಿ ಒಂದು ತಾಳ ಮದ್ದಳೆ ಕೂಟವಿತ್ತು. ಭೀಮಭಟ್ಟರೊಡನೆ ನಾನು ಅಲ್ಲಿಗೆ ಹೋಗಿದ್ದೆ. ಎನ್.ವಿ.ಕೃಷ್ಣರಾವ್ ಅವರು ಪ್ರವಚನಕಾರರೂ ಒಳ್ಳೆಯ ಅರ್ಥಧಾರಿಯೂ ಆಗಿದ್ದರು. ಜ್ಯೋತಿಷ್ಯದ ಅನುಭವವು ಅವರಿಗಿತ್ತು. ಭೀಮಭಟ್ಟರು ನನ್ನ ಮೇಲಿನ ಅಭಿಮಾನದಿಂದ ಅವರಲ್ಲಿ ನೋಡಿ, ಇವನು ನಮ್ಮ ಕುರಿಯ ಮನೆಯ ಹುಡುಗ. ಡಿಗ್ರಿಯಾಗಿದೆ, ಆದರೆ ಒಬ್ಬ ಕೋಲೆಬಸವನ ಹಾಗೆ ತಿರುಗುತ್ತಿದ್ದಾನೆ. ಇವನ ಹಣೆಬರಹ ಹೇಗಿದೆ ಸ್ವಲ್ಪ ನೋಡಿ ಹೇಳಬೇಕು ಎಂದಿದ್ದರು. ಆಗ ಎನ್.ವಿ.ಕೃಷ್ಣರಾವ್ ಅವರು ನನ್ನ ಹಸ್ತರೇಖೆಯನ್ನು ಗಮನಿಸಿ ಇವನಿಗೆ ಆಧುನಿಕ ರೀತಿಯ ಕೆಲಸ ಸಿಗುತ್ತದೆ. ಆದರೆ ಅವ ಅದರಲ್ಲಿ ನಿಲ್ಲುವುದಿಲ್ಲ. ಅವ ಯಕ್ಷಗಾನ ಕ್ಷೇತ್ರಕ್ಕೇ ಬರುತ್ತಾನೆ. ಅದು ಹಿಮ್ಮೇಳವಾಗಬಹುದು, ಮುಮ್ಮೇಳವಾಗಬಹುದು. ಅಂತೂ ಒಳ್ಳೆಯ ಹೆಸರು ಮಾಡುತ್ತಾನೆ, ಹಣ ಮಾಡುವುದಿಲ್ಲ ಎಂದಿದ್ದರು. ಅವರ ಮಾತು ನನ್ನ ಜೀವನದಲ್ಲಿ ಸತ್ಯವಾಯಿತು.

ಒಂದುಸಲ ಬಾಯಾರು ಮುಳಿಗದ್ದೆಯಲ್ಲಿ ದಕ್ಷಯಜ್ಞ ಮತ್ತು ಗಿರಿಜಾ ಕಲ್ಯಾಣ ಯಕ್ಷಗಾನ ಬಯಲಾಟವಿತ್ತು. ಅದಕ್ಕೆ ಬರಬೇಕಾಗಿದ್ದ ಭಾಗವತರು ಹಣದ ಬೇಡಿಕೆಯೊಡ್ಡಿ ಹಣ ಕೊಟ್ಟರೆ ಮಾತ್ರ ಬರುವುದು ಎಂದು ಹೇಳಿದಾಗ ಅವನು ಬರದಿದ್ದರೆ ಆಟ ಆಗುವುದಿಲ್ಲವೋ? ನೋಡಿಯೇ ಬಿಡುವ ಎಂದು ಸವ್ಯಸಾಚಿಯಾದ ದಿವಾಣ ಭೀಮಭಟ್ಟರು ಜಾಗಟೆ ಹಿಡಿದಿದ್ದರು. ಬಹಳ ನಿಧಾನಗತಿಯ ಸುಶ್ರಾವ್ಯವಾದ, ಸ್ಫುಟವಾದ ಹಾಡುಗಾರಿಕೆ ಭೀಮಭಟ್ಟರದ್ದು. ಆಗಿನ ಅವರ ಪದ್ಯಕ್ಕೆ ವೀರಭದ್ರನ ಪಾತ್ರ ಮಾಡುವ ಸುಯೋಗ ನನ್ನದಾಗಿತ್ತು. ನಂತರದ ಭಾಗದಲ್ಲಿ ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು ಭಾಗವತಿಕೆಯನ್ನು ಮುಂದುವರಿಸಿದ್ದರು. ಅಂತೂ ಆ ದಿನದ ಪ್ರದರ್ಶನ ಸಂಪೂರ್ಣ ಯಶಸ್ವಿಯಾಗಿತ್ತು. ಇದರಿಂದ ಚಿಪ್ಪಾರು ಕೃಷ್ಣಯ್ಯ ಬಲ್ಲಾಳರಿಗೆ ಮತ್ತು ದಿವಾಣ ಭೀಮಭಟ್ಟರಿಗೆ ಕಲೆಯ ಬಗ್ಗೆ ಇರುವ ಅನುಭವದ ವಿಸ್ತಾರ, ಪ್ರೀತಿ ತಿಳಿದುಬರುತ್ತದೆ.

ಅನೇಕ ಮೇಳಗಳಲ್ಲಿ ತಿರುಗಾಟ ನಡೆಸಿ, ಭೀಮಭಟ್ಟರು ತನ್ನ ಇಳಿವಯಸ್ಸಿನಲ್ಲಿ ಸೇವೆಯ ತಿರುಗಾಟ ಮಾಡಿ, ತಿರುಗಾಟಕ್ಕೆ ಮಂಗಳ ಹಾಡಬೇಕೆಂದು ಸಂಕಲ್ಪಿಸಿ, ಸಂಚಾಲಕ ಶ್ರೀ ಕಲ್ಲಾಡಿ ವಿಠಲ ಶೆಟ್ಟರಲ್ಲಿ ಕೇಳಿ ಕಟೀಲು ಮೇಳಕ್ಕೆ ಸೇರಿದ್ದರು. ಅದು ಅವರ ಮುಕ್ತಾಯದ ಸೇವೆ ತಿರುಗಾಟ. ಅವರು ಸೇರಿಕೊಂಡದ್ದು ನಾನಿದ್ದ ಮೇಳಕ್ಕೆ. ಈ ಒಂದು ವರ್ಷಕಾಲ

ನನ್ನ ಜೀವನಕ್ಕೆ ಸುವರ್ಣಯುಗವಾಗಿತ್ತು. ಆ ಯೋಗಿಯ ಜೊತೆಗೆ ತಿರುಗಾಟ ನಡೆಸುವ ಭಾಗ್ಯ ನನಗೆ ದೊರೆತದ್ದು ನಮ್ಮ ಪೂರ್ವಜರು ಮಾಡಿದ ಸುಕೃತವೆಂದೇ ಹೇಳಬೇಕು.

ಮೇಳದಲ್ಲಿ ಅವರು ನನಗೆ ಗುರುವಾದರು. ಅನೇಕ ಸೂಕ್ಷ್ಮ ವಿಚಾರಗಳನ್ನು ತಿಳಿಸಿದರು, ಕಲಿಸಿದರು. ಆ ಕಾಲದಲ್ಲಿ ಭಾಗವತನ ಸ್ಥಾನ ಹಿರಿದಾಗಿತ್ತು. ಆದರೂ ಇವರ ಹಿರಿತನದೆದುರು ನಾನು ಕುಬ್ಜನಾಗುತ್ತಿದ್ದೆ. ಆದರೆ ಅವರು ಎಂದೂ ಭಾಗವತನ ಸ್ಥಾನವನ್ನು ಅತಿಕ್ರಮಿಸಿದವರಲ್ಲ, ಅವಮಾನಿಸಿದವರಲ್ಲ. ಅವರು ಬಿಡಾರದಲ್ಲಿ ಮಾತ್ರ ನನ್ನನ್ನು ತಿದ್ದಿದರು. ರಂಗದಲ್ಲಿ ತಪ್ಪನ್ನು ಎತ್ತಿ ತೋರಿಸಿದವರಲ್ಲ. ಗುರುಗಳಾದ ನೆಡ್ಲೆ ನರಸಿಂಹ ಭಟ್ಟರು ಮೇಳದ ಪ್ರಧಾನ ಮದ್ದಳೆಗಾರರಾಗಿದ್ದರು.

ಒಂದುಸಲ ನರಸಿಂಹಭಟ್ಟರು ರಜೆಯಲ್ಲಿ ಹುಬ್ಬಳ್ಳಿಗೆ ಹೋಗಿದ್ದರು. ಹಿರಿಯ ವೇಷಧಾರಿ ಗುಡ್ಡಪ್ಪ ಗೌಡರಿಗೆ ಆಗ ಚಿಂತೆ ಕಾಡುತ್ತಿತ್ತು. ಇವರು ವಿಷಮ ಬಾರಿಸಿದರೆ ಕುಣಿಯುವುದು ಹೇಗೆ ಎಂದು ಹೇಳುತ್ತಿದ್ದರು. ಅಂದು ದೇವಿ ಮಹಾತ್ಮೆ ಪ್ರಸಂಗವಿತ್ತು. ಅಂದು ಅವರು ಬಾರಿಸಿದ ಕ್ರಮ ಎಲ್ಲರನ್ನು ರೋಮಾಂಚನಗೊಳಿಸಿತ್ತು. ಇಡೀರಾತ್ರಿ ಭಾವಾವೇಷದಿಂದ ಯಾರಿಗೂ ತೊಂದರೆಯಾಗದಂತೆ ಅದ್ಭುತವಾಗಿ ಚೆಂಡೆ ಬಾರಿಸಿದ್ದರು. ಅವರ ಈ ಉತ್ಸಾಹ ನನಗೆ ಭಯ ಹುಟ್ಟಿಸಿತ್ತು. ಅವರಿಗೆ ಹೃದಯದ ಕಾಯಿಲೆ ಇತ್ತು. ಏನಾದರೂ ತೊಂದರೆ ಆದೀತೋ ಎಂಬ ಚಿಂತೆ ನನಗೆ ಕಾಡಿತ್ತು. ಆದರೆ ಶ್ರೀದೇವಿಯ ದಯೆಯಿಂದ ಹಾಗೆ ಆಗದೆ ಪ್ರದರ್ಶನ ಸಂಪೂರ್ಣ ಯಶಸ್ವಿಯಾಗಿತ್ತು. ಈ ಎರಡು ದಿನಗಳಲ್ಲಿ ನೆಡ್ಲೆ ನರಸಿಂಹಭಟ್ಟರ ಅನುಪಸ್ಥಿತಿ ಯಾರಿಗೂ ಅರಿವಿಗೆ ಬರಲಿಲ್ಲ. ಹೀಗೆ ಒಂದು ವರ್ಷದ ತಿರುಗಾಟವನ್ನು ಪೂರೈಸಿ ಮೇಳದ ವೃತ್ತಿಜೀವನವನ್ನು ಕೊನೆಗೊಳಿಸಿದರು. ಇದು ಅವರ ಮುಕ್ತಾಯ ಸೇವೆ. ಅವರು ಆ ತಿರುಗಾಟದ ವೇತನವನ್ನು ಪಡೆಯಲು ನಿರಾಕರಿಸಿದರು. ಆದರೆ ಇವರ ಮೇಲೆ ಅಪಾರ ಗೌರವವಿದ್ದ ವಿಠ್ಠಲಶೆಟ್ಟರು ಗೌರವಧನ ನೀಡಿಯೇ ಕಳುಹಿಸಿದ್ದರು.

ಮೇಳದ ತಿರುಗಾಟಕ್ಕೆ ಇವರು ಪೂರ್ಣವಿರಾಮ ಹಾಕಿದರೂ ಯಕ್ಷಗಾನದಿಂದ ಇವರು ಹೊರತಾಗಲಿಲ್ಲ. ಗುರುವಾಗಿ, ಕಲಾವಿದನಾಗಿ ಅಲ್ಲಲ್ಲಿ ಕಲಾಕೈಂಕರ್ಯವನ್ನು ಕೈಗೊಂಡು ಸಕ್ರಿಯರಾಗಿದ್ದರು. ಅವರೊಬ್ಬ ಕಲಾಕರ್ಮಯೋಗಿ, ಅವರಿಗೆ ಕಲೆಯೇ ದೇವರು. ಕಲೆಯ ಕಾರ್ಯವೇ ಪೂಜೆ ಎನ್ನುವ ತಾದಾತ್ಮ್ಯ ಬೆಳೆದಿತ್ತು. ಹೀಗೆ ಅವರು ತನ್ನನ್ನು ಸದಾ ಕಲಾಸೇವೆಗೆ ಮೀಸಲಾಗಿರಿಸಿದ್ದರು. ಯಕ್ಷಗಾನದ ಕಲಾಸಾಮ್ರಾಜ್ಯದಲ್ಲಿ ತ್ರಿವಿಕ್ರಮ ಹೆಜ್ಜೆಗಳನ್ನಿರಿಸಿ ಮೆರೆದ ಆ ನಾದಯೋಗಿ ಪ್ರಣವನಾದದಲ್ಲಿ ಒಂದಾದರು. ಆದರೆ ಅವರ ಚಿಂತನೆ, ಅವರು ಯಕ್ಷಗಾನಕ್ಕೆ ನೀಡಿದ ಕೊಡುಗೆಗಳು ಇನ್ನೂ ಜೀವಂತವಾಗಿವೆ. ನಮ್ಮ ಕುರಿಯ ಮನೆಯಲ್ಲಿ ಅವರು ನಡೆದಾಡಿದ ಹೆಜ್ಜೆಯ ಗುರುತು ಇನ್ನೂ ಮಾಸಿಲ್ಲ. ಕುರಿಯ ಮನೆತನದ ಅಳಿದ ಉಳಿದ ಎಲ್ಲಾ ಸದಸ್ಯರ ಪರವಾಗಿ ಈ ಮೂಲಕ ಆ ಮಹಾಚೇತನಕ್ಕೆ ನಾನು ಅಕ್ಷರ ಪುಷ್ಪಾಂಜಲಿಯನ್ನು ಅರ್ಪಿಸುತ್ತಿದ್ದೇನೆ.

# ನಮ್ಮ ಭೀಮಣ್ಣ

**ಮೂಡಂಬೈಲು ಸಿ. ಗೋಪಾಲಕೃಷ್ಣ ಶಾಸ್ತ್ರಿ**
**ಕಲಾವಿದರು, ಅಧ್ಯಾಪಕ**
ಶ್ರೀ ನಿಲಯ
ಪಡಂಗಡಿ ಅಂಚೆ, ಗುರುವಾಯನಕೆರೆ
ದಕ್ಷಿಣಕನ್ನಡ –574 217

ವೈಯಕ್ತಿಕವಾಗಿ ಯಕ್ಷಗಾನವನ್ನೇ ತನ್ನುಸಿರೆಂದು ತಿಳಿದು, ಕಾಯೇನ ವಾಚಾ ಮನಸಾ ಅದರಲ್ಲಿ ಮಗ್ನರಾದವರು ಹಲವರಿದ್ದಾರೆ. ಒಂದೊಂದು ಕುಟುಂಬವೇ ಆ ಕಲೆಗೆ ಮಾರುಹೋಗಿ, ಜೀವನೋಪಾಯದ ಇತರ ವ್ಯವಹಾರಗಳನ್ನು ಕಡೆಗಣಿಸಿದ್ದೂ ಬದುಕನ್ನು ಅದಕ್ಕೆ ಸಮರ್ಪಿಸಿದ್ದೂ ಅದಕ್ಕಿಂತಲೂ ಮಿಗಿಲಾಗಿ ಕೆಲವು ಊರುಗಳಲ್ಲಿ, ಅಕ್ಕಪಕ್ಕದ ಕುಟುಂಬಗಳ ಗುಂಪೇ, ಪರಂಪರಾಗತವಾಗಿ ಯಕ್ಷಗಾನವನ್ನು ಆರಾಧಿಸಿದ ಉದಾಹರಣೆಗಳೂ ಇವೆ. ವಿಟ್ಲ ಹಾಗೂ ಆಸುಪಾಸಿನ ಸೀಮೆಗಳಲ್ಲಿ ಕೋಳ್ಯೂರು, ಕುರಿಯ, ದಿವಾಣ, ಕುಕ್ಕೆಮನೆ, ಸರವು, ನೆಡ್ಲೆ, ಪೆರ್ವಡಿ, ಪದ್ಯಾಣ, ಬಾಯಾರು, ಮಾಣಿಲ ಮೊದಲಾದಲ್ಲಿ ಅಂತಹ ಮನೆಗಳ ಗುಂಪು ಸಾಕಷ್ಟು ಪ್ರಸಿದ್ಧವಾಗಿದ್ದ ಕಾಲವೊಂದಿತ್ತು. ಆ ವಠಾರದಲ್ಲಿ ಸದಾ ಚೆಂಡೆಮದ್ದಳೆಗಳ ಸಿನಾದ ಗುಯಿಂಗುಡುತ್ತಿತ್ತು. ಮನೆಮನೆಗಳಲ್ಲಿ ದೇವಕಾರ್ಯ, ಶ್ರಾದ್ಧ, ಪೂಜೆ, ಮದುವೆ, ಉಪನಯನಾದಿ ಕಾರ್ಯಕ್ರಮಗಳಿದ್ದಾಗ ತಾಳಮದ್ದಳೆ ಅಥವಾ ಬಯಲಾಟವಾಗುವುದು ಮಾಮೂಲಾಗಿತ್ತು. ಭೀಮ ಭಟ್ಟರು ಆ ಕಾಲದಲ್ಲಿ ದಿವಾಣ ಮನೆಯಲ್ಲಿ ಜನ್ಮ ತಾಳಿದ ಅನನ್ಯ ಸಾಧಕರು.

ಅವರು ಹಿಮ್ಮೇಳ ವಾದನದಲ್ಲಿ ಒಬ್ಬ ಕ್ರಾಂತಿಕಾರಿ ಕಲಾವಿದ. ಇವರಿಂದಲೂ ಹಿರಿಯರಾಗಿದ್ದ ಕುದುರೆಕ್ಕೂಡ್ಲು ರಾಮಭಟ್ಟರು, ನೆಡ್ಲೆ ನರಸಿಂಹ ಭಟ್ಟರು ಯಕ್ಷಗಾನದ ಹಿಮೇಳ ವಾದನದಲ್ಲಿ ಅಪರಿಮಿತ ಪ್ರಸಿದ್ಧರಾದವರು. ಕುದುರೆಕ್ಕೂಡ್ಲು ಮತ್ತು ನೆಡ್ಲೆಯವರ ವಾದನ ಕ್ರಮಗಳು ಶಾಸ್ತ್ರೀಯವಾಗಿದ್ದರೂ, ಮನೋಧರ್ಮ

ವೈವಿಧ್ಯದಿಂದ ಕೆಲವು ವ್ಯತ್ಯಾಸಗಳನ್ನು ಗುರುತಿಸಲು ಪರಿಣತರಿಗೆ ಸಾಧ್ಯವಾಗುತ್ತಿತ್ತು. ಆ ಉಭಯ ಮಟ್ಟುಗಳಲ್ಲೂ ಕೈ ಚಳಕವಿದ್ದ ದಿವಾಣರು ನರಸಿಂಹ ಭಟ್ಟರ ಕ್ರಮಕ್ಕೇ ಹೆಚ್ಚು ಸಮೀಪವರ್ತಿಯಾಗಿದ್ದರು. ಆ ಕಾಲದಲ್ಲಿ ಅವರ ಹಿಮ್ಮೇಳದೊಂದಿಗೆ ಹೊಸಬರಾದ ಭಾಗವತರು ಹಾಡಲು ಹಿಂದೇಟು ಹಾಕುತ್ತಿದ್ದರು. ಯಾಕೆಂದರೆ ಅವರ ವಾದನದಲ್ಲಿದ್ದ ಚಮತ್ಕಾರಕ್ಕೆ ಸರಿಯಾಗಿ, ತಾಳ ಮತ್ತು ಲಯವನ್ನು ಕಾಪಿಡಲು ಸಾಧ್ಯವಾಗುತ್ತಿರಲಿಲ್ಲ. ಹಿರಿಯ ಭಾಗವತರುಗಳೂ ಭೀಮಭಟ್ಟರ ಹಿಮ್ಮೇಳವಾದಾಗ, ಎಚ್ಚರದಿಂದ ಹಾಡುತ್ತಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಕಮ್ಮಟವೊಂದರಲ್ಲಿ ಭೀಮ ಭಟ್ಟರು ಯಕ್ಷಗಾನ ಪೂರ್ವರಂಗದ ಸವಿವರ ಮಾಹಿತಿ ನೀಡಿದ್ದನ್ನು ನಾನು ಕೇಳಿದ್ದೇನೆ. ಅದರ ಪರಿಪೂರ್ಣ ವಿವರ ನನಗೀಗ ನೆನಪಿಲ್ಲವಾದರೂ, ಆ ದಿನ ಉಪಸ್ಥಿತರಿದ್ದ ಇತರ ಸಂಪನ್ಮೂಲ ವ್ಯಕ್ತಿಗಳು ಅವರ ವಿಧಾನ ಮತ್ತು ನಿಲುಮೆಗಳಿಗೆ ವ್ಯಕ್ತ ಪಡಿಸಿದುದನ್ನು ಕಂಡಿದ್ದೇನೆ. ಅವರು ಬರೆದ ಲೇಖನಗಳಲ್ಲಿ ಜಾಗಟೆ ಪೆಟ್ಟನ್ನೂ, ಮದ್ದಳೆಯ ನುಡಿತವನ್ನು ಬಿಡಿತ – ಮುಕ್ತಾಯಗಳನ್ನು ಕ್ರಮವಾಗಿ ವಿವರಿಸಿದುದನ್ನು ನಾನು ಓದಿದ್ದೇನೆ. ಅಲ್ಲಿ ಬೇರೆ ಬೇರೆ ತಾಳಗಳ ಮಾತ್ರಾ ಗಣನೆ, ಬಿಡಿತ ಮುಕ್ತಾಯಗಳ ಅಕ್ಷರ ಗಣನೆ, ಮಾತ್ರವಲ್ಲ ಮುಕ್ತಾಯದಲ್ಲಿರುವ ವೈವಿಧ್ಯಗಳನ್ನು ನಿಖರವಾಗಿ ಸ್ಪಷ್ಟ ಪಡಿಸಿದ್ದೂ ಇದೆ. "ತಿತ್ತಿತ್ತೈಯ ಕೊನೆಗೆ, 'ದದಿಗಿಣ'ದಲ್ಲಿ ನಿಲ್ಲುವುದಿಲ್ಲ 'ತೊ' ಬಾರಿಸಲೇ ಬೇಕು, ತ್ವರಿತ ಝಂಪೆ ಮುಕ್ತಾಯದಲ್ಲಿ 'ತರಿಕಿಟ' ಆದ ಬಳಿಕ 'ಧೀಂ' ಬಾರಿಸಲೇ ಬೇಕು" ಎಂಬಿತ್ಯಾದಿ ಹಲವು ನಿರ್ಣಯಗಳನ್ನು ಅವರು ಖಚಿತ ಪಡಿಸಿದ್ದಾರೆ. ಮದ್ದಳೆಯ ಉರುಳಿಕೆಗಳಲ್ಲಿ ನಾಲ್ಕು ಅಕ್ಷರಗಳ ಗುಂಪುಗಳು ಹೇಗೆ ಬಳಕೆಗೆ ಬರುತ್ತವೆ ಎಂದೂ, ಅವುಗಳು ಎಲ್ಲಾ ತಾಳಗಳಿಗೂ ಜೋಡಿಸಲ್ಪಡುವುದರಿಂದ ಜೋಡುರುಳಿಕೆಯೆಂದು ಹೇಳಲ್ಪಡುವುದೇ ಹೊರತು, ಜೋಡುರುಳಿಕೆಯೆಂಬ ಬೇರೊಂದು ವಾದನ ತಾಳಕ್ರಮವಿಲ್ಲ ಎಂಬುದು ಅವರ ಒಂದು ವಿಶಿಷ್ಟ ಅಭಿಪ್ರಾಯ.

ಭೀಮ ಭಟ್ಟರು ಸಂಪ್ರದಾಯ ಬದ್ಧವಾದ ಚೆಂಡೆ ಮದ್ದಳೆ ವಾದನವನ್ನು ತಿಳಿದವರು. ಅವರದೇ ಆದ ವಿಶಿಷ್ಟ ಚಮತ್ಕಾರಗಳನ್ನು ಕೂಡಾ ಹೊಂದಿದ್ದವರು. ಬಯಲಾಟ ನಡೆಯುವಲ್ಲಿ ಸಂಜೆ ಕೇಳಿ ಬಡಿಯುವುದರಿಂದ ತೊಡಗಿ, ಪೂರ್ವರಂಗದ ಗಣಪತಿ ಸ್ತುತಿ, ಕೊಡಂಗಿ, ನಿತ್ಯವೇಷ, ಸ್ತ್ರೀವೇಷ, ಪೀಠಿಕೆ ಸ್ತ್ರೀ ವೇಷ (ಇಬ್ಬರು), ಪೀಠಿಕೆ, ತೆರೆ ಕುಣಿತ, ಸಭಾ ಕಲಾಸು, ಕಿರಾತ ವೇಷ, ಬಣ್ಣದ ವೇಷ (ತೆರೆ ಪೊರಪ್ಪಾಟು) ಇತ್ಯಾದಿಗಳನ್ನು ನಡೆಸುವಲ್ಲಿ ಕೆಲವೆಡೆ ಚೆಂಡೆಗೆ ಪ್ರಾಶಸ್ತ್ಯವಿದೆ. ಹೆಚ್ಚಿನ ಸಂದರ್ಭಗಳಲ್ಲಿ ಮದ್ದಳೆಗಾರನ ಕೈಚಳಕವೇ ಪ್ರಾಮುಖ್ಯ ಈಯೆಲ್ಲವನ್ನೂ ಸಂಪ್ರದಾಯ ತಿಳಿದು ಚೆನ್ನಾಗಿ ನಿರ್ವಹಿಸುತ್ತಿದ್ದರು. ರಂಗಸ್ಥಳದ ಪ್ರವೇಶದ್ವಾರದಲ್ಲಿ ಎತ್ತಿ ಹಿಡಿದ ತೆರೆಯ ಹಿಂದೆ, ವೇಷಧಾರಿ ಭೂಮಿಗೆ ನಮಸ್ಕರಿಸಿ, ಭಾಗವತರನ್ನೂ ಮದ್ದಳೆಗಾರರನ್ನೂ ಮುಟ್ಟಿ ನಮಸ್ಕರಿಸುವುದನ್ನು "ಅದು ವೇಷಧಾರಿ ಕೊಡುವ ಗೌರವವೂ ಹೌದು, ತಾನು ಸಜ್ಜಾಗಿ ಬಂದೆನೆನ್ನುವ ಸೂಚನೆಯೂ ಹೌದು" ಅನ್ನುವುದು ಅವರ ಒಂದು ಅಭಿಮತ.

ನಿತ್ಯ ಜೀವನದಲ್ಲಿ ಸಜ್ಜನ ಸ್ವಭಾವದ ಭೀಮಣ್ಣ ನಮ್ಮನ್ನೆಲ್ಲ ಕಂಡಲ್ಲಿ ಪ್ರೀತಿ ಗೌರವ ಗಳಿಂದ ಮಾತಾಡಿಸದೆ ಬಿಡುವವರಲ್ಲ. ನನಗಿಂತ ವಯಸ್ಸಿನಲ್ಲಿ ಸಾಕಷ್ಟು ಹಿರಿಯರಾದ

ಅವರು ಕಿರಿಯನೆಂದು ತಾತ್ಸಾರ ಮಾಡಿದ್ದಿಲ್ಲ. ಅಪೇಯವಾಗಿ ವ್ಯವಹರಿಸುತ್ತಿದ್ದರು. ತಾಳಮದ್ದಳೆಗಳಲ್ಲಿ ನಮ್ಮ ಅರ್ಥಗಾರಿಕೆ ಹಾಗೂ ಪ್ರತಿ ಕಲಾವಿದನ ವಾದದ ಕುರಿತು ನೈಜ ವಿಮರ್ಶೆ ಮಾಡುವುದು ಅವರ ರೂಢಿಯಾಗಿತ್ತು. ಒಮ್ಮೊಮ್ಮೆ ಅವರ ಮಾತು ನಮ್ಮನ್ನು ನಗೆಗಡಲಲ್ಲಿ ತೇಲಿಸುವಂತೆಯೂ ಇರುತ್ತಿತ್ತು. ಒಂದು ಬಾರಿ ನಾನು ಅವರೊಡನೆ ಲೋಕಾಭಿರಾಮವಾಗಿ ಮಾತಾಡುತ್ತಾ "ಭೀಮಣ್ಣ ನಿನ್ನ ಮಗ ಶಂಕರ, ನಿನ್ನಲ್ಲಿಯೇ ಹಿಮ್ಮೇಳ ಕಲ್ತದ್ದೋ" ಎಂದು ಕೇಳಿದೆ. ಆಗ ಅವರ ಉತ್ತರ "ಎಂತಾರ ಕಲಿತಿದ್ದು! ಆನು ಕಲಿತಿದ್ದೇ ಇಲ್ಲೆ. ಅವಂಗೆ ಕಲಿಶಿ ಬಂದದೇ ಅಲ್ಲ. ಅದೆಲ್ಲೋ ಆನು ಆಟಂದ ಮನೆಗೆ ಬಂದಾಗ ಎನ್ನ ಸಂಕಲ್ಪಕ್ಕೆ ಸರಿಯಾಗಿ ಹುಟ್ಟಿದ್ದಾಗಿರೆಕ್ಕು" ಎಂದು ಗಹಗಹಿಸಿ ನಕ್ಕು ಬಿಟ್ಟರು.

ರಂಗವನ್ನು ನಿಯಂತ್ರಿಸುವ ವರ್ಚಸ್ಸುಳ್ಳ ಬೆರಳೆಣಿಕೆಯ ಹಿಮ್ಮೇಳ ವಾದಕರಲ್ಲಿ ಒಬ್ಬರಾಗಿದ್ದರು ನಮ್ಮ ಭೀಮಣ್ಣ.



# ಹಿಮ್ಮೇಳದ ಭೀಮನ ಒಡನಾಟ

**ಕೋಟೆ ಎಸ್. ರಾಮ ಭಟ್ಟ**
ಕಲಾವಿದ, ಪ್ರಾಧ್ಯಾಪಕ
ಲಕ್ಷಣಿ ನಿವಾಸ
ಸರಕಾರಿ ಆಸ್ಪತ್ರೆ ಬಳಿ
ಕೆ.ಎಸ್.ಕಾಮತ್ ರಸ್ತೆ
ಕಾರ್ಕಳ – 574 104

ಯಕ್ಷಗಾನ ಹಿಮ್ಮೇಳದ ಸಮಗ್ರತೆಯ ಅರಿವನ್ನು ಮನದಟ್ಟು ಮಾಡಿ ಮೈಗೂಡಿಸಿ ವಾದನದಲ್ಲಿ ಖ್ಯಾತಿ ಪಡೆದ ಮಹೋದಯರಲ್ಲಿ ದಿವಾಣ ಭೀಮ ಭಟ್ಟರು ಒಬ್ಬರು.

ದಿವಾಣರ ಪರಿಚಯ ನನಗಾಗುವಾಗ ಅವರಿಗೆ ವಯಸ್ಸು 57–58 ಆಗಿದ್ದಿರಬೇಕು. ಅವರ ಹಿಮ್ಮೇಳ ವಾದನವನ್ನು ಕೇಳಿ ನಾನೇ ನನ್ನ ಪರಿಚಯ ಮಾಡಿಸಿ ಮಾತಾಡಿದೆ. ಆಗ ಅವರು 'ಓಹೋ ಕೋಟೆ ಸುಬ್ರಾಯ ಮಾಸ್ತರ ಮಗನೋ, ನೀವು ಉಪನ್ಯಾಸಕರಾಗಿರುವುದು ಬಹಳ ಸಂತೋಷ" ಎಂದು ಆತ್ಮೀಯವಾಗಿ ನುಡಿದರು. ತಾಳಮದ್ದಳೆ ಕೂಟಗಳಲ್ಲಿ ಅವರ ಸಾಹಚರ್ಯ ಆತ್ಮೀಯತೆಗೆ ಬೆಸುಗೆಯಾಯಿತು. ಈ ಬೆಸುಗೆ ಅವರನ್ನು ತಾಳಮದ್ದಳೆ ಕೂಟಕ್ಕೆ ಹೊಸಪೇಟೆಗೆ ಕರೆದೊಯ್ಯುವಂತೆ ಮಾಡಿತು.

1978 ಎಪ್ರಿಲ್ ತಿಂಗಳಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ ಯಕ್ಷಗಾನ ತಾಳಮದ್ದಳೆ ಕೂಟಗಳನ್ನು ಜರುಗಿಸಿ ಕೊಡಬೇಕೆಂದು ಅಲ್ಲಿಯ ದಕ್ಷಿಣ ಕನ್ನಡ ಸಂಘದ ಪದಾಧಿಕಾರಿಗಳು ಪತ್ರ ಮೂಲಕ ತಿಳಿಸಿದರು. ನನ್ನ ಭಾವ (ಹೆಂಡತಿಯ ಅಣ್ಣ) ಎಡಮಲೆ ಸೀತಾರಾಮ ಭಟ್ಟರ ಮೂಲಕ ಈ ವಿಷಯ ತಿಳಿಸಿದ್ದರು. ಅವರು ಹೊಸಪೇಟೆ ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗಿ ಹಾಗೂ ಕನ್ನಡ ಸಂಘದ ಪದಾಧಿಕಾರಿ. ನನ್ನ ಗುರುಗಳೂ ಸಂಬಂಧಿಯೂ ಆದ ವಿದ್ವಾನ್ ಪೆರ್ಲ ಕೃಷ್ಣ ಭಟ್ಟರಲ್ಲಿ ಈ ಪ್ರಸ್ತಾಪ ಮುಂದಿಟ್ಟಾಗ

ತಕ್ಷಣ ಕಾರ್ಯಪ್ರವೃತ್ತರಾದರು. ಶ್ರೀ ಮೂಡಂಬೈಲು ಶಾಸ್ತ್ರಿ, ಡಾ. ಎಂ. ಪ್ರಭಾಕರ ಜೋಷಿ, ಶ್ರೀ ಕುದುರೆ ಕೋಡ್ಲು ರಾಮಭಟ್ಟ (ಸಣ್ಣವರು) ಕವಿ, ಭಾಗವತ, ಅರ್ಥದಾರಿ ಮಂದಾರ ಕೇಶವ ಭಟ್ಟ ಇವರನ್ನು ಸಂಪರ್ಕಿಸಿದಾಗ ಸಂತೋಷದಿಂದ ಒಪ್ಪಿಗೆ ನೀಡಿದರು. ಯಕ್ಷಗಾನ ತಾಳಮದ್ದಳೆಯ ಬಗೆಗೆ ಪರಿಚಯವಿಲ್ಲದ ಹೊಸಪೇಟೆಯ ಜನರನ್ನು ಬಡಿದೆಬ್ಬಿಸಿ ಯಕ್ಷಗಾನದ ಕಡೆಗೆ ಗಮನವಿಡುವಂತೆ ಮಾಡಬಲ್ಲ ಚೆಂಡೆವಾದಕ ನಮಗೆ ಅತ್ಯಗತ್ಯ. ಬಯಲಾಟವಾದರೆ ವೇಷಗಳು ಕುಣಿಯುತ್ತವೆ. ಅಭಿನಯಿಸುತ್ತವೆ. ಮಾತಾಡುತ್ತವೆ. ಜನಕುಳಿತು ನೋಡುತ್ತಾರೆ. ತಾಳಮದ್ದಳೆ ಹಾಗಲ್ಲ. ವೇಷವಿಲ್ಲ, ಕುಣಿತವಿಲ್ಲ. ಕೇವಲ ಮಾತುಗಾರಿಕೆ ಮಾತ್ರ ಚೆಂಡೆವಾದನಕ್ಕೆ ಮಾರುಹೋಗದವರು ಯಾರು ಇದ್ದಾರೆ? ವಾದನಕ್ಕೆ ಯಾರು? ಆಗ ಎಲ್ಲರ ಬಾಯಿಯಿಂದ ಉದ್ಘೋಷಿಸಲ್ಪಟ್ಟ ಹೆಸರು ದಿವಾಣ ಭೀಮ ಭಟ್ಟರು. ದಿವಾಣರಲ್ಲಿ ವಿಷಯ ಪ್ರಸ್ತಾಪಿಸಿದಾಗ ಒಪ್ಪಿಗೆ ನೀಡುತ್ತಾ "ನನ್ನ ಮಗ ಬಳ್ಳಾರಿಯ ಸುತ್ತಲೆಲ್ಲೋ ಬ್ಯಾಂಕ್ ಉದ್ಯೋಗಿ. ಆತನನ್ನು ಅಲ್ಲಿಗೆ ಬರಮಾಡಿಸಿ ಮಾತಾಡುವ ಅವಕಾಶ ತಾನಾಗಿ ಬಂತು" ಎಂದು ನುಡಿದರು.

ನನ್ನ ಕುಟುಂಬದ ಹುಡುಗ ಓಟೆಕಾಡು ಸುಬ್ರಹ್ಮಣ್ಯ ಭಟ್ಟನ ಕಾರ್ ಗೊತ್ತು ಮಾಡಿ ಹೊಸಪೇಟೆಗೆ ಮುಖ ಮಾಡಿ ಹೊರಟೆವು. ಹೊಸಪೇಟೆಗೆ ತಲುಪಿದಾಗ ಮಧ್ಯ ರಾತ್ರಿಯಾಗಿತ್ತು. ಸಿಂಡಿಕೇಟ್ ಬ್ಯಾಂಕಿನ ಎದುರು ಗೆಸ್ಟ್ ಹೌಸಿನಲ್ಲಿ ಉಳಿದುಕೊಳ್ಳುವ ವ್ಯವಸ್ಥೆ ಮಾಡಿದ್ದರು. ಬೇಸಗೆ ಕಾಲದ ದೆಸೆಯಿಂದ ಸಹಿಸಲಸಾಧ್ಯವಾದ ಸೆಕೆ. ಆಗ ದಿವಾಣರು "ಈ ಸೆಕೆಯಲ್ಲಿ, ಹೇಗೆ ಬಾರಿಸುವುದು?" ಎಂದು ಹೇಳಿದಾಗ ಕುದುರೆಕೋಡ್ಲು ರಾಮ ಭಟ್ಟರು "ಕೋಲಿನಿಂದ ಬಾರಿಸಿದರಾಯ್ತು" ಎಂದು ಉತ್ತರಿಸಿ ನಗೆ ಸೂಸಿದರು. ಎಲ್ಲರೂ ನಿದ್ದೆಗೆ ಶರಣು ಹೋದೆವು.

ಹೊಸಪೇಟೆಯ ಶ್ರೀ ಗೋಪಾಲಕೃಷ್ಣ ದೇವಸ್ಥಾನದಲ್ಲಿ ನಾಲ್ಕು ದಿನಗಳ ಕಾಲ ಸಂಜೆ ಗಂಟೆ 5 ರಿಂದ ಯಕ್ಷಗಾನ ತಾಳಮದ್ದಳೆ ಎಂದು ಕರಪತ್ರ ಮುದ್ರಿಸಿ ಪ್ರಚಾರ ಮಾಡಲಾಗಿತ್ತು. ಸಾಯಂಕಾಲ ಗಂಟೆ 5.30 ಆದರೂ ಸಭಾಂಗಣದಲ್ಲಿ ಜನರು ಬಹಳ ಕಡಿಮೆ ಇದ್ದರು. ದಿವಾಣ ಭೀಮ ಭಟ್ಟರಲ್ಲಿ ಪೀಠಿಕೆ ಬಾರಿಸಲು ಕಾರ್ಯಕರ್ತರು ವಿನಂತಿಸಿದರು. ತಡಮಾಡದೆ ದಿವಾಣರು ಚೆಂಡೆ ಹಿಡಿದು 20 ನಿಮಿಷಗಳ ಕಾಲ ಪೀಠಿಕೆಯಲ್ಲಿ ನಾನಾ ಪ್ರಕಾರದ ನುಡಿಗಳನ್ನು ಅಬ್ಬರದಿಂದ ಬಾರಿಸಿದರು. ಉರುಳಿಕೆ ಬಾರಿಸಿದಾಗ ಕೋಲುಗಳ ಚಲನ-ವಲನ ಗೋಚರಿಸುತ್ತಿರಲಿಲ್ಲ. ಚೆಂಡೆಯ ಆರ್ಭಟಕ್ಕೆ ದಿಗ್ಭ್ರಮೆಗೊಂಡು ಜನರು ಸೇರಲಾರಂಭಿಸಿದರು. ಸಭಾಭವನ ಜನರಿಂದ ತುಂಬಿಹೋಯಿತು. ಕಾರ್ಯಕರ್ತರು ಧನ್ಯತಾಭಾವದಿಂದ ಕೃತಜ್ಞತೆಗಳನ್ನು ದಿವಾಣರಿಗೆ ಅರ್ಪಿಸಿದರು. ಪೆರ್ಲದವರು ತಾಳಮದ್ದಳೆಯ ಕುರಿತು ಕಿರುಪರಿಚಯ ನೀಡಿ ನಂತರ ತಾಳಮದ್ದಳೆ ಪ್ರಾರಂಭವಾಯಿತು. ಹಿಮ್ಮೇಳ, ಅರ್ಥಗಾರಿಯಲ್ಲಿ ವಾದ-ವಿವಾದ ಪಾತ್ರಚಿತ್ರಣ ಜನರ ಮನಸೂರೆಗೊಂಡಿತು. ಮರುದಿವಸದಿಂದ ತಾಳಮದ್ದಳೆ ಪ್ರಾರಂಭವಾಗುವುದಕ್ಕಿಂತ ಮೊದಲೇ ಸಭಾಂಗಣ ಜನರಿಂದ ತುಂಬುತ್ತಿತ್ತು. ಹಿಮೇಳವನ್ನು ಕೇಳಿ ಕೈ ಚಪ್ಪಾಳೆ ಹಾಕುತ್ತಿದ್ದರು. ನಾಲ್ಕು ದಿನಗಳಲ್ಲಿ ಶರಸೇತು ಬಂಧನ, ವಾಲಿವಧೆ, ಶ್ರೀಕೃಷ್ಣ ಸಂಧಾನ, ಭೀಷ್ಮಾರ್ಜುನ ಪ್ರಸಂಗಗಳನ್ನು ಆಯ್ಕೆ ಮಾಡಲಾಗಿತ್ತು. ವಾಲಿ, ಕೌರವ, ಭೀಷ್ಮ ಇವರ ವಾದವನ್ನು ಕೇಳಿ "ಇದು ಸರಿ,

ಭೇಷ್" ಎಂದೂ ರಾಮ, ಕೃಷ್ಣ ಈ ಪಾತ್ರಗಳು ವಿಷಯವನ್ನು ಖಂಡಿಸಿದಾಗ "ಇದು ಖರೆ, ಹಾಂಗೆ ಹೇಳ್‌ಬೇಕು" ಎಂದು ಪ್ರೇಕ್ಷಕರು ಎದ್ದು ನಿಂತು ಹೇಳುತ್ತಿದ್ದರು. ತಾಳಮದ್ದಳೆ ಮುಗಿದ ಮೇಲೆ ಅನೇಕ ಪ್ರೇಕ್ಷಕರು ಚೆಂಡೆಯನ್ನು ಕೋಲುಗಳನ್ನು ಹಿಡಿದು ತಿರುಗಿಸಿ "ಬೆರಳುಗಳಿಂದಾದರೆ ಸರಿಯಪ್ಪ ಕೋಲುಗಳಿಂದ ಹೀಗೆ ಸ್ವರ ಬರಿಸುವುದು ಹ್ಯಾಗಪ್ಪ?" ಎಂಬುದು ಅಲ್ಲಿಯವರ ಚೋದ್ಯ. ದಿವಾಣರು ಹೇಗೆ ಎಂಬುದನ್ನು ಬಡಿದು ತೋರಿಸಿದರು. ಅರ್ಥವಾಗದೆ ಇದ್ದರೂ ಮೆಚ್ಚಿದ ಅವರು ದಿವಾಣರಿಗೆ ನಮಸ್ಕರಿಸುವುದು ಕೈಕುಲುಕುವುದು ಇತ್ಯಾದಿಯಾಗಿ ಗೌರವ ನೀಡಿ ಮಾತಾಡಿದರು.

ಹೊಸಪೇಟೆಯ ಸೆಕೆಗೆ, ಅಲ್ಲಿಯ ಬಚ್ಚಂಗಾಯಿ ನೆರವಾಯಿತು. ಭೀಮ ಭಟ್ಟರು, ಮಂದಾರರೂ ತಿನ್ನುವುದು ನಿಧಾನ. ಹಾಗಾಗಿ – ಹೆಚ್ಚಿನ ಪಾಲು ನನಗೆ, ಜೋಶಿಯವರಿಗೆ.

ಕಾರ್ಯಕ್ರಮವನ್ನು ಮುಗಿಸಿ ಊರಿಗೆ ಹಿಂದಿರುಗಿದೆವು. ಪೀಠಿಕೆಯಲ್ಲಿ ದಿವಾಣರ ಚೆಂಡೆವಾದನ ಕೇಳಿ ಅತ್ಯುದ್ಭುತ ಎಂದು ಅವರಲ್ಲಿ ಹೇಳಿದಾಗ ಅವರು "ಇಂತಹ ಅವಕಾಶ ಸಿಗುವುದು ಬಹಳಷ್ಟು ಕಡಿಮೆ. ಸಿಕ್ಕಿದಾಗ ಉಪಯೋಗಿಸುವುದು ಜಾಣತನ" ಯಕ್ಷಗಾನ ಏನೆಂದು ಜನರಿಗೆ ತಿಳಿಸಲು ಸಂದರ್ಭ ಎಂದರು.

ಅಡ್ಯನಡ್ಕದ ಸಾಯದಲ್ಲಿ ಹಿರಿಯರಾದ ನೆಡ್ಲೆ ನರಸಿಂಹ ಭಟ್ಟರ ಮತ್ತು ದಿವಾಣ ಭೀಮ ಭಟ್ಟರ ಜುಗಲ್ ಬಂದಿಯ ವಾದನವು ಸ್ಮರಣೀಯ. ಅರ್ಧ ತಾಸಿಗಿಂತ ಹೆಚ್ಚು ಕಾಲ ಸ್ಪರ್ಧಾತ್ಮಕವಾಗಿ ಇಬ್ಬರ ಚೆಂಡೆ ವಾದನವಿತ್ತು. ಒಬ್ಬರಿಗಿಂತ ಒಬ್ಬರು ಮಿಗಿಲೆಂಬಂತೆ ಚೆಂಡೆಯ ನುಡಿಗಳನ್ನು ಬಾರಿಸುತ್ತಿದ್ದರು. ಸೋಲೋಪ್ಪುವ ಜಾಯಮಾನ ಇಬ್ಬರದ್ದಲ್ಲ. ಆಗ ಮನೆಯವರ ವಿನಂತಿಯ ಮೇರೆಗೆ ಜುಗಲ್‌ಬಂದಿ ಮುಕ್ತಾಯಗೊಂಡಿತು. ಅಂದು ನಿಜಕ್ಕೂ ಹಿಮ್ಮೇಳದ ಭೀಮ ದಿವಾಣರು ಎಂಬ ಉದ್ಗಾರ ಶ್ರೋತೃಗಳ ಬಾಯಿಯಿಂದ ಹೊರಹೊಮ್ಮಿತು. ಈ ವಿಷಯದ ಕುರಿತು ಪ್ರಸ್ತಾವನೆ ಮಾಡಿದಾಗ ದಿವಾಣರು "ನರಸಿಂಹಣ್ಣ ಹಿಮ್ಮೇಳಕ್ಕೆ ಗುರು. ಅವರಲ್ಲಿ ಕೆಲವು ವಿಶೇಷ ಹಾಗೂ ವಿಶಿಷ್ಟವಾದ ಚೆಂಡೆ ಪೆಟ್ಟುಗಳಿವೆ. ಅವನ್ನು ಕೇಳಿದ್ರೆ ಗಾಳಿಯಲ್ಲಿ ಮಾತನ್ನು ಹಾರಿಸುತ್ತಾರೆ. ಆ ಪೆಟ್ಟುಗಳು ಹೊರಗೆ ಬರ್ಲಿ ಅಂತ ಸ್ಪರ್ಧಾತ್ಮಕವಾಗಿ ನನ್ನಲ್ಲಿದ್ದ ಸಾಹಿತ್ಯವನ್ನು ಹಾಕಿ ಬಾರಿಸಿದೆ. ಆಗ ನರಸಿಂಹ ಭಾವನ ಕೆಲವು ಪೆಟ್ಟುಗಳು ಹೊರಗೆ ಬಿತ್ತು. ಅದನ್ನು ಮನದಟ್ಟು ಮಾಡಿದೆ. ಜುಗಲ್ ಬಂದಿ ನಿಲ್ಲಿಸಿದ ಮೇಲೆ ಅವರಿಗೆ ನಮಸ್ಕರಿಸಿದೆ" ಎಂದು ಹೇಳುತ್ತಾ ಬೊಚ್ಚು ಬಾಯಿಯಿಂದ ನಗೆಸೂಸಿದರು.

ಹೀಗೆ ದೀವಾಣದವರ ಒಡನಾಟ ರಂಗದಲ್ಲೂ, ರಂಗದ ಹೊರಗೂ ಸ್ವಾರಸ್ಯಕರ ವಾದುದು.



# ಲಯದ ಗರ್ಭದ ಅಸಮ ಸೃಷ್ಟಿ

**ದೇಲಂತಮಜಲು ಸುಬ್ರಹ್ಮಣ್ಯ ಭಟ್ಟ**
ಕಲಾವಿದರು
ಮಾಣಿಲ ಅಂಚೆ
ಬಂಟ್ವಾಳ ತಾಲೂಕು

ಹಿಮ್ಮೇಳ-ಮುಮ್ಮೇಳಗಳಲ್ಲಿ ಸಿದ್ಧಿಯನ್ನು ಮಾಡಿದ ಕಲೆಯನ್ನು ತಪಸ್ಸಾಗಿ ಸ್ವೀಕರಿಸಿ ಕಲೆಯನ್ನು ಔನ್ನತ್ಯಕ್ಕೆ ಒಯ್ದು, ತಾವೂ ಆ ಮೂಲಕ ಪ್ರಸಿದ್ಧರಾದವರು ಬೆರಳೆಣಿಕೆಯ ಮಂದಿ ಮಾತ್ರ. ಅಂಥ ಕಲಾವಿದರ ಸಾಲಿಗೆ ಸೇರಿದವರು ದಿವಾಣ ಭೀಮ ಭಟ್ಟರು. ಭಾಗವತರಾಗಲಿ, ಕುಣಿಯುವ ವೇಷಧಾರಿಗಳಾಗಲಿ, ಪೂರಕವಾಗಿ ಒದಗಬಲ್ಲ ಚೆಂಡೆ, ಮದ್ದಳೆಗಳಿಲ್ಲದಿದ್ದಲ್ಲಿ ಅಸಹಾಯಕರು. ಎಷ್ಟೋ ಬಾರಿ ಒಳ್ಳೆಯ ಭಾಗವತನೂ ಉತ್ತಮವಾದ ಹಿಮ್ಮೇಳದ ಸಾಥ್ ಸಿಗದೆ ಅಸಹಾಯಕನಾಗುವುದಿದೆ. ಆದರೆ ದಿವಾಣ ಭೀಮ ಭಟ್ಟರು ಹಿಮ್ಮೇಳಕ್ಕೊಂದು ಹೊಸ ಆಯಾಮವನ್ನೇ ಸೃಷ್ಟಿಸಿದರು. ತಮ್ಮ ವಿಷಮದಲ್ಲೇ ಒಂದು ಸಮವನ್ನು, ಲಯ ನಿಖರತೆಯನ್ನು ತೋರಿಸಿಕೊಟ್ಟ ಭೀಮ ಭಟ್ಟರನ್ನು ಅನುಕರಿಸಲು ಬಹುಶಃ ಯಾರಿಗೂ ಸಾಧ್ಯವಾಗಲಿಲ್ಲ. ನನ್ನ ಬಾಲ್ಯದಲ್ಲಿ ಎಳೆಯ ಕಣ್ಣುಗಳಿಂದ ಅವರನ್ನು ನೋಡಿದವನು ನಾನು. ನನ್ನ ಚೆಂಡೆ ವಾದನವನ್ನು ಕೇಳಿದ ಅವರು 'ಮಾಣಿ ತೊಂದರೆ ಇಲ್ಲೆ. ಉಶಾರಿದ್ದ' ಎಂದು ಹೇಳಿದ್ದು ನನ್ನಲ್ಲಿ ಧನ್ಯತೆಯನ್ನು ತಂದಿದೆ. ಅಸಮ ವಿಕ್ರಮ ಉಳ್ಳವನನ್ನು 'ಭೀಮ ಪರಾಕ್ರಮಿ' ಎನ್ನುವ ವಾಡಿಕೆಯಿದೆ. ಯಕ್ಷಗಾನ ಹಿಮ್ಮೇಳದಲ್ಲಿ ನಿಜಾರ್ಥದಲ್ಲಿ 'ಭೀಮ ಪರಾಕ್ರಮಿ' ಯಾಗಿದ್ದ ದಿವಾಣ ಭೀಮ ಭಟ್ಟರು ಹಿಮ್ಮೇಳವಾದಕರೆಲ್ಲರಿಗೂ ಪ್ರಾತಃಸ್ಮರಣೀಯರಾದ ದಿವ್ಯಚೇತನ ಎಂಬುದರಲ್ಲಿ ಸಂಶಯವಿಲ್ಲ.

# ದಿವಾಣ ಭೀಮ ಭಟ್ಟರ ಅಳಿಯನಾಗಿ

**ಡಾ. ಕೆ. ಶ್ಯಾಮ ಭಟ್ಟ, ಕೆರೆಕೋಡಿ**
ಕಲ್ಮಡ್ಕ ಗ್ರಾಮ
ಅಧ್ಯಕ್ಷರು – ಸಂಗಮ ಕಲಾಸಂಘ
ಕಲ್ಮಡ್ಕ

ಮಾವ ಶ್ರೀ ಭೀಮ ಭಟ್ಟರು ಈಗ ನೆನಪು ಮಾತ್ರ. ಅವರು ಸಜ್ಜನ, ಸ್ವಾಭಿಮಾನಿ ವ್ಯಕ್ತಿತ್ವದವರು. ಸಾದಾ ಉಡುಪು ಅವರಿಗೆ ಮೆಚ್ಚುಗೆ. ಹತ್ತಿ ಬಟ್ಟೆಯ ವೇಸ್ಟಿ, ಬಿಳಿ ಸಾದಾ ಬಟ್ಟೆಯ ನಿಲುವಂಗಿ, ಒಂದು ಹತ್ತಿ ಬಟ್ಟೆಯ ಶಾಲು ಇಷ್ಟೇ ಅವರ ಉಡುಪುಗಳು. ಅದಕ್ಕೆ ಕೈ ಇಸ್ತ್ರಿ ಮಾಡಿ ಅವರೇ ಇಡುತ್ತಿದ್ದರು. ಬಟ್ಟೆಗಳನ್ನು ಕೂಡಾ ಅವರೇ ತೊಳೆಯುತ್ತಿದ್ದರು. ಅತ್ತೆಯವರಿಗೆ ಹೊರೆಯಾದವರಲ್ಲ. ಮಕ್ಕಳಿಗೆ ಆದರ್ಶ ಪ್ರಾಯರಾಗಿದ್ದರು. ಮನೆಯ ಸದಸ್ಯರ ಬಗ್ಗೆ ವಿಶೇಷವಾದ ಕಾಳಜಿ, ಚಿಂತನೆಗಳು ಅವರಿಗಿತ್ತು. ಶ್ರೀ ಭೀಮಭಟ್ಟ ಹಾಗೂ ಶ್ರೀಮತಿ ತಿರುಮಲೇಶ್ವರಿ ದಂಪತಿಯ ಹಿರಿಯಮಗಳು ದ್ರೌಪದಿ ಯನ್ನು ನನಗೆ ಮದುವೆಯಾಗಿತ್ತು. ನನ್ನ ತಂದೆ ಪಂಡಿತ ಕೆರೆಕೋಡಿ ಗಣಪತಿ ಭಟ್ಟರವರು ಆಯುರ್ವೇದ ಪಂಡಿತರಾಗಿದ್ದರು. ಅವರ ಹಿರಿ ಮಗನಾದ ನಾನು ಆಯುರ್ವೇದಿಕ್ ವೈದ್ಯನಾಗಿದ್ದೇನೆ. ತಂದೆಯವರೂ ಮನೆಯಲ್ಲೇ ವೈದ್ಯಕೀಯ ಸೇವೆ ನೀಡುತ್ತಿದ್ದರು. ನಾನು ಬಾಳಿಲ ಎಂಬಲ್ಲಿ ಕ್ಲಿನಿಕ್ ಇಟ್ಟುಕೊಂಡಿದ್ದೆ. ಈ ದಿವಾಣ ಹಾಗೂ ಕೆರೆಕ್ಕೋಡಿ ಸಂಬಂಧ ಬೆಸೆಯಲು ಕಾರಣವೇ ಯಕ್ಷಗಾನ. ನನ್ನ ತಂದೆಯವರು ಸಂಗಮ ಕಲಾ ಸಂಘ ಕಲ್ಮಡ್ಕ ಇದರ ಸ್ಥಾಪಕರು ಹಾಗೂ ಕಲಾ ಪೋಷಕರು. ಈ ಸಂಸ್ಥೆಯ ನೆಲೆಯಲ್ಲಿ ಯಕ್ಷಗಾನ ಬಯಲಾಟಗಳು, ತಾಳಮದ್ದಳೆ, ನಾಟಕಗಳನ್ನು ನಡೆಸುತ್ತಿದ್ದರು. ಇದರಲ್ಲಿ ಭಾಗವಹಿಸಲು ಹಿರಿಯ ಕಲಾವಿದರು ಬರುತ್ತಿದ್ದರು. ಭಾಗವತರು, ಹಿಮ್ಮೇಳ, ಮುಮ್ಮೇಳ, ಕಲಾವಿದರು ಹಾಗೂ ಹಿಮ್ಮೇಳಕ್ಕೆ ಕುದುರೆಕೋಡ್ಲು, ನಿಡ್ಲೆ, ದಿವಾಣ ಹಾಗೂ ಚಿಪ್ಪಾರು ಮುಖ್ಯವಾಗಿದ್ದರು. ಹೆಚ್ಚಿನ ಎಲ್ಲಾ ಕಲಾವಿದರು ನಮ್ಮ

ಮತ್ತು ಪದ್ಯಾಣ ತಿರುಮಲೇಶ್ವರ ಭಟ್ಟರ ಆತಿಥ್ಯವನ್ನು ಸ್ವೀಕರಿಸಿದವರೇ. ಇದರಿಂದ ದಿವಾಣ ಕೆರೆಕ್ಕೋಡಿ ಸಂಬಂಧ ಗಟ್ಟಿಯಾಗಲು ಕಾರಣವಾಯಿತು. ನನಗೆ ಪ್ರಾಯ 24 ವರ್ಷ ವಾಗುತ್ತಲೇ ತಂದೆಯವರು ಹುಡುಗಿ ಅನ್ವೇಷಣೆಗೆ ಪ್ರಾರಂಭಿಸಿದ್ದರು. ಒಂದೆರಡು ಕಡೆ ನೋಡಿದರೂ ಕೂಡಿ ಬಂದಿರಲಿಲ್ಲ. ದಿವಾಣ ಭೀಮ ಭಟ್ಟರಿಗೆ ಮಗಳಿರುವ ಬಗ್ಗೆ ನಮಗೆ ತಿಳಿದೂ ಇರಲಿಲ್ಲ. ಆ ಸಂದರ್ಭದಲ್ಲಿ ತಂದೆಯವರ ಸ್ನೇಹಿತರೊಬ್ಬರು ಭೀಮ ಭಟ್ಟರಿಗೆ ಪ್ರಾಯಕ್ಕೆ ಬಂದ ಹುಡುಗಿ ಇದ್ದಾಳೆಂಬ ವಿಚಾರವನ್ನು ತಿಳಿಸಿದ್ದರು. ದಿವಾಣರನ್ನು ಮೊದಲೇ ಚೆನ್ನಾಗಿ ತಿಳಿದ ತಂದೆಯವರು ಕೂಡಲೇ ಅವರ ಮೂಲಕ ಜಾತಕ, ಫೋಟೋ ತರಿಸಿಕೊಂಡರು. ಅದು ಹೊಂದಾಣಿಕೆಯಾದ್ದರಿಂದ ಸ್ನೇಹಿತರೊಂದಿಗೆ ಹುಡುಗಿ ನೋಡಲು ಹೊರಟಿದ್ದರು.

ಬಸ್ಸಿನಲ್ಲಿ ಪಿಟ್ಲ ದಾಟಿ ಕೆಲಿಂಜ ಎಂಬಲ್ಲಿ ಇಳಿದು ನಡೆದುಕೊಂಡೇ ಹೋಗಬೇಕು. ದಿವಾಣ ಮನೆಗೆ ಒಂದೆರಡು ಫರ್ಲಾಂಗು ದೂರ ಇರುವಾಗ ತೋಟದೊಳಗೇ ನಡೆದು ಹೋಗಬೇಕು. ದಿವಾಣ ಅಡಿಕೆ ತೋಟದಲ್ಲಿ 3 ಜನ ಹುಡುಗಿಯರು ಹಾಳೆ ಚಿಳ್ಳಿಯಿಂದ ನೀರು ಹಾಕುತ್ತಿದ್ದರು. ಮಧ್ಯಾಹ್ನ 11.30 ಗಂಟೆ ಸಮಯ, ಉರಿಬಿಸಿಲಿಗೆ ನಡೆದ ಇವರಿಗೆ ತೋಟ ತಂಪಾಗಿತ್ತು. ಹಾಗೂ ಸ್ನೇಹಿತರು ತಂದೆಯವರಿಗೆ ಮತ್ತಷ್ಟೂ ತಂಪಾದ ವಿಷಯ ತಿಳಿಸಿದರು. ತೋಟಕ್ಕೆ ನೀರು ಹಾಕುತ್ತಿರುವವರು ದಿವಾಣ ಭೀಮ ಭಟ್ಟರ ಮಕ್ಕಳೇ ಎಂದು. ಆಗ ತಂದೆಯವರ ಆನಂದಕ್ಕೆ ಕೊನೆ ಇರಲಿಲ್ಲ. ಚಿಕ್ಕ ಅಡಿಕೆ ತೋಟವಾದರೂ ಕೃಷಿ ಚೆನ್ನಾಗಿತ್ತು. ತೋಟ ತಂಪಾಗಿತ್ತು. ಮನಸ್ಸು ತಂಪಾಯಿತು. ತಂದೆಯವರು ಮನಸ್ಸಿನಲ್ಲಿಯೇ ಚಿಂತಿಸುತ್ತಾ ಅವರ ಚಿಕ್ಕ ಅಡಿಕೆ ತೋಟದ ಬಗ್ಗೆ ಸುಂದರ ಹುಡುಗಿಯರ ಬಗ್ಗೆ ಆಲೋಚಿಸುತ್ತಾ ಸಾಗುತ್ತಿದ್ದರು. ಇವರ ಮನೆಯಲ್ಲಿ ಹತ್ತು ಜನ ಸದಸ್ಯರಿದ್ದರು. ಅವರ ಖರ್ಚು, ಮಕ್ಕಳ ವಿದ್ಯಾಭ್ಯಾಸ ಉಪನಯನ, ಮದುವೆ ಇತ್ಯಾದಿಗಳು ನಡೆಯಬೇಕು. ಆಗ ಜೀವನ ಕಷ್ಟಕರವಾಗಿತ್ತು. ಭೀಮಭಟ್ಟರ ಮೊದಲ ಪತ್ನಿಯ ಮಗಳನ್ನು ಕೊಟ್ಟು ಮದುವೆಯಾಗಿತ್ತು. ಹುಡುಗಿಯರಿಗೆ ಬೇಕಾದಷ್ಟು ಚಿನ್ನಾಭರಣ ಕೊಟ್ಟು ಮದುವೆ ಮಾಡಿದ್ದರು. ಮನೆಯ ಎಲ್ಲಾ ಮಕ್ಕಳು ಮಾವನರಿಗೆ ಬೆಂಬಲವಾಗಿ ನಿಂತು ಕೆಲಸ ಮಾಡುತ್ತಿದ್ದರು. ಅವರ ಎಲ್ಲಾ ಕೆಲಸಗಳು ಅಡಿಕೆ ತೆಗೆಯುವುದು ತೋಟಕ್ಕೆ ಔಷಧಿ ಸಿಂಪಡಿಸುವುದು ಹೊರತು ಇತರ ಕೆಲಸಗಳು ವಿದ್ಯಾಭ್ಯಾಸದ ಜೊತೆಗೆ ಮಕ್ಕಳಿಂದಲೇ ಆಗುತ್ತಿತ್ತು. ಗಂಡು ಹುಡುಗರಿಗೆ ಉದ್ಯೋಗಕ್ಕೆ ಹೋಗುವಷ್ಟು ವಿದ್ಯಾಭ್ಯಾಸ ಕೊಡಿಸಿದ್ದರು. ಅವರೆಲ್ಲರಿಗೂ ಉದ್ಯೋಗ ಸಿಗಲು ಕಾರಣ ಮಾವನವರ ಕಲಾ ತಪಸ್ಸು. ಮಕ್ಕಳೆಲ್ಲರೂ ಮಾವನವರ ಆದರ್ಶಗಳನ್ನು ಮರೆಯದೆ ಅನುಸರಿಸಿದವರು. ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದಾರೆ.

ಎಂತಹ ಕಷ್ಟದ ಸಂದರ್ಭದಲ್ಲಿಯೂ ಇತರರಲ್ಲಿ ಕೈ ಚಾಚಿದವರಲ್ಲ. ತಲೆತಗ್ಗಿಸಿದವರೂ ಅಲ್ಲ. ಅವರು ನಮ್ಮೆಲ್ಲರಿಗೂ ಅಪರೂಪದ ಶಕ್ತಿ ಮತ್ತು ಮಹಾನ್ ವ್ಯಕ್ತಿ. ಅವರ ಅಳಿಯನಾಗಿ ಸಂತೋಷ, ಹೆಮ್ಮೆಗಳೆರಡೂ ನನಗೆ ಇದೆ.

ಯಕ್ಷಗಾನ ಕಲಾ ಜಗತ್ತಿನಲ್ಲಿ ಅವರು ಹಿಮ್ಮೇಳ ಸಾಹಿತ್ಯ ರತ್ನಗಳಲ್ಲೊಬ್ಬರು. ಹಿರಿಯ ಅನುಭವಿಗಳ ಪ್ರಕಾರ ಅವರನ್ನು ಹಿಮ್ಮೇಳ ಲಯತಜ್ಞರೆನ್ನುವರು. ಅವರು ವಿಷಮ ಪೆಟ್ಟುಗಳ

ಜನಕ. ಕುದುರೆಕೋಡ್ಲು, ನೆಡ್ಲೆ, ದಿವಾಣ, ಚಿಪ್ಪಾರು ಇವರೆಲ್ಲಾ ಯಕ್ಷಗಾನ ಕಲೆಯ ಸಿದ್ಧಿ ಪುರುಷರು, ದಿವಾಣರು ಯಕ್ಷಗಾನ ಹಿಮ್ಮೇಳ ಕಲಾ ಸಂಶೋಧಕರು. ಈ ಹಿರಿಯ ಮೇರು ಕಲಾವಿದರು ನಮ್ಮ ಮಣ್ಣಿನಲ್ಲಿ ನಡೆದಾಡಿದ್ದರಿಂದಲೇ ಇಂದು ಯಕ್ಷಗಾನ ಕಲೆ ಬೆಳಿದಿದೆ, ಉಳಿದಿದೆ. ದಿವಾಣ ಭೀಮಭಟ್ಟರು ಮುಂದಿನ ಕಲಾವಿದರಿಗೆ ಆದರ್ಶ ಪ್ರಾಯರು. ಇವರು ತುಂಬಾ ಸರಳ, ಸಜ್ಜನ, ಸರಸ ಸಲ್ಲಾಪಗಳ ಅಭಿವ್ಯಕ್ತಿಯ ವ್ಯಕ್ತಿ. ಅವರು ಇತರರಿಗೆ ಸದಾ ಒಳ್ಳೆಯದನ್ನೇ ಬಯಸುತ್ತಿದ್ದವರು. ಇವರ ಮಾತಿನಲ್ಲಿ ತಮಾಷೆಯಿಂದದೊಡಗೂಡಿದ ಪ್ರೀತಿ ಇರುತ್ತಿತ್ತು. ನಾವು ಅವರಿಂದ ನೆಮ್ಮದಿಯ ಕಲೆಯನ್ನು ಕಲಿತೆವು. ಅಪರೂಪದಲ್ಲಿ ಅವರ ಸಿಟ್ಟನ್ನೂ ನಾವು ಕಂಡಿದ್ದೆವು. ಅದರ ಮರ್ಮವನ್ನು ತಿಳಿಯಲು ನಮಗೆ ಕೆಲ ದಿವಸಗಳೇ ಬೇಕಾಗುತ್ತಿದ್ದವು.

ಮಾವನವರು ಹಿಮ್ಮೇಳದ ಗುರುವಾಗಿ ಅನೇಕ ಶಿಷ್ಯರನ್ನು ರೂಪಿಸಿದವರು. ಬಡತನ, ಕಷ್ಟಕಾರ್ಪಣ್ಯಗಳಲ್ಲೇ ಬೆಳೆದ ಇವರು ಇದ್ದುದರಲ್ಲಿ ತೃಪ್ತಿಪಟ್ಟ ಸರಳ ಜೀವಿ. ಬಡತನವಿದ್ದರೂ ಹೃದಯ ಶ್ರೀಮಂತಿಕೆಯಿಂದ ಮಕ್ಕಳೆಲ್ಲರನ್ನು ಅಕ್ಕರೆಯಿಂದ ಬೆಳೆಸಿ ಅವರೆಲ್ಲರ ಸುಸಂಸ್ಕೃತ ಜೀವನಕ್ಕೆ ದಾರಿಯನ್ನು ಕಲ್ಪಿಸಿದವರು.



# ಹಿರಿಯ ಮದ್ಲೆಗಾರ ದಿವಾಣ ಭೀಮ ಭಟ್ಟರು

**ಭಾಗವತ ಪುತ್ತಿಗೆ ರಘುರಾಮ ಹೊಳ್ಳ**
**ಭಾಗವತರು**
**ಲ್ಯಾಂಡ್ ಲಿಂಕ್ಸ್ ಟೌನ್‌ಶಿಪ್**
**ಕೆಳಗಿನ ಕೊಂಚಾಡಿ**
**ಮಂಗಳೂರು – 575 008**

ಯಕ್ಷಗಾನರಂಗದಲ್ಲಿ ಹಿಮ್ಮೇಳ ವಿಭಾಗದಲ್ಲಿ ಮುಂದಿನ ಸಾಲಿನಲ್ಲಿ ಭಾಗವತರ ನಂತರ ಕಾಣಿಸುವುದು ಮದ್ಲೆಗಾರರ ಹೆಸರು. ಮದ್ಲೆಗಾರರು ಎಂದರೆ ಚೆಂಡೆ ಮದ್ದಳೆಗಳಲ್ಲಿ ನುರಿತವರಾಗಿರಬೇಕು. ಭಾಗವತಿಕೆ ಮಾಡಲೂ ಗೊತ್ತಿರಬೇಕು. ಪ್ರಸಂಗದ ಮಾಹಿತಿಯೂ ಇರಬೇಕು. ಅಂತಹ ನುರಿತ ಶ್ರೇಷ್ಠ ಮದ್ಲೆಗಾರರ ಸಾಲಿನಲ್ಲಿ ಕಾಣಿಸುವುದು – ದಿವಾಣ ಭೀಮ ಭಟ್ಟರು. ಹಿಂದಿನ ಹಳೆಯ ಮದ್ಲೆಗಾರರು ಎಂದು ಹೆಸರಿರುವವರು ಕೆಮ್ಮಣ್ಣು ನಾರಾಯಣಪ್ಪಯ್ಯ, ಕುದ್ರೆಕೂಡ್ಲು ರಾಮ ಭಟ್ಟರು, ಶಿವ ಮದ್ಲೆಗಾರರು, ನೆಡ್ಲೆ ನರಸಿಂಹ ಭಟ್ಟರು, ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು – ಅವರಷ್ಟೇ ನುರಿತವರು ದಿವಾಣ ಭೀಮ ಭಟ್ಟರು. ಇಷ್ಟೂ ಮಂದಿ ಮದ್ಲೆಗಾರರ ನುಡಿತಗಳು ಅವರುಗಳು ನುಡಿಸುವಾಗಲೇ ಯಾರೆಂದು ಗುರುತಿಸಬಹುದಾಗಿದೆ. ಅದರಲ್ಲೂ ಭೀಮ ಭಟ್ಟರ ನುಡಿತಗಳಿಗೆ ಪ್ರತ್ಯೇಕತೆ ಇದೆ. ಹಾಡುಗಾರನ ಲಯ ಗಟ್ಟಿ ಇಲ್ಲದಿದ್ದಲ್ಲಿ ಭೀಮಣ್ಣನ ಹಿಮ್ಮೇಳದಲ್ಲಿ ಹಾಡಲು ಕಷ್ಟವಾದೀತು. ಸಮವಾದ ಪೆಟ್ಟನ್ನು ವಿಷಮದಲ್ಲಿ ಬಾರಿಸುವುದು, ಪದ್ಯ ಸಾಹಿತ್ಯಕ್ಕೆ ಹಾಗೂ ಪದ್ಯಕ್ಕೆ ಬಾರಿಸುವುದು – ಒಂದು ವಿಶಿಷ್ಟ ರೀತಿಯೇ ಸರಿ.

ಅಗರಿ ಭಾಗವತರ ಪದ್ಯಕ್ಕೆ ಚೆಂಡೆ–ಮದ್ದಳೆ ನುಡಿಸುವುದನ್ನು ಕೇಳಿದ್ದೆ. ಆಗ ನನಗೆ ಎನಿಸಿದ್ದು–ಪದ್ಯ ಹೇಳಲು ಬಹಳ ಕಷ್ಟ ಹಾಗೂ ಲಯಜ್ಞಾನ ಬೇಕು. ಪದ್ಯ ಯಾವುದೇ ತಾಳದಲ್ಲಿ ಹೇಳಿದರೂ ಭಾಗವತನ ಮನೋಧರ್ಮ ಕೆಡದಂತೆ ಕೇಳುಗರಿಗೆ

ಕರ್ಷಣೀಯವಾಗಿ ನುಡಿಸುತ್ತಿದ್ದರು. ಮಳೆಗಾಲದಲ್ಲಿ ಕೆಲವೊಂದು ಕಡೆಯಲ್ಲಿ ನನಗೆ ವರು ಸಾಥಿಯಾಗಿ ಸಿಕ್ಕಿದ್ದುಂಟು. ಭಯದಿಂದ ಎಚ್ಚರದಿಂದ ಪದ್ಯ ಹೇಳಿದ್ದುಂಟು. ದ್ಯದಲ್ಲಿ ಕಸರತ್ತು ಮಾಡಿದರೂ ಅವರದೇ ಆದ ನುಡಿತದಲ್ಲಿ ನುಡಿಸಿ ರಂಜಿಸುತ್ತಿದ್ದರು.

ಚೆಂಡೆಯ ಗಂಡುಗಲಿಯಾದ ಅವರ ಪ್ರಸಂಗ ಪೀಠಿಕೆಯನ್ನು ನಾನು ಎಡನೀರು ಮಠದಲ್ಲಿ ಕೇಳಿ ಚಕಿತನಾಗಿದ್ದೆ. ಸದಾ ವಿನೋದ ಪ್ರಿಯರೂ ಆದ ಭೀಮಣ್ಣನವರ ಮಾತು ನಮಗೆ ಅವರ ಚೆಂಡೆಯ ಹೊಡೆತದಂತೆ ಇತ್ತು. ಮಂಗಳೂರು ಪುರಭವನದಲ್ಲಿ ಆದ ಪ್ರದರ್ಶನದಲ್ಲಿ ಶ್ರೀನಿವಾಸ ಭಾಗವತರ ಭಾಗವತಿಕೆ – ಮದ್ದಳೆಯಲ್ಲಿ ಭೀಮ ಭಟ್ಟರು ಹಾಗೂ ಚೆಂಡೆ ವಾದನದಲ್ಲಿ ನೆಡ್ಲೆ ನರಸಿಂಹ ಭಟ್ಟರು – ಆ ದಿನದ ಜೋಡಿ ಈಗಲೂ ನನ್ನ ಕಣ್ಣಿಗೆ ಕಾಣುತ್ತಿದೆ. ಭಾಗವತರ ಹಾಡು ಈಗಲೂ ಕೇಳಿಸುತ್ತಿದೆ. ನೆಡ್ಲೆ, ದಿವಾಣರ ಹಿಮ್ಮೇಳ ಈಗಲೂ ನನ್ನ ನೆನಪಿನಲ್ಲಿ ಉಳಿಯುವಂತೆ ಮಾಡಿಬಿಟ್ಟಿದೆ. ಭೀಮ ಭಟ್ಟರು ಹಿಮ್ಮೇಳಕ್ಕೆ ಎಂದಾಗ ಸಾಧಾರಣ ಹೆಚ್ಚಿನ ಭಾಗವತರುಗಳು ಹೆದರುತ್ತಿದ್ದರು. ಯಾಕೆಂದರೆ ಅವರು 'ವಿಷಮ ಪೆಟ್ಟು' ಬಾರಿಸುತ್ತಾರೆ ಎಂಬ ವಾಡಿಕೆ ಮಾತಿತ್ತು. ಆದರೆ ನಿಜವಾಗಿಯೂ ಅದು ಸಮ ಪೆಟ್ಟುಗಳಾಗಿರುತ್ತದೆ. ಕಿನ್ನಿಗೋಳಿ ತಾಳಮದ್ದಳೆಯಲ್ಲಿ ನನ್ನ ಪದ್ಯಕ್ಕೆ ಮದ್ದಳೆಯನ್ನು ನುಡಿಸಿ ಪ್ರೇಕ್ಷಕರಿಂದ ಪ್ರಶಂಸೆ ಗಳಿಸಿದ್ದು ಈಗಲೂ ನೆನಪಿಸುತ್ತಾ ಇದ್ದೇನೆ. "ಏನು ಚಿಂತೆ ಬಂತು ಪಾರ್ಥ..." ಎಂಬಲ್ಲಿಂದ "ರಣದೊಳೆಮ್ಮಂಥವರಿಗಾದರು..." ಯಲ್ಲಿಯವ ರೆಗೆ ತ್ರಿವುಡೆ, ಏಕ, ಅಷ್ಟ, ತಿತ್ತಿತ್ತೈ ತಾಳದಲ್ಲಿ ಸುಮಾರು ಇಪ್ಪತ್ತು ನಿಮಿಷಗಳಷ್ಟು ನನ್ನ ಮನೋಧರ್ಮವನ್ನು ಬಳಸಿ ಹಾಡಿದ್ದೆ. ಆ ದಿನದ ಅವರ ಮದ್ದಳೆಯ ಸೊಗಸು ಈಗಲೂ ನನಗೆ ಕೇಳಿಸುತ್ತಾ ಉಂಟು. ಎಷ್ಟೋ ಬಾರಿ ಅವರು ತಮಾಷೆಗೆ ನನ್ನಲ್ಲಿ ಹೇಳಿದ್ದುಂಟು – "ನೀನು ಒಂದಾರಿ ಎನಗೆ ಸಿಕ್ಕೇಕು ನಿನ್ನ ಕಡತೋಕ ಭಾಗವತನಾಂಗೆ ಪದ್ಯದಲ್ಲಿ ಸರ್ಕಸ್ ಮಾಡುತ್ತೆಯಲ್ಲ – ಎನಗೊಂದ್ವಾರಿ ನೋಡೇಕು" ಇಂತಹ ವಿನೋದದ ಪಂಥವನ್ನು ಕಿರಿಯವನಾದ ನನ್ನ ಮೇಲೂ ಮಾಡಿದ್ದರು! ಹಾಗಿದ್ದರೂ ಎಷ್ಟೋ ಬಾರಿ ನನಗೆ ಸಿಕ್ಕಿದಲ್ಲಿ ನನ್ನ ಯೌವ್ವನದ ಹುಡುಗಾಟಿಕೆಯಲ್ಲಿ ಅವರ ಮದ್ದಳೆಗೆ ನಾನು ಹಾಡಿದ್ದೇನೆ. ಅವರ ನುಡಿತಗಳು ನನ್ನನ್ನು ಹಾಡಿಸುವಂತೆ ಮಾಡಿದೆ.



# ಸಿದ್ಧ-ಸಾಧಕ

**ಕೆ. ಗೋವಿಂದ ಭಟ್ಟ**
ಕಲಾವಿದ
ಸಫಲಪುರ, ಅಂಚೆ-ಹೆದ್ದೂರು,
ತೀರ್ಥಹಳ್ಳಿ ತಾಲೂಕು,
ಶಿವಮೊಗ್ಗ ಜಿಲ್ಲೆ - 577 415

ಸಾಧಕರೆಲ್ಲ ಸಿದ್ಧರಾಗುವುದಿಲ್ಲ. ಸಿದ್ಧರೆಲ್ಲ ಪ್ರಸಿದ್ಧರೂ ಆಗುವುದಿಲ್ಲ. ಸಾಧಕನು ಪ್ರಸಿದ್ಧಿಯನ್ನು ಬಯಸುವುದೂ ಇಲ್ಲ. ಆದರೂ ಸಾಧನೆಯಲ್ಲಿ ಒಂದು ಸಮಾಧಾನ, ಸಂತೃಪ್ತಿ ಸಾಧಕನಿಗೆ ಲಭಿಸುತ್ತದೆ. ಯಾವುದರಲ್ಲಿ ಮನುಷ್ಯ ತನ್ನನ್ನು ತೊಡಗಿಸಿ ಕೊಳ್ಳುತ್ತಾನೋ, ಅದರಲ್ಲಿ ಮಾನಸಿಕ ನೆಮ್ಮದಿ ಸಂತೋಷ ದೊರಕುತ್ತದೆ. ಮದ್ದಳೆಗಾರ ದಿವಾಣ ಭೀಮಭಟ್ಟರು ಚೆಂಡೆ ಮದ್ದಳೆಗಳನ್ನು ನುಡಿಸುವ ಆಸಕ್ತರಿಗೆ ಹಾಡಲೂ ಹೇಳಿಕೊಡುತ್ತಿದ್ದ ಸಹೃದಯಿ ಕಲಾವಿದ, ಹಿರಿಯ ಚೇತನ. ಅವರ ಅನೇಕ ಶೋಧನೆ ಗಳಿಗೆ, ಸಿಕ್ಕಿದ ಮನ್ನಣೆ ಎಂದರೆ ಹಿರಿಯ ಬಲಿಪ ನಾರಾಯಣ ಭಾಗವತರು ಕಾರ್ಯಕ್ರಮ ಸಂಘಟಕರಲ್ಲಿ ಹಿಮ್ಮೇಳಕ್ಕೆ ದಿವಾಣ ಭೀಮ ಭಟ್ಟರನ್ನೇ ಹೇಳಿರಿ ಎಂದು ಸೂಚಿಸುತ್ತಿದ್ದರು.

ಲಯಜ್ಞತೆ, ತಾಳಬದ್ಧತೆ ಪ್ರಸಂಗಾವಧಾನತೆ ದಿವಾಣ ಭೀಮ ಭಟ್ಟರಲ್ಲಿ ಖಚಿತವಿತ್ತು. ಬಯಲಾಟಗಳಲ್ಲಿ ಬಳಸುವ ತಾಳಗಳನ್ನು ವೈವಿಧ್ಯಪೂರ್ಣವಾಗಿ ಹೇಗೆ ಉಪಯೋಗಿಸುತ್ತಿದ್ದ ರೆಂಬುದನ್ನು ಸರಿಯಾಗಿ ಕೇಳಿದವನು ಮರೆಯಲಾರ. ಒಂದು ತಾಳದ ನಡೆಯನ್ನು ಸಪ್ತ ತಾಳಗಳಲ್ಲಿಯೂ ಲೀಲಾಜಾಲವಾಗಿ ನುಡಿಸುವ ವೈಶಿಷ್ಟ್ಯ ಬೇರೆ ಮದ್ದಳೆವಾದಕರಲ್ಲಿ ಕಾಣಲಾರೆವು. ಕೇಳಲಾರೆವು. ಕಟೀಲು, ಕೂಡ್ಲು, ಮೂಲ್ಕಿ, ಇರಾ ಸೋಮನಾಥೇಶ್ವರ, ಧರ್ಮಸ್ಥಳಗಳಲ್ಲಿ ತಿರುಗಾಟ ಮಾಡಿದವರು. ನಾನೊಮ್ಮೆ ರಂಗ ಪ್ರವೇಶ ಮಾಡಿ ಕುಣಿದು, ನಿಂತಾಗ ಚೆಂಡೆ ಬಾರಿಸುತ್ತಿದ್ದವರು "ಮಂಗನಂತೆ ಹಾರಿದರೆ ಸಾಲದು ಎಂದು ಹೇಳಿದರು. ಮರುದಿನ

ವರಲ್ಲಿ ನೀವು ಹಾಗೆ ಏಕೆ ಹೇಳಿದಿರೆಂದು ಕೇಳಿದೆ. ತಾಳ್ಮೆಗೆಡದೆ ಸುದೀರ್ಘ ವಿವರಣೆ ನೀಡಿದರು. ಕುಣಿತ ಲಯ ಬದ್ಧವಾಗಿರಬೇಕು. ನರ್ತಕನಿಗೆ ತಾಳಜ್ಞಾನ ಸರಿಯಾಗಿ ಬೇಕು. ಆ ಬಗ್ಗೆ ಚಿಂತನೆ ಮಾಡು ಎಂದವರು ತಾಳಗಳ ಬಗೆಗೆ ಮಾಹಿತಿಯನ್ನು ನೀಡಿ, ಘಾತವೆಂದರೇನು? ಲಯವೆಂದರೇನು? ಇದನ್ನೆಲ್ಲಾ ಅಭ್ಯಾಸ ಮಾಡು ನಿನಗೆ ಸಂಶಯ ಬಂದಲ್ಲಿ ಕೇಳು ಎಂದರು. ಹುಸಿಪೆಟ್ಟುಗಳು ಯಾವುವು, ಯಕ್ಷಗಾನ ಹಾಡುಗಳಲ್ಲಿ ಘಾತ ಕೊನೆಗೆ ಯಾಕೆ? ಎಂಬುದನ್ನೆಲ್ಲಾ ನಿಖರವಾಗಿ ಹೇಳಿ ಅವುಗಳು ಯಾಕೆಂದೂ ವಿವರಿಸಿದ್ದರು. ಮುಂದೆ ಧರ್ಮಸ್ಥಳದ ಲಲಿತ ಕಲಾಕೇಂದ್ರದಲ್ಲಿ ಅಧ್ಯಾಪಕನಾದಾಗ ನನಗೆ ಬಹಳ ಪ್ರಯೋಜನ ವಾಯ್ತು.

ನಾನು ಕೋಡಪದವಿಗೆ ಶಾಲೆಗೆ ಹೋಗುತ್ತಿದ್ದಾಗ 1946ರಲ್ಲಿ ಕುಕ್ಕೆ ಮನೆ ಸುಬ್ಬಣ್ಣ ಭಟ್ಟರಲ್ಲಿ ನಡೆದ ತಾಳಮದ್ದಳೆ, 'ನಾಗಾಸ್ತ್ರ ಕುಂಭಕರ್ಣ ಕಾಳಗ'. ಕಲ್ಲುಗುಂಡಿ ತಿಮ್ಮಣ್ಣ ಭಟ್ರು, ದರ್ಭೆ ವೆಂಕಟ್ರಮಣ ಭಟ್ರು, ಪಂಜಿಗದ್ದೆ ಗಣಪತಿ ಭಟ್ರು, ಕರ್ಗಲ್ಲು ಸುಬ್ಬಣ್ಣ ಭಟ್ರ ಇತ್ಯಾದಿ ಅರ್ಥದಾರಿಗಳು. ಪರಮಕೃಷ್ಣ ಭಟ್ಟರ ಹಾಡುಗಾರಿಕೆ. ದಿವಾಣ ಭೀಮ ಭಟ್ರ ಚೆಂಡೆ. ಕಿನಿಲ ನಾರಾಯಣ ಭಟ್ಟರ ಮದ್ದಳೆ, ಅರ್ಥದಾರಿಗಳು ಹೇಳುವುದೇನೆಂದು ನನಗಾಗ ತಿಳಿಯದಿದ್ದರೂ, ಚೆಂಡೆ ಮದ್ದಳೆಗಳ ಶಬ್ದ ಬೆರಗಾಗುವಂತೆ ಮಾಡಿತ್ತು. ಧ್ವನಿವರ್ಧಕಗಳು, ಬೆಳಕಿನ ವ್ಯವಸ್ಥೆ ಈಗಿನಂತಿಲ್ಲವಾದರೂ ಹಾಡು, ಚೆಂಡೆ-ಮದ್ದಳೆಗಳ ಅಬ್ಬರ ಅರ್ಥಧಾರಿಗಳ ಮಾತುಗಳು ಶ್ರೋತೃಗಳನ್ನು ಮುಟ್ಟಿ ತಟ್ಟಿ ಎಲ್ಲರನ್ನೂ ಜಾಗೃತರಾಗುವಂತೆ ಮಾಡುತ್ತಿದ್ದವು.

ಚೆಂಡೆಯ ಬಡಿತಗಳು ದೂರದವರೆಗೆ ಕೇಳುತ್ತಿದ್ದುದರಿಂದ ಆಟಕ್ಕೆ ಬರುವವರಿಗೆ ಆ ಧ್ವನಿಯನ್ನಾಲಿಸಿ ಇಂತಹ ಪಾತ್ರ ಪ್ರವೇಶವಾಯ್ತೆಂದು ತಿಳಿಯಬಹುದಾಗಿತ್ತು. ರಾಕ್ಷಸ, ಪೀಠಿಕೆ ವೇಷ, ಇದಿರು ವೇಷ, ಪುಂಡುವೇಷ, ಬಲಗಳು ಇತ್ಯಾದಿ ಪಾತ್ರ ಪ್ರವೇಶಕ್ಕೆ ಚೆಂಡೆಯ ನುಡಿತಗಳೇ ಪ್ರತ್ಯೇಕತೆಯನ್ನು ಸೂಚಿಸುತ್ತಿದ್ದುವು. ಬಡಗು ತಿಟ್ಟಿನ ಪ್ರಸಿದ್ಧ ಮದ್ದಳೆವಾದಕರಾದ ಹಿರಿಯಡ್ಕ ಗೋಪಾಲ ರಾಯರು, ಬೆಳಿಂಜೆ ತಿಮ್ಮಪ್ಪ ನ್ಯಾಕರು ಭೀಮಭಟ್ಟರ ಸ್ನೇಹಿತರು ಅವರೊಂದಿಗೆ ಮದ್ದಳೆ ವಾದನದ ನಡೆಗಳ ಬಗ್ಗೆ ಚರ್ಚಿಸುತ್ತಿದ್ದರು. ಹಾಗೆಯೇ ಬಡಗಿನ ಅನೇಕ ನುಡಿತಗಳನ್ನು ಅಭ್ಯಾಸ ಮಾಡಿದ್ದರು. ತೆಂಕಿನಲ್ಲಿಯೂ ಆ ತತ್ಕಾರಗಳು ಹೇಗೆ ಪರಿಣಾಮ ಬೀರುತ್ತವೆ ಎಂಬುದನ್ನು ತೋರಿಸಿದ್ದರು.

ಸಂಗೀತ ಶಾಸ್ತ್ರದಲ್ಲಿ ಹೇಳುವ ತ್ರಿಸ್ರ, ಚತುರಸ್ರ, ಮಿಶ್ರ, ಖಂಡ, ಸಂಕೀರ್ಣ, ಜಾತಿ ಭೇದಗಳನ್ನು ಅರಿತು ಆ ನಡೆಗಳನ್ನು ಯಕ್ಷಗಾನದಲ್ಲಿ ಹೇಗೆ ಬಳಸಬಹುದು ಎಂದು ಬಲ್ಲ ಮಹಾನುಭಾವರು. ಇದರಿಂದ ಅವರ ಚಿಕಿತ್ಸಕ ಬುದ್ಧಿ. ಶೋಧನಾ ಕ್ರಮಕ್ಕೆ ಬಂದ ಹೆಸರು 'ವಿಷಮ ವೀರ'ನೆಂದು ಅಥವಾ ವಿಷಮ ಮದ್ಲೆಗಾರನೆಂದು. ಅವರ ಸಜ್ಜನಿಕೆಯನ್ನು, ಹೃದಯ ವೈಶಾಲ್ಯವನ್ನು, ಕಲಾಸಕ್ತಿಯನ್ನು ತಿಳಿದವರು ವಿರಳ. ದಿವಾಣ ಭೀಮ ಭಟ್ಟರ ನೆರೆಕರೆಯವನಾಗಿ ತಿರುಗಾಟದಲ್ಲಿ ಒಡನಾಡಿಯಾಗಿ, ಜನ್ಮಶತಾಬ್ದಿಯ ನೆನಕೆಗಳು.

# ಮಾತೃ ದೇವೋಭವ,
# ಪಿತೃ ದೇವೋಭವ.

**ದಿವಾಣ ಗೋವಿಂದ ಭಟ್ಟ**
'ಅನನ್ಯ'
ಶಕ್ತಿನಗರ
ಮಂಗಳೂರು - 575 015

ತೆಂಕುತಿಟ್ಟಿನ ಯಕ್ಷಗಾನದ ಚೆಂಡೆ ಮತ್ತು ಮದ್ದಳೆ ಎರಡರಲ್ಲೂ ಮಿಂಚಿದ ನನ್ನ ತಂದೆಯವರು ತನ್ನದೇ ಆದ ವಿಶೇಷ ನಡೆಯಿಂದ ಚಿರಂತರವಾಗಿ ನೆನಪಿಡುವಂತೆ ಮಾಡಿದ್ದಾರೆ. ಯಕ್ಷಗಾನದಲ್ಲಿ ಯಾವಾಗಲೂ ತನ್ನ ಕಾಯಕವನ್ನು ಮುಡಿಪಾಗಿಟ್ಟು, ಹಣದ ಮೋಹ ಅಥವಾ ರಾಜಕೀಯದಲ್ಲಿ ತೊಡಗಿಸಿಕೊಳ್ಳದೇ ನೇರ-ನಿರ್ಭೀತಿಯಿಂದ ತಾಳ-ಲಯವನ್ನು 'ಇದಮಿತ್ಥಮ್' ಎಂದು ನಿಖರವಾಗಿ ಹೇಳಬಲ್ಲ ಓರ್ವ ಮೇರು ಕಲಾವಿದರಾಗಿದ್ದರು. ಆದರೆ ತನ್ನ ಅವಕಾಶಕ್ಕಾಗಿ ಯಾರದೇ ಬೆನ್ನು ಹತ್ತಿ ಹೋಗದ ವ್ಯಕ್ತಿಯಾಗಿದ್ದರು. ಯಕ್ಷಗಾನದಲ್ಲಿ ಕಲಿತು ಆಯಿತು ಎಂದು ಇಲ್ಲ, ಅದು ನಿರಂತರ. ತಾನು ಮೊಗೆದಷ್ಟು ತನಗೆ ದೊರೆಯುತ್ತಾ ಹೋಗುತ್ತದೆ. ಅವರು ತನ್ನ ಇಳಿ ವಯಸ್ಸಿನಲ್ಲೂ ಸಾಯಂಕಾಲದ ಹೊತ್ತಿಗೆ ಒಂದು ತಾಳಕ್ಕೆ ಬೇರೆ ಬೇರೆ ನಡೆಗಳನ್ನು ಲಯಬದ್ಧವಾಗಿ ಸೃಷ್ಟಿಸುತ್ತಿದ್ದರು. ಆದ್ದರಿಂದಲೇ ಅವರು "ಲಯ ಬ್ರಹ್ಮ"ರಾದರು. ಅವರಿಗೆ ಶಿಷ್ಯರು ತುಂಬಾ ಕಡಿಮೆ ಇರಬಹುದು. ಆದರೆ ಅವರ ಶಿಷ್ಯರು ಕಲಾವಿದ ಎಂದು ಆಗಬೇಕಾದರೆ ಸರಿಯಾಗಿ ತಾಳ-ಲಯ ಇಲ್ಲದೇ ಮುಂದೆ ಪಾಠವನ್ನು ಹೇಳುತ್ತಿರಲಿಲ್ಲ. ಅವರ ಹೆಸರಿಗೆ ತಕ್ಕಂತೆ ಭೀಮ ಪೆಟ್ಟುಗಳು ಅವರದು. ಅದು ಅಷ್ಟು ಗಟ್ಟಿಯಾಗಿ ಹಸಿಮಣ್ಣಿಗೆ ಕಲ್ಲು ಹೊಡೆದಂತೆ.

ದಿವಾಣ ಮನೆತನದಲ್ಲಿ ಹಿರಿಮನೆಯಲ್ಲಿ ಬಹಳ ಬಡತನದಲ್ಲಿ ತನ್ನ ಸಂಸಾರವನ್ನು ಸಾಗಿಸಿಕೊಂಡು ಬಂದವರು ನಮ್ಮ ತಂದೆಯವರು. ಹಿರಿಯರ ಮಾತು ಎಂಬಂತೆ ಸರಸ್ವತಿ ಇರುವಲ್ಲಿ ಲಕ್ಷ್ಮೀ ಇರುವುದಿಲ್ಲ, ಲಕ್ಷ್ಮೀ ಇರುವಲ್ಲಿ ಸರಸ್ವತಿ ಇರುವುದಿಲ್ಲ.

ಇವರನ್ನು ಯಕ್ಷಗಾನದ ಕಲೆ ಬಹಳ ಎತ್ತರಕ್ಕೆ ಬೆಳೆಸಿತು. ಯಕ್ಷಗಾನದ ಚೆಂಡೆ ಮತ್ತು ಮದ್ದಳೆ ಎರಡರಲ್ಲೂ ಉತ್ತುಂಗಕ್ಕೆ ಏರಿದ ವ್ಯಕ್ತಿ. ಆದರೂ ಅವರು ಆಡಂಬರ ಇಲ್ಲದ ಬಹಳ ಸ್ನೇಹಪರ ವ್ಯಕ್ತಿಯಾಗಿದ್ದರು. ಯಾವುದೇ ಕಲಾವಿದನ ತಪ್ಪನ್ನು ಎತ್ತಿ ತೋರಿಸಿ ಸರಿಪಡಿಸಲು ಸಹಾಯ ಮಾಡುತ್ತಿದ್ದ ಅವರು ಯಾವತ್ತು ಸುಮ್ಮನೆ ವ್ಯಕ್ತಿಯನ್ನು ಹೊಗಳಿ ಅವರ ದಾರಿ ತಪ್ಪಿಸುವ ಕೆಲಸ ಮಾಡಿದವರಲ್ಲ.

ಯಕ್ಷಗಾನವನ್ನೇ ತನ್ನ ಮಕ್ಕಳಿಗಿಂತಲೂ ಜಾಸ್ತಿ ಪ್ರೀತಿಸುತ್ತಿದ್ದ ತಂದೆಯವರಿಗೆ ಯಾವುದೇ ಕಾರ್ಯಕ್ರಮಕ್ಕೆ ತಪ್ಪದೇ, ಒಂದು ಅಥವಾ ಎರಡು ಗಂಟೆ ಮೊದಲೇ ಅಲ್ಲಿಗೆ ಹಾಜರಾಗುತ್ತಿದ್ದರು. ಯಕ್ಷಗಾನದ ವ್ಯವಸ್ಥಾಪಕರಿಗೆ ಚೆಂಡೆಯವರು ಬರಲಿಲ್ಲಾ ಎಂಬ ಚಿಂತೆ ಇಲ್ಲ.

1972ನೇ ಇಸವಿ ನಾನು ನಾಲ್ಕನೇ ಕ್ಲಾಸಿನಲ್ಲಿ ಓದುತ್ತಿದ್ದೆ. ಆಗ ನಮ್ಮ ಊರಿಗೆ ದೂರವಾಣಿ ಸಂಪರ್ಕ ಇಲ್ಲದ ಕಾಲ. ಏನಿದ್ದರೂ ಪತ್ರ ಮುಖೇನವೇ ವ್ಯವಹಾರ. ತಂದೆಯವರಿಗೆ ಒಂದು ಕಾರ್ಯಕ್ರಮಕ್ಕೆ ಪತ್ರ ಬಂದಿತ್ತು. ಅಂಚೆಯವರು ಕೋಡಪದವು ಶಾಲೆಯಲ್ಲಿ ನನ್ನಲ್ಲಿ ಒಂದು ಪತ್ರ ಕೊಟ್ಟಿದ್ದರು. ನಾನು ನನ್ನ ಶಾಲೆಯ ಚೀಲದಲ್ಲಿ ಪುಸ್ತಕದ ಮಧ್ಯೆ ಇಟ್ಟಿದ್ದೆ. ಯಾವುದೇ ಪತ್ರ, ಪುಸ್ತಕ ಅಥವಾ ವಸ್ತುವನ್ನು ಕಂಡರೆ ಒಮ್ಮೆ ಅದನ್ನು ಓದಿ ಅಥವಾ ನೋಡಿ ಖುಷಿ ಪಡುತ್ತಿದ್ದ ವ್ಯಕ್ತಿ ನನ್ನ ಅಣ್ಣ 'ಒಪ್ಪಣ್ಣ' ಶಾಲೆಯಿಂದ ಹೊರಟು ಮೂರು ಮಾರ್ಗದ ಹತ್ತಿರ ಬರುವಾಗ ನನ್ನಲ್ಲಿ ಇರುವ ಪತ್ರದ ಬಗ್ಗೆ ಅವರಿಗೆ ಗೊತ್ತಾಯಿತು. ತೆಗೆದು ನೋಡುವ ಕುತೂಹಲ. ಒಮ್ಮೆ ಕೊಡು ಅಂದರು. ತೆಗೆದು ಹಿಂದೆ–ಮುಂದೆ ವಿಳಾಸ ನೋಡಿ ಅಲ್ಲಿಯೇ ಇಡಬೇಕಷ್ಟೆ. ಯಾಕೆಂದರೆ ಪತ್ರವನ್ನು ಒಡೆದು ನೋಡುವಷ್ಟು ಧೈರ್ಯ ನಮಗೂ ಇಲ್ಲ. ಅಣ್ಣ ತೆಗೆದುಕೊಂಡವರು ನನ್ನಲ್ಲಿ ಕೊಟ್ಟರೋ ಬಿಟ್ಟರೋ ಗೊತ್ತಾಗಲಿಲ್ಲ. ಆಟವಾಡುತ್ತಾ ಮನೆ ಹತ್ತಿರ ಬರುತ್ತಿರಬೇಕಾದರೆ ತಂದೆಯವರು ತೋಟದಲ್ಲೇ ಇದ್ದರು. ಕಾಗದ (ಪತ್ರ) ಇದ್ದ ಮಗಾ, ಎಂದು ಕೇಳಿದಾಗ ಒಂದು ಇದ್ದು ಹೇಳಿ. ಚೀಲ ತೆಗೆದು ನೋಡಿ, ಪುಸ್ತಕದ ಮಧ್ಯೆಯೂ ನೋಡಿದರೂ ಅಲ್ಲಿಯೂ ಸಿಗದೇ ಇರುವಾಗ ಅಣ್ಣನಲ್ಲಿ ಕೇಳಿದೆ. ನೀನು ತೆಗೆದುಕೊಂಡು ನೋಡಿದೆ ಅಲ್ವಾ? ಪುನಃ ಕೊಟ್ಟ ನೆನಪು ನನಗೂ ಇರಲಿಲ್ಲ. ನಾನು ಕೊಟ್ಟಿದ್ದೇನೆ ಎಂದು ಅಣ್ಣ. ಕೊಡಲಿಲ್ಲ ಎಂದು ನಾನು! ಈ ಮಧ್ಯೆ ತಂದೆಯವರಿಗೆ ಎಲ್ಲಿಂದ ಸಿಟ್ಟು ಬಂತೋ ತಿಳಿಯದು. ಅಲ್ಲಿಯೇ ಇದ್ದ ಮಂದಾರ ಸಸಿಯ ಒಂದು ಸಣ್ಣ ಕೊಂಬೆ ಮುರಿದು ಎರಡು ಅಣ್ಣನಿಗೆ ಒಂದು ನನಗೆ ಮನೆಯ ಅಂಗಳಕ್ಕೂ ಬಾರದೆ ಅಲ್ಲಿಂದಲೇ ನಮ್ಮ ಓಟ ಪುನಃ ಕೋಡಪದವಿಗೆ. ಎಲ್ಲಿ ನಾನು ಅವರಿಗೆ ಪತ್ರವನ್ನು ನೋಡಲು ಕೊಟ್ಟಿದ್ದನೋ ಅಲ್ಲಿಯೇ ಕೆಳಗೆ ಭೂತಸ್ಥಾನದ ಹತ್ತಿರ ಪತ್ರ ಮಲಗಿತ್ತು. ಬದುಕಿದೆಯೋ ಬಡಜೀವ ಎಂದು ಪತ್ರವನ್ನು ಮನೆಗೆ ತಂದು ತಂದೆಯವರಿಗೆ ಒಪ್ಪಿಸಿದ ಮೇಲೆಯೇ ತಂದೆಯವರಿಗೆ ಸಮಾಧಾನ.

ಆದರೆ, ಯಾಕೆ ಇಷ್ಟು ಸಿಟ್ಟು. ಒಂದು ಪತ್ರಕ್ಕೆ ಹೊಟ್ಟೆ ಹಸಿದ ಮಕ್ಕಳನ್ನು ಪುನಃ ಆಗಲೇ ಓಡಿಸಬೇಕಿತ್ತಾ? ತಾಯಿಯ ಪ್ರಶ್ನೆ. ಆ ಕಾಲದಲ್ಲಿ ಪತ್ರ ಬಂದ ದಿನಕ್ಕೆ ಕಾರ್ಯಕ್ರಮಕ್ಕೆ ಹೋಗದೇ ಇದ್ದರೆ ಬಹಳ ತೊಂದರೆ. ಯಾಕೆಂದರೆ ಕಾರ್ಯಕ್ರಮಕ್ಕೆ ಭಾಗವತರು ಒಬ್ಬರು. ಚೆಂಡೆವಾದನಕ್ಕೆ ಒಬ್ಬರು ಹಾಗೂ ಮದ್ದಳೆ ವಾದನಕ್ಕೆ ಒಬ್ಬರು. ಈಗಿನ ಹಾಗೆ ಎರಡು

ಅಥವಾ ಮೂರು ಜನ ಇರುತ್ತಿರಲಿಲ್ಲ. ಅದಕ್ಕಾಗಿಯೇ ಆ ಪತ್ರಕ್ಕೆ ಅಷ್ಟು ಮಹತ್ವ ಒಪ್ಪಿಕೊಂಡ ಕಾರ್ಯಕ್ರಮಕ್ಕೆ ಯಾವತ್ತು ತಪ್ಪಿದವರಲ್ಲ. ತನ್ನ ಸ್ವಂತ ಮಕ್ಕಳಿಗಾದರೂ ಶಿಸ್ತು ಎಂಬುದು ಮುಖ್ಯ ಎಂದು ತೋರಿಸಿಕೊಟ್ಟರು.

ಜೀವನದ ಹೆಚ್ಚು ಭಾಗವನ್ನು ಬಹಳ ಕಷ್ಟದಲ್ಲೇ ಸಾಗಿಸಿದವರು ನಮ್ಮ ತೀರ್ಥರೂಪರು. ತಂದೆಯವರು ಹೇಳಿದಂತೆ ಅವರ 14ನೇ ವಯಸ್ಸಿಗೇ ನಮ್ಮ ಅಜ್ಜ ಅರ್ಥಾತ್ ಅವರ ತಂದೆಯವರನ್ನು ಕಳಕೊಂಡರು. ಎಳೆ ವಯಸ್ಸಿನಲ್ಲಿಯೇ ಸಂಸಾರದ ಜವಾಬ್ದಾರಿ ಹೆಗಲ ಮೇಲೇರಿತು. ಆಗಲೇ ತನ್ನ ಕಲಿಯುವಿಕೆಗೆ ಮಂಗಳ ಹಾಡಿ ತನ್ನ ಚಿಕ್ಕಪ್ಪ ಅವರಿಂದ ಯಕ್ಷಗಾನದ ಹಾಡುಗಾರಿಕೆಯ ಪಾಠ ಪ್ರಾರಂಭಿಸಿದರಂತೆ. ಮುಂದೆ ಮದ್ದಳೆ ವಾದಕರಾಗಿ ಅಜ್ಜ ಬಲಿಪ ಭಾಗವತರೊಂದಿಗೆ ಪಳಗಿದರು. ನಂತರ ಚೆಂಡೆವಾದನದಲ್ಲೂ ತನ್ನದೇ ಆದ ಛಾಪು ಮೂಡಿಸಿದ ಮಹಾನ್ ಕಲಾವಿದರಾದರು. ಮುಂದೆ ಸಂಸಾರದಲ್ಲಿ ಮೊದಲ ವಿವಾಹವಾಗಿ ಓರ್ವ ಮಗಳನ್ನು ಪಡೆದರು. ಆದರೆ ಅನಾರೋಗ್ಯಕ್ಕೆ ತುತ್ತಾಗಿ ಅವರ ಪತ್ನಿ ದೈವಾಧೀನರಾದರು. ತದನಂತರ ಒಂದೇ ಮೇಳದಲ್ಲಿ ವ್ಯವಸಾಯ ಮಾಡುತ್ತಿದ್ದ ಓರ್ವ ಶ್ರೇಷ್ಠ ಯಕ್ಷಗಾನ ಸ್ತ್ರೀವೇಷಧಾರಿ ಕರ್ಗಲ್ಲು ಸುಬ್ಬಣ್ಣ ಭಟ್ಟರ ತಂಗಿಯನ್ನು ಎರಡನೇ ವಿವಾಹವಾದರು. ಅದರಲ್ಲಿ 5 ಗಂಡು ಮಕ್ಕಳು ಹಾಗೂ 3 ಹೆಣ್ಣು ಮಕ್ಕಳನ್ನು ಪಡೆದ ಶ್ರೀಯುತರು ಯೋಗ್ಯ ರೀತಿಯಲ್ಲೇ ತನ್ನ ಮಕ್ಕಳನ್ನು ಸಾಕಿದರು.

ನನ್ನ ತಂದೆಯವರ ಒಳ್ಳೆಯ ಗುಣಕ್ಕೆ ಇನ್ನೊಂದು ಉದಾಹರಣೆ ನನ್ನ ಅಜ್ಜನವರಿಗೆ ಎರಡು ಜನ ಗಂಡು ಮಕ್ಕಳು. ಅವರಲ್ಲಿ ಹಿರಿಯವರೇ ನನ್ನ ತೀರ್ಥರೂಪರು. ಸಣ್ಣ ಹಿಡುವಳಿಯಲ್ಲಿ ಅಣ್ಣ ತಮ್ಮಂದಿರಿಗೆ ಪಾಲಾಯಿತು. ಅದರಂತೆ ವರ್ಷಕ್ಕೆ 260 ಕೆ.ಜಿ. ಅಡಿಕೆ ಸುಲಿದದ್ದು ತನ್ನ ತಮ್ಮ ನಾರಾಯಣ ಭಟ್ಟರಿಗೆ ಕೊಡಬೇಕಿತ್ತು. ಆದರೆ ಚಿಕ್ಕಪ್ಪ ಆ ಅಡಿಕೆಯ ಹಕ್ಕನ್ನು ನೀರ್ಕಜೆ ಕೃಷ್ಣ ಭಟ್ಟರಿಗೆ ಮಾರಿದರು. ತದನಂತರ ಆ ಅಡಿಕೆಯನ್ನು ಕೃಷ್ಣ ಭಟ್ಟರಿಗೆ ಕೊಡಲು ಪ್ರಾರಂಭಿಸಿದರು. ಆದರೆ ಇಲ್ಲಿಯ ವಿಶೇಷ ಏನೆಂದರೆ ಅಡಿಕೆಯನ್ನು ನಾವು ಸುಲಿದು ಸ್ವಚ್ಛಗೊಳಿಸಿ ಬಿಳಿಗೋಟು ಅಡಿಕೆ ತಯಾರಾದ ಮೇಲೆ ಅದನ್ನು ಪುನಃ ನೆಲದಲ್ಲಿ ರಾಶಿ ಹಾಕಿ ಕೃಷ್ಣ ಭಟ್ಟರೇ ಅಥವಾ ಅವರ ಮಗ ಬಂದು ಆ ಅಡಿಕೆಯನ್ನು ಪುನಃ ಪರೀಕ್ಷಿಸಿ ತದನಂತರ ತೂಕ ಮಾಡಿ ಕೋಡಪದವಿಗೆ ನಾವೇ ಹೊತ್ತುಕೊಂಡು ಹೋಗಿ ಅವರ ಹೆಸರಿನಲ್ಲಿ ಸೊಸೈಟಿಗೆ ಹಾಕುತ್ತಿದ್ದೆವು. ಅಂದರೆ ಗೇಣಿ ಅಡಿಕೆಯನ್ನು ಕೊಡದವರು ಎಷ್ಟೊ ಮಂದಿ, ಕೊಟ್ಟ ಅಡಿಕೆಯನ್ನು ತೆಗೆದುಕೊಳ್ಳಬೇಕೆಂದು ಕೊಡುವವರು ಇನ್ನಷ್ಟು ಮಂದಿ. ಅಂತಹ ಕಾಲದಲ್ಲೂ ಈ ಪದ್ಧತಿಯಲ್ಲಿ ಪಾಲಿನ ಅಡಿಕೆಯನ್ನು ಕೊಡುತ್ತಿದ್ದ ವ್ಯಕ್ತಿ ಶ್ರೀಯುತರು. ಆಗುತ್ತಿದ್ದ ಸ್ವಲ್ಪ ಉತ್ಪತ್ತಿಯಲ್ಲೂ 1976ನೇ ಇಸವಿಯಲ್ಲಿ ಬಂದ ಕಾಯಿದೆಯಂತೆ ಉಳುವವನೇ ಹೊಲದ ಒಡೆಯ. ಆದರೂ ನಮ್ಮ ದನಿಯವರಾದ ಒಡಿಯಾರು ಶ್ರೀ ಭೀಮ ಭಟ್ಟರು ಗೇಣಿ ಕೊಡುವುದು ಸಾಕು ಎನ್ನುವವರೆಗೂ ಅವರಿಗೂ ಗೇಣಿ ಕೊಟ್ಟಿದ್ದರು.

ಸಹಜವಾಗಿಯೇ ತಂದೆಯವರಿಗೆ ನನ್ನಲ್ಲಿ ಹೆಚ್ಚಿನ ಪ್ರೀತಿ. ನಾನು ಕೊನೆಯ ಮಗ. ನಾನು ಪಿ.ಯು.ಸಿ. ಕಲಿಯುತ್ತಿರುವಾಗಲೇ ನಮ್ಮ ಮನೆಯ ವ್ಯವಹಾರವನ್ನು ಸ್ವಲ್ಪ ಸ್ವಲ್ಪ ಜವಾಬ್ದಾರಿಯಿಂದ ಮಾಡುತ್ತಿದ್ದೆ. ಪದವಿ ಓದುತ್ತಿರುವಾಗ ಪೂರ್ತಿ ಜವಾಬ್ದಾರಿಯನ್ನು

ನನಗೇ ನಿಭಾಯಿಸಲು ಕೊಟ್ಟಿದ್ದರು. ಅದನ್ನು ಆಗಲೇ ಸಮರ್ಥವಾಗಿ ನಿಭಾಯಿಸಿಗೊಂಡು ಬಂದು ನಮ್ಮ ಕೃಷಿಭೂಮಿಯನ್ನು ಒಂದಿಷ್ಟು ಅಭಿವೃದ್ಧಿ ಪಡಿಸಿ ಮನೆಗೂ ಬೇಕಾದ ವಿದ್ಯುಚ್ಛಕ್ತಿ ಹಾಗೂ ಉಳಿದ ಸೌಲಭ್ಯಗಳನ್ನು ಕಲ್ಪಿಸಿದೆ. 1976ನೇ ಇಸವಿಯಿಂದ ನನ್ನ ಅಣ್ಣ ಶ್ರೀ ಕೃಷ್ಣ ಭಟ್ಟರು ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗ ದೊರೆತ ಮೇಲೆ ನಮ್ಮ ಜೀವನಕ್ಕೆ ಒಂದು ರೀತಿಯ ತಿರುವು ಬಂತು. ನಾವು ಕೊಡುತ್ತಿದ್ದ ಒಂದು ಖಂಡಿ ಅಡಿಕೆ ಹಕ್ಕನ್ನು ಪುನಃ ನಮಗೇ ಸಿಗುವಂತಾಗಲು, ಅದರ ಮೌಲ್ಯವನ್ನು ಕೊಟ್ಟು ತನ್ನ ಕರ್ತವ್ಯವನ್ನು ನಿರ್ವಹಿಸಿದರು ಶ್ರೀ ಕೃಷ್ಣ ಭಟ್ಟರು. ಅವರ ದುಡಿತದಿಂದ ನಮ್ಮ ಜೀವನಮಟ್ಟ ಸ್ವಲ್ಪ ಸುಧಾರಿಸಿತು.

ಇನ್ನೊಂದು ಹೇಳಲೇಬೇಕಾದ ವಿಚಾರ 1988ನೇ ಇಸವಿ ನಮ್ಮ ಮನೆಯ ಮೇಲಂತಸ್ತಿನ ಹಂಚಿನ (ಮಾಡು) ಕೆಲವು ಪಕ್ಕಾಸು ಹಾಗೂ ಎಲ್ಲಾ ರೀಪುಗಳು ಗೆದ್ದಲು ಹಿಡಿದು ಹೋಗಿತ್ತು. ತಂದೆಯವರಿಗೆ ಅದನ್ನು ರಿಪೇರಿ ಮಾಡಬೇಕೆಂಬ ಆಸೆ. ಅದರಂತೆ ನಾನು ನಮ್ಮ ತೋಟದಲ್ಲಿ ಇರುವ ಹಲಸು-ಮಾವು ಹಾಗೂ ಶಾಂತಿಮರ ಕಡಿಯಲು ಹಾಗೂ ಅದನ್ನು ಭಾಗ ಮಾಡಲು ಪರವಾನಿಗೆ ತೆಗೆದುಕೊಂಡು ತುಂಡರಿಸಿ ನಮ್ಮ ಮನೆ ಹತ್ತಿರದ ನಾರಾಯಣ ಗೌಡರ ತೋಟದ ಕೆರೆಯಲ್ಲಿ ಹಾಕಿದ್ದೆವು. ನಮ್ಮ ಅಭಿವೃದ್ಧಿಯನ್ನು ಸಹಿಸದ ನಮ್ಮ ಹಿತಚಿಂತಕರು ಯಾರೋ ಗಾರ್ಡ್‌ಗಳಿಗೆ ಹೇಳಿರಬೇಕು. ನಾನು ನನ್ನ ಸಹಪಾಟಿಯ ಮನೆಯಲ್ಲಿ ಮದುವೆಗೆಂದು ಹೋಗಿ ಎರಡು ದಿನ ಇಲ್ಲದ ಸಮಯದಲ್ಲಿ ನಮ್ಮ ಮನೆಗೆ ಬಂದು ಗಾರ್ಡ್‌ಗಳು ಲೈಸನ್ಸ್ ಎಲ್ಲಿದೆ. ನಿಮ್ಮ ಮರ ಕಡಿದು ಕೆರೆಯಲ್ಲಿ ಹಾಕಿದ್ದಿರಲ್ಲಾ ಅದನ್ನು ನಾವು ವಶಪಡಿಸಿಕೊಳ್ಳುತ್ತೇವೆ ಎಂದು ಹಾಕಿದ ಅಂಗಿ, ಪ್ಯಾಂಟು ಕಳಚಿ ನಾರಾಯಣ ಗೌಡರ ಕೆರೆಯಲ್ಲಿ ಮುಳುಗಿ ಎದ್ದು ಎಲ್ಲಾ ಹಲಗೆ-ಪಕ್ಕಾಸು-ರೀಪುಗಳನ್ನು ಮೇಲಕ್ಕೆತ್ತಿ ಹಾಕಿದರು. ಅದಾಗಲೇ ಒಂದು ತಿಂಗಳಿನಿಂದ ನೀರಲ್ಲೆ ಇದ್ದ ಮರವನ್ನು ಹೊರ ತೆಗೆಯುವ ಸಮಯವೂ ಆಗಿತ್ತು. ತಂದೆಯವರಿಗೆ ಬಹಳ ತಲೆ ಬಿಸಿಯಾಯಿತು. ಏನು ಮಾಡಿದ್ದಾನೆ ಈ ಗೋವಿಂದ ಇವರು ಬರುವಾಗ ಅವನೂ ಇಲ್ಲ. ಎಲ್ಲಾ ಅವನಿಗೇ ಗೊತ್ತು ಎಂದು ಹೇಳಿ ಅದೇ ಗಾರ್ಡ್‌ಗಳಿಗೆ ಮಧ್ಯಾಹ್ನ ಕರೆದು ನಮ್ಮ ಮನೆಯಲ್ಲಿಯೇ ಊಟ ಹಾಕಿ ಕಳುಹಿಸಿದ್ದರು. ಆ ಸಮಯದಲ್ಲಿ ಯಾವುದೇ ದೂರವಾಣಿ ಸೌಲಭ್ಯವಿಲ್ಲದ ಕಾರಣ ರಾತ್ರೆ ಇಡೀ ನಿದ್ದೆ ಇಲ್ಲದೇ ಮರ್ಯಾದೆಗೆ ಅಂಜಿ ಚಿಂತಿಸುತ್ತಾ ಕಾಲ ಕಳೆದ ಅವರು ಬೆಳಿಗ್ಗೆ ನಾನು ಬಂದ ಕೂಡಲೇ ಬಹಳ ಅವಸರದಲ್ಲಿ ನನ್ನಲ್ಲಿ ವಿಷಯ ಹೇಳಿದರು. ಕೂಡಲೇ ತಂದೆಯವರಿಗೆ ಧೈರ್ಯ ಹೇಳಿದ ನಾನು ಎಲ್ಲಾ ವ್ಯವಸ್ಥೆಯೂ ಸರಿಯಾಗಿಯೇ ಇದೆ. ಅದಕ್ಕೆ ಲೈಸನ್ಸ್ ಎಲ್ಲವೂ ಇದೆ. ನೀವು ಏನೂ ಚಿಂತೆ ಮಾಡಬೇಡಿ ಎಂದೆ. ಅಲ್ಲಿಗೆ ಅವರಿಗೂ ಸಮಾಧಾನವಾಯಿತು. ನಮಗೂ ಅದನ್ನು ನೀರಿನಿಂದ ತೆಗೆಯುವ ಕೆಲಸ ಉಳಿಯಿತು ಎಂದೆ. ಮರುದಿವಸ ಫಾರೆಸ್ಟ್ ಆಫೀಸರ್‌ನ್ನು ಭೇಟಿ ಆದ ನಾನು ವಿಷಯವನ್ನು ಅವರಲ್ಲಿ ಹೇಳಿದೆ. ಅದಕ್ಕೆ ನೀವು ಅವರಲ್ಲಿ ಹೇಳಲಿಲ್ಲವೇ? ಎಂದು ಕೇಳಿದರು. ಅಗತ್ಯ ಏನಿದೆ? ನನ್ನ ಪ್ರಶ್ನೆ. ನಾವು ಕಾನೂನಿನ ಪ್ರಕಾರ ಏನೇನು ಬೇಕೋ ಅದನ್ನು ಮಾಡಿದ್ದೇವೆ. ಎಲ್ಲಾ ಮರಗಳನ್ನು ಪರೀಕ್ಷಿಸಿ ಅದಕ್ಕೆ ಪರ್ಮಿಟ್ ಕೊಟ್ಟವರು ನೀವೇ. ಅವರಿಗೆ ಯಾಕೆ ಹೇಳಬೇಕು? ಎಂದೆ. ಕೊನೆಗೆ ಗಾರ್ಡ್‌ಗಳಿಗೆ ಫಾರೆಸ್ಟ್ ಆಫೀಸರೇ

ತಿಳಿಹೇಳಿದರು. ಇದನ್ನು ಯಾಕೆ ಹೇಳಿದೆ ಅಂದರೆ, ನಮ್ಮದು ತಪ್ಪು ಎಂದು ಗ್ರಹಿಸಿ ನಮ್ಮ ಮರವನ್ನೇ ವಶಪಡಿಸಿಕೊಳ್ಳಲು ಬಂದ ಗಾರ್ಡ್‌ಗಳಿಗೆ ಊಟದ ಹೊತ್ತಿಗೆ ಅವರನ್ನು ಕರೆದು ಊಟ ಹಾಕಿದ ಮಹಾತ್ಮರು. ಅದೇ ಅವರ ವಿಶೇಷ. ಅಂತಹ ತಂದೆಯವರನ್ನು ಪಡೆದ ನಾವು ಮಕ್ಕಳು ಧನ್ಯರೆಂದೇ ತಿಳಿದು ನನ್ನ ಮನಸ್ಸಿನಲ್ಲಿ ಇಂತಹ ವ್ಯಕ್ತಿಯ ಸ್ಮರಣ ಸಂಚಿಕೆಯೊಂದು ಆಗಬೇಕೆಂದು ಗ್ರಹಿಸಿ ಅದಕ್ಕಾಗಿ ಮುಂದಡಿ ಇಟ್ಟಾಗ ನನಗೇ ಆಶ್ಚರ್ಯ ಆಗುವ ರೀತಿಯಲ್ಲಿ ಜನರ ಸಹಕಾರ, ಪ್ರೋತ್ಸಾಹ ದೊರಕಿದ್ದು ನೋಡಿದರೆ ನನಗೆ ಹೃದಯವೇ ತುಂಬಿ ಬರುತ್ತಿದೆ. ಈ ಕೆಲಸವನ್ನು ಮಾಡಲು ಮನಸ್ಸು ಹಾಗೂ ಶಕ್ತಿಯನ್ನು ಕೊಟ್ಟ ನಮ್ಮ ಮನೆ ದೇವರು ಶ್ರೀ ದುರ್ಗಾಪರಮೇಶ್ವರಿಗೆ, ಕಲಾಮಾತೆಗೆ ಹಾಗೂ ನನ್ನ ಹಿರಿಯ ಚೇತನಗಳಿಗೆ ಶಿರಸಾ ವಂದಿಸುತ್ತೇನೆ.

ಯಾವುದೇ ಪುರುಷನ ಏಳಿಗೆಯ ಹಿಂದೆ ಸ್ತ್ರೀಯ ಸಹಕಾರ ಇದ್ದೇ ಇರುತ್ತದೆ. ಹಾಗೆಯೇ ನಮ್ಮ ತೀರ್ಥರೂಪರು ಯಕ್ಷಗಾನದಲ್ಲಿ ಉತ್ತುಂಗಕ್ಕೆ ಏರಲು ನಮ್ಮ ಮಾತೃಶ್ರೀಯವರ ಕೊಡುಗೆಯೂ ಸ್ಮರಣೀಯ. ಬಡತನದ ಆ ಕಾಲದಲ್ಲಿ ತಂದೆಯವರ ಮೇಳದ ತಿರುಗಾಟದ ಆ ಸಮಯದಲ್ಲಿ ತನ್ನ 5 ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳನ್ನು ಸಾಕಿ ಸಲಹಿದ ಮಹಾತಾಯಿ. ಆ ಕಾಲದಲ್ಲಿ ಎಲ್ಲಾ ಕಷ್ಟಗಳನ್ನು ನುಂಗಿ ಸಾದು ಸ್ವಭಾವದಿಂದ ಎಲ್ಲರ ಮನದಲ್ಲೂ ಸ್ಮರಣೀಯವಾದ ನಮ್ಮ ಅಮ್ಮ ನಮಗೂ ಪ್ರಾತಃಸ್ಮರಣೀಯರು.

ಯಕ್ಷಗಾನ ಚೆಂಡೆ-ಮದ್ದಳೆಗಳಲ್ಲಿಯೇ ತನ್ನ ಜೀವನದ ಸ್ಫೂರ್ತಿಯನ್ನು ಕಂಡ ನಮ್ಮ ತೀರ್ಥರೂಪರ ಚೆಂಡೆಯನ್ನೇ 'ಬ್ರಾಂಡ್' ಆಗಿ ರಿಜಿಸ್ಟರ್ ಮಾಡಿ ನಾನು ತಯಾರಿಸುವ ಅನನ್ಯ ಪಶು ಆಹಾರಕ್ಕೆ ಇರಿಸಿದ್ದೇನೆ. ಇದು ಅವರಿಗೆ ಅರ್ಪಣೆ.

ಯಕ್ಷಗಾನಂ ಗೆಲ್ಗೆ!        ವಂದೇ ಗೋಮಾತರಮ್ !!



# ತೆಂಕುತಿಟ್ಟಿನ ತಾಳಗಳು ಮತ್ತು ಸಂಪ್ರದಾಯಗಳು

ದೀವಾಣ ಭೀಮ ಭಟ್ಟ

**ತಾಳಗಳು**

ಆದಿತಾಳ, ಚೌತಾಳ, ನಿಧಾನ ಝಂಪೆತಾಳ, ನಿಧಾನ ತ್ರಿವುಡೆತಾಳ, ಅಷ್ಟತಾಳ, ರೂಪಕತಾಳ, ಮಟ್ಟೆತಾಳ, ಏಕತಾಳ, ತಿತ್ತಿತ್ತೈ, ತ್ವರಿತ ಝಂಪೆತಾಳ, ತ್ವರಿತ ತ್ರಿವುಡೆತಾಳ ಮತ್ತು ಉಡಾಪೆ ತಾಳ – ಇವು ತೆಂಕುತಿಟ್ಟಿನ ಯಕ್ಷಗಾನದಲ್ಲಿ ಬಳಕೆಯಲ್ಲಿರುವ ತಾಳಗಳು. ಈ ತಾಳಗಳನ್ನು ಜಾಗಟೆಗೆ ಕೋಲಿನಿಂದ ಬಡಿದು ಹಾಡುವ ರೂಢಿಯಿರುವ ಕಾರಣ ತಾಳಗಳ ಬಡಿತಗಳಲ್ಲಿ ತೋರಿ ಬರುವ ಕ್ರಮಗಳನ್ನು ಕೆಳಗೆ ತೋರಿಸಲಾಗಿದೆ. ಅಲ್ಲದೆ ಕೆಲವು ಜಾತಿಯ ಪದ್ಯಗಳ ಗತಿಗಳನ್ನು ತಿಳಿಸುವ ಉದ್ದೇಶಕ್ಕಾಗಿ ತಾಳವನ್ನು ಸೂಚಿಸುವಾಗ ಮೊದಲಿಗೆ ರಾಗದ ಹೆಸರನ್ನು ಹೇಳುವ ರೂಢಿಯೂ ಇದೆ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಉದಾ: ಸುರುಟಿ ಏಕತಾಳ, ನವರೋಜು ಏಕತಾಳ – ಇತ್ಯಾದಿ ಗಳಲ್ಲಿ ರಾಗವೂ ಹೆಸರಿಗೆ ತಕ್ಕಂತೆ ಹಾಡಲ್ಪಡುವುದೂ ಇದೆ. ಇನ್ನು ಭೈರವಿ ಅಷ್ಟತಾಳ, ಮಾರವಿ ಏಕತಾಳ, ಭೈರವಿ ಏಕತಾಳ ಇತ್ಯಾದಿ ಗಳಲ್ಲಿ ರಾಗದ ಹೆಸರುಗಳು ಕೇವಲ ಲಯ (ಪದ್ಯದ ಗತಿ)ವನ್ನು ಮಾತ್ರ ಸೂಚಿಸುವಂಥವು ಎಂಬುದು ಗಮನದಲ್ಲಿರಬೇಕು. ಕೆಳಗೆ ತಾಳಗಳ ಬಡಿತದ ಕ್ರಮವನ್ನು ತಿಳಿಸುವಲ್ಲಿ '।' ಈ ಗುರುತು ಘಾತವನ್ನು, 'ಂ' ಈ ಗುರುತು ವಿರಾಮ (ಹುಸಿ)ವನ್ನು '.' ಈ ಗುರುತು ಸಣ್ಣ ಬಡಿತವನ್ನು ತಿಳಿಸುತ್ತದೆ.

(ಕೆಳಗಿನ ದೃಷ್ಟಾಂತಗಳಲ್ಲಿ 'ಜಾ' ಎಂದರೆ ಜಾಗಟೆಯ ಪೆಟ್ಟು, 'ಮ' ಎಂದರೆ ಮದ್ದಳೆಯ ಪೆಟ್ಟು, 'ಬಿ' ಎಂದರೆ ಬಿಡಿತ, 'ಮು' ಎಂದರೆ ಮುಗಿತಾಯ ಎಂದು ತಿಳಿದುಕೊಳ್ಳಬೇಕು)

**ಆದಿತಾಳ (8+4+4) = 16 ಮಾತ್ರೆ**

ಧೀಂ . . ತತ್ತ ತತ್ತ ತತ್ತ ಧೀಂ – ತತ್ತ ಧೀಂ – ತತ್ತ.

ಜಾ : । ೦ .. .. .. । ೦ .. । ೦ ..

ಮ : ತ್ತಾಂ . ದಿನ್ನ ದಿನ್ನ ದಿಂ ದ । ತ್ತಾಂ . ಕಿಟ ತಕ . । ತತ್ತಾಂ ಕಿಟ ತಕ.

ಈ ತಾಳದ ಬಿಡಿತ ಮತ್ತು ಮುಗಿತಾಯದಲ್ಲಿ ಜಾಗಟೆಯಲ್ಲಿ ಏಕತಾಳವನ್ನು ಬಡಿಯುವ ರೂಢಿಯು ಸೌಲಭ್ಯಕ್ಕಾಗಿ ಬಂದಿದೆ. ಮೇಲೆ ಕಾಣಿಸಿದಂತೆ ಬಾರಿಸಿದರೂ ತಾಳದ ಆವರ್ತದ ಲೆಕ್ಕಾಚಾರದ ವ್ಯತ್ಯಾಸ ಬರುವುದಿಲ್ಲ. ಈ ತಾಳದ ಹಾಡಿನ ಮಧ್ಯದಿಂದ ಏಕತಾಳದಲ್ಲಿಯೂ, ಹಾಡು ಮುಗಿದ ಮೇಲೆ ಪಲ್ಲವಿಯನ್ನು ತಿತ್ತಿತ್ತೈಯಲ್ಲಿಯೂ ಹಾಡುತ್ತಾ ಗತಿಭೇದವನ್ನು ಮಾಡುವ ರೂಢಿಯಿದೆ.

**ಚೌತಾಳ (6+4+6) = 16 ಮಾತ್ರೆ**

ಧೀಂ – ತತ್ತ ತತ್ತ । ಧೀಂ – ತತ್ತ । ಧೀಂ – ತತ್ತ ತತ್ತ

ಜಾ: 1 । ೦ .. .. । ೦ .. । ೦ .. ..

2 । ೦ ।೦ .. । ೦ .. । ೦ ೦. ..

ಮ : ತ್ತಾಂ ೦ ನದ್ದೀ ದಿಂದ । ತ್ತಾ ೦ ತರಿ ಕಿಟ । ಧೀಂ ೦ ಕಿಟ ಕಿಟ ತಕ ದಿನ

ಈ ತಾಳದ ಹಾಡಿಗೂ ಬಿಡಿತ ಮುಗಿತಾಯಗಳಿಗೂ ಮೇಲಿನ ನಿಯಮವೇ ರೂಢಿಯಲ್ಲಿದೆ. ಈ ಚೌತಾಳವು ಆದಿತಾಳದ ಗತಿಪ್ರಭೇದ ಎಂದರೆ, ವಿಷಮ (ಮುಕ್ಕಾಲು ಎಡ) ಆದಿತಾಳವೇ ಆಗಿರುತ್ತದೆ. ಆದರೂ ನುಡಿತ – ಬಡಿತಗಳಲ್ಲಿ ಆದಿ ತಾಳದಿಂದ ಪ್ರತ್ಯೇಕವಾದ ಸ್ವರೂಪವಿದ್ದು ಸ್ವತಂತ್ರವಾದ ಒಂದು ತಾಳವಾಗಿ ಪರಿಗಣಿಸಲ್ಪಟ್ಟಿದೆ. ಮೇಲೆ ಹೇಳಿದ ಎರಡು ತಾಳಗಳು ಹದಿನಾರು ಅಕ್ಷರ ಕಾಲವಾಗಿದ್ದು ಒಂದೇ ಆವರ್ತವಾಗಿ ಪರಿಣಮಿಸಿದ ಕಾರಣ ಮದ್ದಳೆಯಲ್ಲಿಯ ನುಡಿತವು ಒಂದೇ ಆವರ್ತವಾಗಿ ಪರಿಣಮಿಸಿದ ಕಾರಣ ಮದ್ದಳೆಯಲ್ಲಿಯ ನುಡಿತವು ಒಂದೇ ಆವರ್ತವಾಗಿ ರೂಪುಗೊಂಡಿದೆ. ಲೆಕ್ಕಾಚಾರದಂತೆ ಆದಿತಾಳವು ಎರಡು ಆವರ್ತಗಳಾಗುತ್ತದೆ. ಹೆಚ್ಚಿನ ಎಲ್ಲ ತಾಳಗಳ ಎರಡು ಆವರ್ತಗಳಿಗೆ ಮದ್ದಳೆಯಲ್ಲಿ ಒಂದೇ ಆವರ್ತವಾಗುವಂತೆ ನುಡಿತಗಳ ಬಂಧವಿದೆ. ಈ ಸಾಮಾನ್ಯ ನಿಯಮವನ್ನು ಮೀರಿದೆಡೆಗಳಲ್ಲಿ ಪ್ರತ್ಯೇಕ ಸೂಚಿಸಲಾಗುವುದು.

**ನಿಧಾನ ಝಂಪೆ (4+6) = 10 ಮಾತ್ರೆ**

ಧೀಂ ತತ್ತ । ಧೀಂ ತತ್ತ ತತ್ತ .

ಜಾ : । ೦ .. । ೦ .. ..

ಮ : ತ್ತಾಂ – ತರಿ ಕಿಟ । ಧಿ ನ್ನಾ ನದ್ದಿ ದಿಂದ

ಬಿ : ಧಿ ನಕ ತರಿ ಕಿಟ । ಧಿ ನ್ನಕ ತರಿ ಕಿಟ ತತ್ತಾಂ (ಮೂರು ಸಲ ಬಾರಿಸಿ)

ತ ತ್ತಾಂ ತರಿ ಕಿಟ । ದಿನ್ನಕ ತರಿ ಕಿಟ ದದಿ ಗಿಣ

ಮು : ಧಿನ್ನಕ ತರಿಕಿಟ । ದಿನ್ನಕ ತರಿಕಿಟ ಕಿಟತಕ

ದಿದ್ದಾ ತರಿಕಿಟ । ದಿನ್ನಕ ತರಿಕಿಟ ದದಿಗಿಣ – ತೊ

20, 30, 40 ಅಕ್ಷರ ಕಾಲಗಳಲ್ಲಿ ಜಿಡಿತ, ಮುಗಿತಾಯ ಬಾರಿಸಲು ಸಾಧ್ಯವಿದೆ.

ನಿಧಾನ ತ್ರಿವುಡೆ (3 + 4 ಈ ಆವರ್ತನೆ ದ್ವಿಗುಣಿಸಿ 6+4+4 ಆಗಿದೆ.)

ಧೀಂ ತತ್ತ ತತ್ತ । ಧೀಂ ತತ್ತ । ಧೀಂ ತತ್ತ .

ಜಾ : ।೦ .. .. । ... ।೦ ..

ಮ : ತ್ತಾಂ – ನದ್ಧೀ ತರಿ ಕಿಟ । ದಿ – ನ್ನಾ – । ದಿ ೦ – ದ.

ಜಿ : ದಿನ್ನಕ ತರಿಕಿಟ ಕಿಟತಕ । ದಿನ್ನಕ ತರಿಕಿಟ । ಕಿಟತಕ ತಾಂ (ಎರಡು ಸಲ ಬಾರಿಸಿ)

ದಿನ್ನಕ ತರಿಕಿಟ ಕಿಟತಕ । ದಿನ್ನಕ ತರಿಕಿಟ । ಕಿಟತಕ ತರಿಕಿಟ

ಧೀಂ ದ ತ್ತಾಂ । ತರಿಕಿಟಕಿಟತಕ । ತರಿಕಿಟ ದದಿಗಿಣ

ಮು : ದಿನ್ನಕ ತರಿಕಿಟ ಕಿಟತಕ । ದಿನ್ನಕ ತರಿಕಿಟ । ಕಿಟತಕ ತರಿಕಿಟ

ಧೀಂ ದ ತ್ತಾಂ । ತರಿಕಿಟ ಕಿಟತಕ । ತರಿಕಿಟ ದದಿಗಿಣ – ತೊ

28 ಅಕ್ಷರ ಕಾಲದಲ್ಲಿ ಜಿಡಿತ, ಮುಗಿತಾಯ

**ಅಷ್ಟತಾಳ (3+4) = 7 ಮಾತ್ರೆ**

ತ . ತ್ತಾಂ . (ತದ್ದಿನ್ನ ತಕದಿನ್ನಾ)

ಜಾ : । ೦ ।೦ . (।೦೦ ।೦೦೦)

ಮ : ತದ್ದಿನ್ನ । ತಕ ದಿಂದತ್ತಾ । ತತಾಂ . । . ೦ . ೦ ೦ ।

ಜಿ : ಧೀ ತರಿ ಕಿಟ । ಕಿಟ ತಕ ತಾಂ (ಮೂರು ಸಲ ಬಾರಿಸಿ)

ಧೀ ತರಿಕಿಟ । ಕಿಟತಕ ತರಿಕಿಟ

ತಕ ತರಿಕಿಟ । ಕಿಟತಕ ತರಿಕಿಟ

ದ ದ್ದೀಂ ತಾ । ತರಿಕಿಟ ಕಿಟತಕ . ತಾಂ .

ಮು : ದ ದ್ದೀಂ ತಾ । ದಿಪ್ಪಾ ದದಿಗಿಣ ತೊ .

ಜಿಡಿತ, ಮುಗಿತಾಯ ಹದಿನಾಲ್ಕು ಅಕ್ಷರ ಕಾಲ.

ಜಿಡಿತ, ಮುಗಿತಾಯಗಳಲ್ಲಿ ಜಾಗಟೆಯಲ್ಲಿ ಕೆಳಗೆ ಸೂಚಿಸಿದಂತೆ ಬಾರಿಸುವುದು.

ತದ್ದಿನ್ನ ತಕದಿನ್ನ

।೦೦।೦।೦ (ಮೂರು ಘಾತಗಳನ್ನು ಮಾತ್ರ)

**ರೂಪಕ ತಾಳ (2+4) = 6 ಮಾತ್ರೆ**

ಧೀಂ ತತ್ತಾ ತತ್ತಾ

ಜಾ : । ೦ .. ..

ಮ : ಧಿ ನ್ನಾ ನ ದ್ದೀ ತತ್ತಾಂ

।೦ .. .. ।೦ ।। । ।

ದಿ ನ್ನಾ ನ ದ್ದೀ ದಿಂದ । ತ್ತಾಂ – ತತ್ತಾ ತರಿಕಿಟ

ಜಿ : ಕಿಟತಕ ತರಿಕಿಟ ತತ್ತಾಂ

ಕಿಟತಕ ತರಿಕಿಟ ತತ್ತಾಂ

ಕಿಟತಕ ತರಿಕಿಟ ಕಿಟತಕ
ತಾಂ... ದಿದ್ದಾ ದದಿಗಿಣ
ತೊ – ದಿದ್ದಾ ದದಿಗಿಣ
ತೊ ದಿದ್ದಾ ದದಿಗಿಣ
ಮು : ಕಿಟತಕ ತರಿಕಿಟ ಕಿಟತಕ
ತಾಂ. ದಿದ್ದಾ ದದಿಗಿಣ ತೊ.
ಬಿಡಿತ ಮುಗಿತಾಯ 12 ಮತ್ತು 24 ಅಕ್ಷರ ಕಾಲ

ಮಟ್ಟೆತಾಳ – 6 ಅಕ್ಷರ

ಈ ತಾಳದ ಪದ್ಯವು ರೂಪಕತಾಳದ ನಡೆಯುಳ್ಳದ್ದಾದರೂ 2+4 ರಂತೆ ಪದ್ಯದ ರಚನೆಯಲ್ಲಿ, ಇದರ ಗತಿಯು 3+3ರಂತೆ ತಿಶ್ರಗತಿಯುಳ್ಳದ್ದಾಗಿದೆ. ಆದ ಕಾರಣ ಪದ್ಯವನ್ನು ರೂಪಕದಲ್ಲಿ ಆರಂಭಿಸಿ ಬಿಡಿತ – ಮುಗಿತಾಯಕ್ಕೆ ರೂಪಕತಾಳವನ್ನೆ ಜಾಗಟೆಯಲ್ಲಿ ಬಾರಿಸುತ್ತಾರೆ. ಪದ್ಯ ನಡೆಯುವಾಗ ಹೀಗೆ ಬಾರಿಸುತ್ತಾರೆ.

ಧಿ ೦ ತ ತ ತ್ತಾ ೦
ಬಿ : । ೦ . . । ೦
ಬಿ. ಚೆಂಡೆ : ಡಿಂಗಿಣ ಡಡ್ಡಗ ಡಡ್ಡಗ
ಡಿಂಗಿಣ ಡಡ್ಡಗ ಡಡ್ಡಗ
ಕಿಟತಕತರಿಕಿಟ ಕಿಟತಕ
ಡಾಂಗ್ರಡಾಂಗ್ರ
ಡಾಂಗ್ರಡಡ್ಡೀಂ.....
ಮು : ಕಿಟತಕತರಿಕಿಟ ಕಿಟತಕ
ಡಾಂಗ್ರಡಾಂಗ್ರ – ಡೀಂ

ಈ ತಾಳದ ಪದ್ಯವು ಹೆಚ್ಚಾಗಿ ವೀರರಸದಲ್ಲಿರುತ್ತದೆ. ಇದು ಅಷ್ಟತಾಳ (ಭೈರವಿ)ದ ಗತಿಗೆ ಸುಲಭವಾಗಿ ಒಗ್ಗಿಕೊಳ್ಳುತ್ತದೆ. ಆದ ಕಾರಣ ಈ ಪದ್ಯದ ಚರಣವನ್ನು ಪೂರ್ಣವಾಗಿ ಹೇಳಿ ಪುನಃ ಉತ್ತರಾರ್ಧವನ್ನು ಅಥವಾ ಪದ್ಯದ ಕೊನೆಯ ಒಂದು ಅಂಶವನ್ನು ಭೈರವಿ ಅಷ್ಟತಾಳದ ಗತಿಯಲ್ಲಿ ಹೇಳುವ ರೂಢಿಯಿದೆ. ಆಗ ಸೌಲಭ್ಯಕ್ಕಾಗಿ ಅಷ್ಟತಾಳವನ್ನೇ ಬಾರಿಸುವುದು ರೂಢಿ. ಇದರ ಮುಗಿತಾಯಕ್ಕೆ ಮುಂದೆ ತ್ವರಿತ ಅಷ್ಟತಾಳ (ಭೈರವಿ ಅಷ್ಟತಾಳ)ದ ಪರಿಚಯದಲ್ಲಿ ನೋಡಿ.

ಏಕತಾಳ (4 ಮಾತ್ರೆ ಎರಡು ಆವರ್ತನೆ)

ಧೀಂ ತತ್ತ । ತಾಂ ತತ್ತ .
ಜಾ : । ೦ . . । ೦ . . .
ಮ : ದಾ ದಿ ನ್ನದ್ದಿ । ನಕ್ಕ ಧೀಂ –
ಕಿಟಾಂ – ತಾ । ತರಿಕಿಟ ಕಿಟ ತಕ –

ಬಿ : ದಿನ್ನಕ ತರಿಕಿಟ। ಕಿಟತಕತತ್ತಾಂ (ಮೂರು ಸಲ)
ದಿನ್ನಕ ತರಿಕಿಟ। ಕಿಟತಕತರಿಕಿಟ
ದಧ್ಧಿಂ ದತ್ತಾ । ಧಿಂ ದತ್ತಾ
ದದಿಗಿಣತೋ ದದಿ । ಗಿಣತೋ ದದಿಗಿಣ
ಮು : ದಧ್ಧಿಂ ದತ್ತಾ ಧಿಂದತ್ತಾ । ದದಿಗಿಣತೊ ದದಿಗಿಣತೊ ದದಿಗಿಣ । ತೊ

## ತಿತ್ತಿತ್ಯೆ ತಾಳ

ತಿ ತ್ತಿ ತ್ಯೆ
ಜಾ : । । ।
ಮ : ಧೀಂ ನ ದ್ದಿ ನ್ನಾಂ ತತ್ತ
ಬಿ : ಧಿನ್ನಕ ತರಿಕಿಟ ದಿತ್ತಕ ತರಿಕಿಟ
ದಿನ್ನಕ ತರಿಕಿಟ ದಿತ್ತಕ ತರಿಕಿಟ
ಕಿಟತಕ ತರಿಕಿಟ ಕಿಟತಕತಾಂ
(ದಿದ್ದಾ ದದಿಗಿಣ ತೋ ದಿದ್ದಾ । ದದಿಗಿಣ ತೊ ದಿದ್ದಾ ದದಿಗಿಣ)
ಮು: ಆವರಣದ ಕೊನೆಯ 'ದದಿಗಿಣ'ದ ಮೇಲೆ 'ತೊ' ಬಾರಿಸಬೇಕು.

ತ್ವರಿತ ಝಂಪೆ (2+3=5 ಅಕ್ಷರ ಕಾಲ)
ಧೀಂ ತತ್ತಾಂ
ಜಾ : । ೦ . . ೦
ಮ : ದಿ ನ್ನಾ। ನ ದ್ದೀಂ । ತರಿ ಕಿಟ । ತತ್ತಾಂ
ಬಿ : ತರಿಕಿಟ ತತ್ತಾಂ । ತರಿಕಿಟ ತತ್ತಾಂ । ತರಿಕಿಟ ತತ್ತಾಂ ।
(ಧಿನ್ನ ಧೀ ತರಿಕಿಟ । ಕಿಟತಕ ತರಿಕಿಟ ತ – ತ್ತಾಂ ತಾ ತರಿಕಿಟ)
ಮು : ಆವರಣದೊಳಗಿನ ಕೊನೆಯ 'ತರಿಕಿಟ'ದ ಮೇಲೆ 'ಧೀಂ' ಬಾರಿಸಬೇಕು. 10 ಅಕ್ಷರ ಕಾಲದಲ್ಲಿ ಬಿಡಿತ ಮುಗಿತಾಯ.

ತ್ವರಿತ ಝಂಪೆ (3+4 ಏಳು ಅಕ್ಷರ ಕಾಲ)
ಧೀ ೦ ತ ತ್ತಾಂ ಧಿ ನ್ನ
ಜಾ : । ೦ ೦ । ೦ . .
ಮ : ಧಿಂ ಕಿ ಟಾಂ– ದದ್ದ
ಬಿ : ಧೀ ತರಿಕಿಟ । ಕಿಟತಕತಾಂ – (ಮೂರು ಸಲ)
ಧೀ ತರಿಕಿಟ । ಕಿಟತಕತರಿಕಿಟ
ತಕ ತರಿಕಿಟ । ಕಿಟತಕತರಿಕಿಟ
ದಿಂದತ್ತಾ । ದಿತ್ತಾ ದದಿಗಿಣ
ಮು : ದೀ ತರಿಕಿಟ । ಕಿಟತಕತರಿಕಿಟ

ದಿಂದತ್ತಾ । ದಿದ್ದಾ ದದಿಗಿಣ ತೊ
ಬಿಡಿತ ಮುಗಿತಾಯ14 ಅಕ್ಷರ ಕಾಲ

**ಉಡಾಪೆ**

ಇದು ಒಂದು ಗತಿಭೇದವಾಗಿದೆ. ಈ ತಾಳದಲ್ಲಿ ಯಾವುದೇ ಪದ್ಯವನ್ನು ಆರಂಭ ಮಾಡಿ ಹಾಡುವ ಕ್ರಮವಿಲ್ಲ. ಅಷ್ಟತಾಳದ ಪದ್ಯದ ಕೊನೆಯಿಂದ ಏಕತಾಳದ ಗತಿಗೆ ಗತಿ ಬದಲಾಯಿಸಿ ಅನಂತರ ಉಡಾಪೆ ಗತಿಯಲ್ಲಿ ಪಲ್ಲವಿಯನ್ನು ಹಾಡಿ, ಏಕತಾಳದಲ್ಲಿ ಮುಗಿತಾಯ ಮಾಡುವುದು. ಇನ್ನು ಕೆಲವು ಜಾತಿಯ (ಬಂಧದ) ಏಕತಾಳದ ಪದ್ಯದ ಕೊನೆಯಲ್ಲಿ ತಿತ್ತಿತ್ತೈಯನ್ನೂ, ಕೆಲವು ಜಾತಿಯ ಏಕತಾಳದ ಪದ್ಯದ ಕೊನೆಯಲ್ಲಿ ಉಡಾಪೆಯನ್ನೂ ಬಾರಿಸುವುದಿದೆ. ಹಾಗೆಯೇ ಕೆಲವು ಸಂದರ್ಭಗಳಲ್ಲಿ ತ್ರಿವುಡೆತಾಳದ ಕೊನೆಯನ್ನು ತಿತ್ತಿತ್ತೈಯಲ್ಲಿಯೂ ಹಾಡುವುದಿದೆ. ಇದು ಏಕತಾಳದ ಒಂದು ಆವರ್ತಕ್ಕೆ ಎರಡು ಆವರ್ತಗಳಾಗುತ್ತದೆ.

ಧೀಂ ತತ್ತ ತ್ತಾಂ ತತ್ತ
ಜಾ : । ೦ . . । ೦ . .
ಮ : ಧೀಂ– ಕಿಟ । ನ – ಕ್ಕಿ ಟ
ಮು: ಧೀಂ ತರಿಕಿಟ ಧೀ । ತರಿಕಿಟ ತತ್ತಾಂ
ತಾ ತರಿಕಿಟ ತಾ । ತರಿಕಿಟ ತತ್ತಾಂ
(ತರಿ ಕಿಟ ದಿನ್ನ । ದ್ಧಾಂ – ತರಿಕಿಟ
ದಿನ್ನ ದ್ಧಾಂ । ತರಿ ಕಿಟ ದಿನ್ನ । ದ್ಧಾಂ ।)

ಆವರಣದೊಳಗಿನ ನುಡಿತಗಳು 5ನೆಯ ಆವರ್ತದ ಘಾತವನ್ನು ಮಾಡಬಾರದು.

**ತ್ವರಿತ ಅಷ್ಟತಾಳ**

ಇದು ನಿಧಾನ ಅಷ್ಟತಾಳದ ಇಮ್ಮಡಿ ವೇಗದಲ್ಲಿ ನಡೆಯುತ್ತದೆ. ವೀರರಸ ಪ್ರಧಾನವಾದ ಪದ್ಯಗಳಿಗೆ ಹೆಚ್ಚಾಗಿ ಬಳಸುವ ತಾಳವಿದು. ಮದ್ದಳೆಯಲ್ಲಿ ನುಡಿಯುವ ಈ ತಾಳದ ಒಂದು ಆವರ್ತಕ್ಕೆ ಜಾಗಟೆಯಲ್ಲಿ ನಾಲ್ಕು ಆವರ್ತಗಳಾಗುತ್ತದೆ. ಇದನ್ನೇ ಕೆಳಗೆ ಕಾಣಿಸಲಾಗಿದೆ.

ದಿದ್ದಿನ್ನ ದಿನ – ದಿದ್ಧೋ ನ್ನಕ ದಿಂದ ತ್ತಾಂ – ತತ್ತ
ಜಾ : ।।೦ । ।೦ । ।೦ । ।೦
ಚೆಂಡೆ: ತತ್ತಾಂ ತತ್ತಾಂ ತೊಂ ತತ್ತ ತತ್ತಾಂ

ಧೀಂ ತ – ತತ್ತ ಧೀಂತ – ಕುಣಿತದಲ್ಲಿ ತಿರುಗುವಿಕೆಯನ್ನು ನೋಡಿ ಉರುಳಿಕೆ ಬಾರಿಸಿ ದೀಂತ ದದಿಗಿಣ । ತತ್ತಾಂ
ಮು. ಧೀ ತರಿಕಿಟ ತಕ ತರಿಕಿಟ ದದ್ಧ ಧೀಂತ ದಿದ್ದಾದದಿಗಿಣ
। ತೊ ।

ತ್ರಿವುಡೆ, ಅಷ್ಟ, ತ್ವರಿತ ಅಷ್ಟ, ತಿತ್ತಿತ್ತೈ ತಾಳಗಳು ಕಾಲಗತಿಗಳ ವ್ಯತ್ಯಾಸದ ಪರಿಣಾಮವಾಗಿ ಬೇರೆ ಬೇರೆಯಾಗಿ ಕಾಣುವುದಾದರೂ ಅವುಗಳು ಒಂದೇ ತಾಳದ ನಾಲ್ಕು ಸ್ವರೂಪ ಗಳೆನ್ನುವಷ್ಟು ಸಂಬಂಧ ಕಾಣಿಸುತ್ತದೆ.

**(ಮಾರವಿ) (ಭೈರವಿ) ಏಕತಾಳ**

ಇಲ್ಲಿ ಮಾರವಿ, ಭೈರವಿಯೆಂಬುದು ರಾಗದ ಹೆಸರುಗಳಾದರೂ ಯಕ್ಷಗಾನ ಪ್ರಬಂಧಗಳಲ್ಲಿ ಇವು ಕೇವಲ ಪದ್ಯಗಳ ಲಯವಿನ್ಯಾಸದ ಸಂಕೇತಗಳಾಗಿರುತ್ತವೆ. ಇವು ಹೆಚ್ಚಾಗಿ ವೀರರಸದ ಪದ್ಯಗಳಾಗಿರುತ್ತವೆ.

ಮಾರವಿ : ಪೂರ್ವಾರ್ಧದಲ್ಲಿ ನಾಲ್ಕು ಮಾತ್ರೆಗಳ ಆರು ಗಣಗಳೂ ಒಂದು ಗುರುವೂ ಇರುತ್ತವೆ. ಆದರೆ ತಾಳವು ನಾಲ್ಕು ಮಾತ್ರೆಗಳ ಎಂಟು ಗಣಗಳಷ್ಟು ನಡೆಯಬೇಕು. ಹಾಗೆಯೇ ಉತ್ತರಾರ್ಧವೂ ಕೂಡ.

ಭೈರವಿ : ಇದು ಲೆಕ್ಕಾಚಾರದಲ್ಲಿ ಮೇಲಿನಂತೆಯೇ ಇದೆ. ಲಯದಲ್ಲಿ ಮಾತ್ರ ಭೇದ. ಈ ಪದ್ಯದ ಪೂರ್ವಾರ್ಧದಲ್ಲಿ ಹದಿನಾರು ಮಾತ್ರೆಗಳ ಎರಡು ಚರಣಗಳಿರುತ್ತವೆ. ಆದರೆ ಒಂದನೆಯ ಚರಣದ ನಾಲ್ಕನೆಯ ಗಣದ ಕೊನೆಯ ಎರಡು ಮಾತ್ರೆಗಳು ವಿಂಗಡಿಸಿಟ್ಟಂತೆ ಇರುತ್ತದೆ – 14/2/16 ಈ ರೀತಿಯಲ್ಲಿ, ಮಧ್ಯೆ ಕಾಣಿಸಿದ ಎರಡು ಮಾತ್ರೆಗಳು ಎರಡು ಲಘು ಅಥವಾ ಒಂದು ಗುರುವಾಗಿದ್ದು ವಿರಾಮವಾಗಿರದೆ ಪದ್ಯದ ಅಕ್ಷರಗಳಿರಬೇಕು.

ಮ: (ಮಾರವಿ) ಧೀಂಕಿಟ ತಕಧೀಂ ಕಿಟಕಿಟ ಧೀಂಕಿಟ ಕಿಟತಕ ಧೀಂ – ಕಿಟಾಂ

ಬಿಡಿತ: ಚೆಂಡೆಯಲ್ಲಿ ಕುಣಿತಕ್ಕೆ ಹೊಂದಿ ತಿರುಗುವಿಕೆಗೆ ಉರುಳಿಕೆ ಹೊಡೆದು ಮುಗಿತಾಯ, ಆವರಣದ ಕೊನೆಯ 'ದದಿಗಿಣ' ದ ಅನಂತರ 'ತೋ' ಬೇಕು.

**ಘಂಟಾರವ ಅಷ್ಟತಾಳ**

ಇಲ್ಲಿ ನಿಧಾನ ಅಷ್ಟತಾಳದಲ್ಲಿ ಪದ್ಯ ನಡೆಯಬೇಕು. ಚರಣದ ಆರಂಭದಲ್ಲಿ ಸಾಮಾನ್ಯವಾಗಿ ತಾಳದ ನಾಲ್ಕು ಆವರ್ತದ ಅನಂತರ ಇಮ್ಮಡಿ ವೇಗದಲ್ಲಿ ಪದ್ಯ ನಡೆಯುತ್ತದೆ. ಈ ತಾಳದಲ್ಲಿರುವ ಪದ್ಯವು ವೀರರಸಕ್ಕೆ ಮಾತ್ರ ಸೀಮಿತವಲ್ಲ. ಆದ ಕಾರಣ ಘಂಟಾರವವೆಂಬುದು ಲಯಸೂಚಕವಾಗಿದೆಯೆಂದು ತಿಳಿಯಬೇಕು.

ಉದಾ: ಎಲ್ಲಿ । ಗೈದುವೆ । ನಿಲ್ಲೆಲೂ ಶಕ್ರಾರಿ । ಮಲ್ಲ ಸಾಹಸದಂದಗಳನೆ ।
ನ್ನಲ್ಲಿ ತೋರಿಸು ತೋರಿಸು ॥

ಚೆಂಡೆ : ಡಡ್ಡ ಡಡೀಂ ಕಿಟ ತಕತ ರಡ್ಡ ಡಡಿಂ ಟಟ್ಟಾ
ತಕ ತರಿಕಿಟ । ತಕ ತರಿಕಿಟ ತಕತರಿಕಿಟ ತಕತರಿಕಿಟ ತಕತರಿ
ರಡ್ಡಡ್ಡಾಂ ತರಿಕಿಟ ಕಿಟತಕತಾಂ ದಿದ್ದಾ ದದಿಗಿಣ

ಮು : ರಡಡ್ಡಾಂ ತರಿಕಿಟ ಕಿಟತಕತಾಂ ದಿದ್ದಾ ದದಿಗಿಣ ತೊ

ನಿಧಾನ ಝಂಪೆತಾಳವನ್ನು ತುಂಡು ಮಾಡಿ ತ್ವರಿತ ಝಂಪೆಯನ್ನೂ, ನಿಧಾನ ತ್ರಿವುಡೆಯಿಂದ ತ್ವರಿತ ತ್ರಿವುಡೆಯನ್ನೂ, ಆದಿತಾಳದಿಂದ ಏಕತಾಳವನ್ನೂ ಮಾಡಿದ್ದಾಗಿದೆ.

ಆದರೆ ರೂಪಕವು ಹೀಗೆ ತುಂಡು ಮಾಡಲ್ಪಟ್ಟಿಲ್ಲ. ನಿಧಾನ ಝಂಪೆಯನ್ನು ತ್ವರಿತ ಝಂಪೆಯಾಗಿ, ನಿಧಾನ ತ್ರಿವುಡೆಯನ್ನು ತ್ವರಿತ ತ್ರಿವುಡೆಯಾಗಿ ಪರಿವರ್ತಿಸಿದ ಮೇಲೆ ಪುನಃ ಅದು ನಿಧಾನಗತಿಯನ್ನು ಹೊಂದುವುದಿಲ್ಲ.

ಆದಿತಾಳ ಮತ್ತು ಚೌತಾಳವನ್ನು ನಿತ್ಯ ಸ್ತ್ರೀವೇಷ ಕುಣಿಸುವಾಗ ಉಪಯೋಗಿಸುತ್ತಾರೆ. ಪ್ರಸಂಗದಲ್ಲಿ ಆದಿತಾಳದ ಪದ್ಯಗಳಿದ್ದು ಸಂದರ್ಭೋಚಿತವಾಗಿ ಕೆಲವೊಮ್ಮೆ ಹಾಡುತ್ತಾರೆ. ಆದರೆ ಚೌತಾಳದ ಲಯಕ್ಕೆ ಸುಲಭವಾಗಿ ಹೊಂದಿಕೊಳ್ಳುವ ಪದ್ಯ ರಚನೆಯು ಬೆರಳೆಣಿಕೆಯ ಕೆಲವೇ ಪ್ರಸಂಗಗಳಲ್ಲಿ ಒಂದೆರಡು ಪದ್ಯಗಳಿರುತ್ತವೆ. ಆದುದರಿಂದ ಚೌತಾಳದ ಹಾಡುಗಳು ಕೇಳಲು ಅಪೂರ್ವವೇ ಸರಿ.

ನಿಧಾನ ಝಂಪೆಯ ಹಾಡುಗಳು ಉತ್ತರಾರ್ಧದಲ್ಲಿ ತ್ವರಿತ ಝಂಪೆಗೆ ತಿರುಗಿ ಮುಗಿತಾಯವಾಗುವುದುಂಟು. ತ್ರಿವುಡೆತಾಳದ ಹಾಡುಗಳು ತ್ವರಿತ ತ್ರಿವುಡೆಗೆ ತಿರುಗಿ ಮುಗಿತಾಯ ಮಾಡುವುದೂ ಉಂಟು. ಅಲ್ಲದೆ ಉತ್ತರಾರ್ಧದ ಆರಂಭದಿಂದ ಅಥವಾ ಹಾಡಿನ ಕೊನೆಯ ಭಾಗದಿಂದ ತಿತ್ತಿತ್ತೈ ಗತಿಯಲ್ಲಿ ಪರಿವರ್ತಿಸಿ ಮುಗಿತಾಯವಾಗುವುದೂ ಇದೆ. ಅಷ್ಟತಾಳದ ಪದ್ಯವನ್ನು ಕೊನೆಗೆ ಏಕ, ಅನಂತರ ಉಡಾಪೆ ಗತಿಯಲ್ಲಿ ಹಾಡುತ್ತಾ ಪಲ್ಲವಿಯನ್ನು ಪುನಃ ಅಷ್ಟತಾಳದಲ್ಲಿ ಹಾಡಿ ಮುಗಿತಾಯ ಮಾಡುವ ಕ್ರಮವಿದೆ. ಈ ಕ್ರಮವು ವೀರ – ರೌದ್ರರಸದ ಪದ್ಯಗಳಿಗೆ ರೂಢಿಯಲ್ಲಿಲ್ಲ. ಆದರೆ ಮಟ್ಟೆತಾಳದ ವೀರರಸದ ಪದ್ಯಗಳು ಮಾತ್ರ ತ್ವರಿತ ಅಷ್ಟತಾಳದ ಗತಿಯಲ್ಲಿ ಉತ್ತರಾರ್ಧದಿಂದ ಹಾಡಲ್ಪಡುತ್ತವೆ. ವೀರರಸದ ಪದ್ಯಗಳಿಗೆ ಸೂಚಿಸಿದ ರಾಗಗಳು ಪದ್ಯಗಳ ಲಯವಿನ್ಯಾಸವನ್ನು ತಿಳಿಸುವುದೆಂಬುದು ಗಮನಾರ್ಹವಾದ ಸಂಗತಿಯಾಗಿದೆ.

### ಮದ್ದಳೆಯ ಉರುಳಿಕೆಗಳು

1. ಕಿಟತಕ ತರಿಕಿಟ
2. ತರಿಕಿಟ ಕಿಟತಕ
3. ಧೀತರಿಕಿಟ ಧೀತರಿಕಿಟ ಕತ್ತಾಂ
4. ಧೀತರಿಕಿಟ ತಕ ತರಿಕಿಟ ಕತ್ತಾಂ ಕಾತರಿಕಿಟ ತಕ ತರಿಕಿಟ ಕತ್ತಾಂ

### ಚೆಂಡೆ ಉರುಳಿಕೆಗಳು

1. ತರಿಕಿಟ, ತಕತರಿ, ಕಿಟತಕ, ತರಿಕಿಟ, ತಕತರಿ, ಕಿಟತಕ, ತರಿಕಿಟ, ತಕತರಿ, ಕಿಟತಕ

ಇದನ್ನು ಅಲ್ಪ ವಿರಾಮ ಗುರುತಿನಿಂದ ನಾಲ್ಕು ನಾಲ್ಕು ಅಕ್ಷರಗಳ ಗುಂಪುಗಳಾಗಿ ಕಾಣಿಸಿದೆ. ಹೀಗೆ ಬಾರಿಸಿದಾಗ ಅದು ಉರುಳಿಕೆಯಾಗುತ್ತದೆ. ಇದನ್ನು ಎಲ್ಲ ತಾಳಗಳಿಗೆ ಜೋಡಿಸಲಿಕ್ಕಾಗುವುದರಿಂದ ಇದನ್ನು ಜೋಡುರುಳಿಕೆಯೆಂದು ಹೇಳುತ್ತಾರೆ. ಇದರ ಹೊರತು ಜೋಡುರುಳಿಕೆಯೆಂದು ಬೇರೆಯಿಲ್ಲ.

2. ಕಿಟತಕ ತರಿಕಿಟ
3. ತರಿಕಿಟ ಕಿಟತಕ
4. ಧಿಂತರಿ ಕಿಟತಕ ತರಿಕಿಟ ಕಿಟತಕ

ಯಕ್ಷಗಾನ ಬಯಲಾಟವಿರುವಲ್ಲಿ ಮುಸ್ಸಂಜೆ ಹೊತ್ತಿಗೆ ಸಮೀಪದ ಎತ್ತರದ ಪ್ರದೇಶಕ್ಕೆ ಹೋಗಿ 'ಕೇಳಿ' ಬಾರಿಸುವುದೆಂಬ ಕ್ರಮವೊಂದಿದೆ. ಇದನ್ನು ಬಯಲಾಟದ ಪ್ರಚಾರದ ವಿಧಾನವೆನ್ನಬಹುದು. ಈ ಕೇಳಿ ಬಾರಿಸುವಲ್ಲಿ ಪೀಠಿಕೆಯಂತೆ ಚೆಂಡೆಯದೇ ಪ್ರಾಧಾನ್ಯವಿದೆ. ಇದನ್ನು ಬಾರಿಸುವುದು ಪೀಠಿಕೆಯಂತೆಯೇ ಆಗಿದೆ.

ರಂಗಸ್ಥಳ ಪ್ರವೇಶಕ್ಕೆ ಮೊದಲು ಚೌಕಿಯಲ್ಲಿ (ನೇಪಥ್ಯ) ಗಣಪತಿ ಸ್ತುತಿ ಮಾಡಿ ಹೊರಡುವ ಕ್ರಮ. ತ್ವರಿತ ತ್ರಿವುಡೆಯಲ್ಲಿ 'ಗಜಮುಖದವಗೆ ಗಣಪಗೆ' ಈ ಪದ್ಯದ ಮೂರು ಚರಣಗಳನ್ನು ಹೇಳಿ ಮುಗಿತಾಯದ ಅನಂತರ ಅಷ್ಟತಾಳದಲ್ಲಿ ಜಾಗಟೆಯನ್ನು ಎತ್ತಿ ಹಿಡಿದು ತಾಳ ಬಾರಿಸುತ್ತಾ 'ಕರದೊಳು ಪರಶು ಪಾಶಾಂಕುಶ ಧಾರಗೆ' ಹಾಡಿ ಮುಗಿತಾಯವಾಗಿ ದೀಂಗ್ಣ ಬಾರಿಸತಕ್ಕದ್ದು. ದೇವಪೂಜಾ ಪ್ರಸಾದ ಸ್ವೀಕರಿಸಿ ರಂಗಸ್ಥಳಕ್ಕೆ ಅಪ್ಪಣೆ ಬೇಡಿ 'ದೇವರ ಅಪ್ಪಣೆ'ಯೆಂದು ಸಂಗೀತಗಾರ ಹೇಳಿದಾಗ 'ತಕ ತೈಯ ತಾ ತಾ ತೋ ದಿನ್ನ' ಎಂದು ಬಾರಿಸುತ್ತಾ ರಂಗಸ್ಥಳ ಪ್ರವೇಶಿಸಿ 'ತಕ್ಕ ತೈಯ ತಾ ತಾ ತೋ ದಿನ್ನ' ಎಂದು ಬಾರಿಸುತ್ತಾ ರಂಗಸ್ಥಳ ಪ್ರವೇಶಿಸಿ 'ತಕ್ಕ ತೈ'ಯನ್ನು ಜೋರಾಗಿ ನುಡಿಕಾರ ಮಾಡಿ ತತ್ತತ್ತೋಧಿನ್ನ, ತತ್ತತೋಧಿನ್ನ, ತತ್ತಧೀ ತರಿಕಿಟ ತಕ ತರಿಕಿಟ ದದ್ದ ಧೀಂ ತ ತರಿಕಿಟ ದಧಿಗಿಣ ಧೀಂಗ್ಣ ಬಾರಿಸಿ ನಿಲ್ಲಿಸುವುದು.

ಇದಾದ ಮೇಲೆ ಕೋಡಂಗಿಗಳನ್ನು ಕುಣಿಸುವುದಕ್ಕಾಗಿಯೂ ನಾಟ್ಯವನ್ನು ತಿದ್ದುವುದಕ್ಕೂ ಅವಕಾಶವಾಗುವಂತೆ ಕೇಳಿ ಮತ್ತು ಪೀಠಿಕೆಗಳಿಗೆ ವಿಭಿನ್ನವಾದ ರೀತಿಯಲ್ಲಿ ಚೆಂಡೆ ಬಾರಿಸುವ ಒಂದು ಕ್ರಮವಿದೆ. ದೂರದ ಜನರಿಗೆ ಬಯಲಾಟದ ಸ್ಥಳದ ಜಾಡು ಹಿಡಿಯುವ ಅನುಕೂಲವು ಈ ಬಾರಿಸುವಿಕೆಯಿಂದ ಆಗುವ ಸಾಧ್ಯತೆಯಿದೆ.

ತೆಂಕುತಿಟ್ಟಿನ ಮದ್ದಳೆಗಾರನೆಂದರೆ ಚೆಂಡೆ ಮದ್ದಳೆಗಳೆರಡನ್ನೂ ಬಾರಿಸುವ ನೈಪುಣ್ಯವುಳ್ಳವನೆಂದರ್ಥ. ಚೆಂಡೆ ಬಾರಿಸುವ ಹೊತ್ತಿನಲ್ಲಿ ಜತೆಗೆ ಮದ್ದಳೆ ಬಾರಿಸುವವನನ್ನು 'ಒತ್ತು ಮದ್ದಳೆಗಾರ'ನೆನ್ನುವರು.

ರಂಗಸ್ಥಳದಲ್ಲಿ ಸಣ್ಣ ಕೇಳಿಯ 'ದದ್ದಿಂದತ್ತಾ'ದ ಮೂರು ಮುಗಿತಾಯವಾಗಿ ತೈತ ತಕತ ಬಾರಿಸಿ ಉರುಳಿಕೆ ಹೊಡೆದು ರಡಡ್ಡ ಗಿಡಡಾಂ ತತ್ತಾಂ ತರಿಕಿಟ ತರಿಕಿಟ ಧಿಂ (ಈ ಬಾರಿಸುವಿಕೆಯಲ್ಲಿ ತೈಕು ತೈಕು ಇಲ್ಲ) – ಇದಾದ ಮೇಲೆ ಸಂಗೀತಗಾರನು "ಮುದದಿಂದ ನಿನ್ನ" ಪದ್ಯವನ್ನು ನಾಟಿ ರಂಗದಲ್ಲಿ ಝಂಪೆತಾಳದಲ್ಲಿ ಹಾಡುವನು. ಬಿಡಿತ ನಾಲ್ಕು ಪೆಟ್ಟು. "ಮುದದಿಂದ ನಿನ್ನ ಕೊಂಡಾಡುವೆನು ಅನವರತ, ಮದಪೂರ ವಿಘ್ನೇಶದೇವ ಜಗದೀಶ । ಮುದದಿಂದ ನಿನ್ನಾ (ಮುಗಿತಾಯ) ತೋ ಕಿಟತಕ ಧಾಂ ಧಾಂ ಧಾಂ । ಧಾಂ ಕಿಟತಕ ಧೀಂ ಧೀಂ ಧೀಂ । ಧೀಂ ಕಿಟತಕ ದದ್ಧಿಂದತ್ತಾ ಕಿಟತಕ ತರಿಕಿಟ ತತ್ತಾ ದಧಿಗಿಣತೋ – ಎಂಬ ಮುಗಿತಾಯವನ್ನು ಸಂಗೀತಗಾರನೂ ಬಾಯಲ್ಲಿ ಹೇಳಬೇಕು. ಮೂರೂ ಪದ್ಯಗಳ ಬಿಡಿತ ಮುಗಿತಾಯಗಳು ಆದ ಮೇಲೆ ತ್ವರಿತ ಗತಿಯಲ್ಲಿ ಝಂಪೆಯಲ್ಲಿ 'ಅರರೆ ನಿನ್ನಯ ಮಹಿಮೆ' ಪದ್ಯವನ್ನು ಹೇಳಿ ಬಿಡಿತ ಮುಗಿತಾಯ ಕೊಡಬೇಕು.

ಮುಂದೆ ತ್ರಿವುಡೆ ತಾಳದಲ್ಲಿ 'ಶರಣು ತಿರುವಗ್ರ ಶಾಲಿವಾಹಿನಿ .............' ಗೆ ಬಿಡಿತ

ನಾಲ್ಕು ಆವರ್ತನೆಯೂ ಮುಗಿತಾಯ ಎರಡು ಆವರ್ತನೆಯೂ ಬಾರಿಸಿ ಮುಂದೆ ತ್ವರಿತ ಗತಿಯಲ್ಲಿ 'ಪಂಕಜ ಮುಖಿ ಪರಮ ಪಾವನೆ' ಬಿಡಿತ.......... 'ಶಂಕರಾರ್ಧ ಶರೀರಿಣೀ ಶಂಖಚಕ್ರ ಗದಾಬ್ಜ ಪಾಣಿ ಭಯಂಕರರೋಂಕಾರ ವಾಹಿನೀ' ಹೇಳಿ ಮುಗಿತಾಯ ಒಂದೇ ಆವರ್ತ. ಧಾಂಗ್ರ ಡಾಂ ರಡ್ಡ ಢೀಂ. ಇಲ್ಲಿಂದ ಅಷ್ಟತಾಳದಲ್ಲಿ 'ಶಂಖ ಚಕ್ರಗದಾಬ್ಜ ಪಾಣಿ' ಪುನರಾವರ್ತಿಸಿ ಅಷ್ಟತಾಳದಲ್ಲೇ ಮುಗಿತಾಯ.

ಶ್ಲೋಕ – ಮುಖತೋ ಪೂರ್ಣ ಚಂದ್ರಸ್ಯ...... ಸಭಾ ಸರ್ವಾಭಿವಂದನಂ.

ಧಿ ತತ್ತಾ ಉರುಳಿಕೆ ಹೊಡೆದು ಮುಗಿತಾಯ, ಮುಂದೆ "ನಿಗಮ ಗೋಚರ ನಿತ್ಯ" ತ್ವರಿತ ತ್ರಿವುಡೆಯಲ್ಲಿ ಹೇಳತಕ್ಕದ್ದು ........"ಧರಣಿ ದಾನವ ಕುಲ ಹರಣ ಶ್ರೀ ರಘು ರಾಮರೇ" ಮುಗಿತಾಯ. ಉಡಾಪೆ ಗತಿಯಲ್ಲಿ – "ಧರೆಯೆಲ್ಲವು ನಿನ್ನುದರದೊಳಿರುತಿರೆ....." ಈ ಪದ್ಯಗಳನ್ನು ಹೇಳಿ ಮುಗಿತಾಯ ರಡಡ್ಡ ಗಿಡಡಾಂ ರಡ್ಡಗ್ಡ್ ದದಿಗಿಣ ತೈತ ತಕತ ಧೀಂತ ತಕತ ಬಾರಿಸಿ ಮುಗಿತಾಯವಾದ ಮೇಲೆ ಮದ್ದಳೆಗಾರನು ಚೆಂಡೆ ನಿಲ್ಲಿಸುವನು.

ಆ ಮೇಲೆ ಸಂಗೀತಗಾರನು ಕೆಲವು ಶ್ಲೋಕಗಳನ್ನು ಹೇಳಿ ನಿತ್ಯವೇಷವನ್ನು ಬರಿಸುವುದಕ್ಕಾಗಿ ರೂಪಕತಾಳದಲ್ಲಿ "ರಾಮಭದ್ರ ಗೋವಿಂದ............. ತೋ ತೈಯ ತೈಯ ತಾ ದಿತ್ತಾ ದದಿಗಿಣ" – ಈ ಪದ್ಯ ಹೇಳಿ ಎರಡು ಆವರ್ತದ ಮುಗಿತಾಯ. ಏಕತಾಳ ಉಡಾಪೆ ಗತಿಯಲ್ಲಿ "ಹರೇ ರಮಣ ಗೋವಿಂದ" ಈ ಪಲ್ಲವಿಯನ್ನು ಮೂರು ಬಾರಿ ಹೇಳಬೇಕು. ಮೊದಲ ಬಾರಿಗೆ ಕೋಡಂಗಿಗಳು ಕುಣಿಯುತ್ತಾರೆ. ಎರಡನೆಯ ಬಾರಿಗೆ ನಿತ್ಯವೇಷ ಪ್ರವೇಶಿಸಿ ಕುಣಿದು ಹೊರಗೆ ಹೋಗುತ್ತಾರೆ. ಎರಡನೆಯ ಬಾರಿಗೆ ಕೋಡಂಗಿಗಳ ಕುಣಿತ, ಮುಂದೆ ಶ್ಲೋಕ. "ಹೇ ಗೋಪಾಲಕ ಹೇ ಕೃಪಾ ಜಲನಿಧೇ" ಈ ಶ್ಲೋಕ ಹೇಳುತ್ತಿರುವಾಗ ನಿತ್ಯವೇಷ ಪ್ರವೇಶ. ಇನ್ನು "ಹರಿ ನಾರಾಯಣ ಗೋವಿಂದ" ಏಕತಾಳದಲ್ಲಿ ಬಿಡಿತ – ಮುಗಿತಾಯ. "ಕೇಶವ ಮಾಧವ ಮಧುಸೂದನ.... ಅನುದಿನ ನಿನ್ನಂಘ್ರಿ ಯುಗವನ್ನು । ನಾನು । ಮನದೊಳು ಬಿಡದೆ ನೆನೆಯುವೆನು ॥ 5 ॥ ಅಂಗನೆ ಮಣಿಪೋಗಿ ಕರತಾರೆಲೆ । ಮಹ । ಲಿಂಗನೆಡೆಗೆ ಪೋಗಿ ಬರ ಹೇಳೆಲೆ ॥ 6 ॥ ತಾ ತೈಯ ದಿನದ ತಹತ ದಿನ್ನ ತೈ ......" ಎರಡು ಸಲ ದದ್ದಿಂದತ್ತಾ ಕಿಟತ .... ದಧಿಗಿಣ ತೈ ತಹತ ದಿನ್ನ ತೈ – ತೈಯ ದಿನದ, ಎರಡು ಸಲ ದದ್ದಿಂದತ್ತಾ ....... ದದಿಗಿಣ ತಾ ತೈಯ ದಿನದ ... ರಂಗಸ್ಥಳದಲ್ಲಿ ಮುಂದೆ ಹೋಗುವರು. ತಹತ್ತ ದಿಂದ ತೈ ದದ್ಧಿಂದತ್ತಾ.... ದದಿಗಿಣ ತೈ ತಹತ್ತದಿಂದ ತೈ ... ಹಿಂದೆ ಬರುವರು. ದದಿಗಿಣತೋ ದದಿಗಿಣತೊ ದದಿಗಿಣ ಧೀಂತನ ಧಿರಿನಂ ತೋಂತನ ಧಿರಿನಂ (ಅರ್ಧ ಚಂದ್ರಾಕೃತಿಯಲ್ಲಿ ಕುಣಿತ).... ದಧಿಗಿಣತೊ ದಧಿಗಣತೊ ದಧಿಗಿಣ ತೈ ತಹತದಿಂದ ತೈ ತಹತ ದಿಂದ ತೈ (ಮುಂದೆ ಹೋಗುವರು) – ದದ್ದಿಂದತ್ತಾ ... ದಧಿಗಿಣ ತತ್ತೊಂಗ ದಿಕ್ಕು ತಕ್ಕ ತೈ ತಾ ತರಿ ಕಿಟ ಕಿಟತಕ ತತ್ತೊಂಗ ದಿಕ್ಕು ತಕ್ಕ ತೈ ತಹತ ಧಿಂಧ ತೈ – ಈ ನುಡಿತವನ್ನು ಮೂರು ಯಾ ನಾಲ್ಕು ಸಲ ಹೇಳಿ ದದ್ದಿಂದತ್ತಾ ... ತಿತ್ತಿತ್ತೈಯಲ್ಲಿ 'ಅನವರತವು ಪಾಲಿಸೆನ್ನನು" ಈ ಪದ್ಯವನ್ನು ಹೇಳಿ ತೈ ತಿತ್ತಿತ್ತೈ ತೈ ತಿತ್ತಿತ್ತೈ ಹೇಳಿ ತೀವ್ರ ಹೋಗಿ ತೈದಿನ ತೈ ತೈ ತೈ ತೈ ತೈ ತತ್ತಾಂ ಧಂ ತರಿಕಿಟ ಕಿಟತಕತಾಂ ತತ್ತಾ ತರಿಕಿಟ ಕಿಟ ತಕತಾಂ ತರಿಕಿಟ ಧಿನ್ನದ್ಧಾಂ ತರಿಕಿಟ ದಿನ್ನದ್ಧಾಂ ತರಿಕಿಟ ದಿನ್ನದ್ಧಾಂ. ನಿತ್ಯವೇಷ ಹೊರಗೆ ಹೋಗುವುದು. (ತೆರೆ) ಗಣಪತಿ ಪೂಜೆ. ನಿತ್ಯ ವೇಷಗಳು

ಆರತಿ ಮಾಡುವಾಗ ಪದ್ಯ "ಗಜಮುಖದವಗೆ ....." ಒಂದು ಚರಣ ಹೇಳಿ ಮುಗಿತಾ. "ಕರದೊಳು ಪರಶು....." ಇದರ ಕೊನೆಗೆ 'ಗಣಪತಿ ಕೌತುಕ' ಅಥವಾ ಗಣಪತಿ ಕವಿತಂ. (ವಾಡಿಕೆಯ ಹೆಸರು) 'ಕರದೊಳು' ಪದ್ಯದ ಮುಗಿತಾಯದ ಕೊನೆಗೆ –

ಕಿಟತಕ ತ್ಯೆ ತಿತ್ತಿ ತ್ಯೆ ಕಿಟತಕ ತ್ಯೆ ತಿತ್ತಿ ತ್ಯೆ ಕಿಟತಕ ತತ್ತಾಂ ಗಿತ್ತಾಂ ತತ್ತ ತ್ತಾಂ ಕಿಟತಕ ತತ್ತಾಂ ಗಿತ್ತಾಂ ತತ್ತತ್ತಾಂ ವಾಹುಕ ಕಿಟತಕ ಅರುತಿರು ಮರುಮಗ ವಿಘ್ನ ವಿನಾಯಕ ಝುಣಕಿಟ ಅರಳುವ ಗಣಪತಿ ಕೌತುಕ ಜ್ಯೆ ಜ್ಯೆ ಜಕ್ಕಿಟ ಉದರಿಗಿಣಂ ಕಿಣ್ಣಾಂ ಕಿಣ್ಣಾಂ ತಧಿಕ್ಕು ಧಿಕ್ಕು ಆನೆ ಮುಖದವ ತಕ್ಡ್ ತಕ ತೋಂತಕ ದೇವರ ತಿರು ಮುಗ ತಕ್ಕಿಟ ಕಿಟತಕ ತೋಂ ತತ್ತಾ ತರಿಕಿಟ ಕಿಟತಕ ತೋಂ ತತ್ತರ್ ಪಿನಯರ್ ಉಗ್ರ್ರದ ಉಗ್ರ್ರದಿ ತಕ್ಕು ದಿಕುತ ತಳಾಂಕು ದದಿಗಿಣ ತೋ

ಮುಂದೆ "ಗಜಮುಖ ನಾ ನಿನ್ನ " ಅಷ್ಟತಾಳದಲ್ಲಿ ಬಿಡಿತ, ಮುಗಿತಾಯ

## ಭೈರವಿ ಅಷ್ಟತಾಳ

ಗಿರಿಜೆ ಶ್ರೀ ಮಹಾಲಕ್ಷ್ಮೀ + ಪ್ರಾಣೇಶ ನಾ ನಿನ್ನ ॥ ಚರಣವ ನಂಬಿದೆನು । ಪಾಲಿಸು ಲೇಸಾ ॥ 1 ॥ ವರಕ್ರೋಡ ನಗರದಿ +ಸ್ಥಿರವಾಸ ಶ್ರೀ ಶಂ । ಕರ ನಾರಾಯಣ । ದೇವ ಜಗದೀಶ ॥ 2 ॥ (+ ಈ ಗುರುತಿರುವಲ್ಲಿ ಬಿಡಿತ). ಅನಂತರ "ವರಕ್ರೋಡ" ಪದ್ಯವನ್ನು ಮಾರವಿ ಏಕತಾಳದಲ್ಲಿ ಹೇಳಿ ಮುಗಿತಾಯದ ಕೊನೆಯಲ್ಲಿ ಕಿಟ್ತಕ ಧಾಂದಾಂದ ದಿತ್ತೆಗಿಣ ದಾಂದಾಂ ದತ್ತೈ, ಮೂರು ಸಲ, ಕಿಟ್ತಕ ದಾಂದಾಂ ದತ್ತೈ ಮೂರು ಸಲ ಬಾರಿಸಬೇಕು. ಸಂಗೀತಗಾರನು ಈ ನುಡಿತವನ್ನು ಬಾಯಲ್ಲಿ ಹೇಳಬೇಕು. ಮತ್ತೆ ತೈತ ತಕತ – ಇದಾದ ಮೇಲೆ "ವಂದೇ ದೇವರ ದೇವ ...." ಏಕತಾಳದಲ್ಲಿ ಹೇಳಿ ಮುಗಿತಾಯಕ್ಕೆ ಸಂಗೀತಗಾರನು ತೋಂಗ ತೋಂ ತಕತ ಧಿಂಧತ್ತಾ ಎನ್ನುವಾಗ ನಿತ್ಯವೇಷ ಹೋಗುವುದು. (ಇಲ್ಲಿಂದ ಸಂಗೀತಗಾರನು ನಿರ್ಗಮಿಸಿ ಭಾಗವತರ ಆಗಮನ.)

## ಸ್ತ್ರೀ ವೇಷ

"ಚಿಕ್ಕ ಪ್ರಾಯದ ಬಾಲೆ...." ಅಷ್ಟತಾಳ– ಬಿಡಿತ, ಮುಗಿತಾಯ ".... ಹೊಂತಕಾರಿ" ಎಂಬಲ್ಲಿಂದ ಉಡಾಪೆಯಲ್ಲಿ ಹೇಳಿ ಮುಗಿತಾಯ. (ತೆರೆ). "ಕಾಮಿನಿ ಕರೆದು ತಾರೇ ಶ್ರೀ ಮಂಜುನಾಥ ಸ್ವಾಮಿಯ ಬಿಟ್ಟಿರಲಾರೆ". ತನನಾಂ ತನ ದಿರಿ ನಾಂ ಹರೇ ನಾ ಮೃದ್ – ಏಕತಾಳದಲ್ಲಿ ಬಿಡಿತ. (ತೆರೆ ತೆಗೆಯುವುದು). ಪದ್ಯವನ್ನು ಆರಂಭದಿಂದ ಹಾಡಿ ಮುಂದಿನ "ಈ ಮಹಿಯೊಳಗಿಂತ ಪುರುಷರಿಲ್ಲವೊ ಕಾಂತ। ಭೀಮಬಲನು ಬಲು ಸಾಮರ್ಥ್ಯನು" ಹಾಡಿ ಏಕತಾಳದಲ್ಲಿ – "ಪ್ರೇಮದಿ ನೆಲಸಿಹ ಶ್ರೀ ಮಂಜುನಾಥ" ಮೂರು ಸಲ ಹೇಳಬೇಕು. ಹಾಗೆಯೇ ಮೂರು ಸಲ ದದ್ದಿಂದತ್ತಾ..... ದದಿಗಿಣ ಬಾರಿಸಿ ತಾ ತಹತ ದಿಂದತ್ತಾ. ಹೀಗೆ ಮೂರು ಸಲ ಹಾಡುವ ತನಕ ಕೂತಿದ್ದ ವೇಷವು ಎದ್ದು ತ ತಹತ ದಿಂದ ತ್ಯೆ ..... ಇದುವೆ ಬಾಯಿತಾಳ ಹೇಳಿ ಹಿಂದೆ ಬಂದು ಭಾಗವತರ ಪೀಠದ ಬಳಿ ಬಂದ ಮೇಲೆ ದಧಿ ಗಿಣತೊ ದಧಿಗಿಣತೊ ದಧಿಗಿಣ ಧೀಂತನ ಧಿರಿನಾ ತೋಂತನ ಧಿರಿನಾಂ..... ಹೇಳುವಾಗ ರಂಗಸ್ಥಳದಲ್ಲಿ ಅರ್ಧಚಂದ್ರಾಕೃತಿಯ ಕುಣಿತ. ಮೂರು

ವಧಿಗಿಣತೊ ದಧಿಗಿಣತೊ ದಧಿಗಿಣವಾಗಿ ತಾ ತಹತ್ತ ದಿಂದ ತೈ ... ರಂಗದಲ್ಲಿ ಮುಂದೆ ಹೋಗುವುದು. ಆ ಮೇಲೆ –

ದದ್ಧಿಂದತ್ತ ... ದಧಿ (ಒಂದೇ ಸಲ) ತತ್ತೊಂಗ ದಿಕುತಕ ತೈ ತಾ ತರಿಕಿಟ ಕಿಟತಕ ತತ್ತೊಂಗ ದಿಕು ತಕ ತೈ .... ದಧಿಗಿಣ ತೊ ದದಿಗಿಣ ತೊ ದದಿಗಿಣ (ಇನ್ನು ತುಸು ವೇಗವಾಗಿ) ತಾ ತಹತ್ತ ಧಿಂದ ತೈ .... (ಹೇಳುತ್ತಾ) ದದ್ಧಿಂದತ್ತಾ... ದಧಿಗಿಣ ದಿದ್ದಾ – ಧೀತರಿಕಿಟ ತಕ ತರಿಕಿಟ ಕಿಟತಕಧಾ । ದಿದ್ದಾ – ಧೀತರಿಕಿಟತಕ ತರಿಕಿಟ ಕಿಟತಕಧಾ। ದಿದ್ದಾ – ಧೀ ತರಿಕಿಟ ತಕ ತರಿಕಿಟ ಕಿಟತಕಧಾ । ತರಿಕಿಟ ಕಿಟತಕ ಧಾ। ತರಿಕಿಟ ಕಿಟತಕ ಧಾ। ತರಿಕಿಟ ಕಿಟತಕಧಾ । ಕಿಟತಕ ಧಾ । ಕಿಟತಕ ಧಾ। ಕಿಟತಕ ತೈ ತಹತ ದಿಂದತ್ತಾ..... ದದ್ಧಿಂದತ್ತಾ... ದಧಿಗಿಣ ಕಿಟತಕ ತರಿಕಿಟ । ಕಿಟತಕ ತರಿಕಿಟ । ಕಿಟತಕ ತರಿಕಿಟ । ಕಿಟತಕ ತರಿಕಿಟ । ಕಿಟತಕ ತರಿಕಿಟ । ಕಿಟತಕ ತರಿಕಿಟ ದಿದ್ದಾ ದಿದ್ದಾ ದಿದ್ದಾ ದದ್ಧಿಂದ ತಾ.... (ಮೂರು ಸಲ) ದದ್ಧಿಂದತ್ತಾ ದದಿಗಿಣ ತಾ ತಹತ ದಿನ್ನ ತೈ (ವೇಗವಾಗಿ) ತೈ ದಿನ ತೈ ದಿನ ತೈದಿನ ತೈ ತೈ ತೈ ತೈ ದಧೀಂಕ ತಕತಾಂ ದಿದ್ದಾ ದಧಿಗಿಣ ತಾನನಾಂತ ದಿರಿನಾ ..... (ಎಂಬಾಗ ಹಾಸ್ಯಗಾರನ ಪ್ರವೇಶ) ದಿದ್ದಾಂ ತಕದಾಂ ದಿದ್ದಾಂ ತಕದಾಂ... ಕಿಟತಕ ತರಿಕಿಟ ಕಿಟತಕ ತರಿಕಿಟ ದಧೀಂ ಕು ತಕತಾಂ ತರಿಕಿಟ ದಧಿಗಿಣ ತೊ.

ಇಲ್ಲಿ ಆಹೋಹೋ ಎಂದು ದೇವತಾ ಸ್ಮರಣೆ ಯಾ ಹೊಗಳಿಕೆ ಆರಂಭ. ಅನಂತರ "ಪಂಚಶರನ ಬಾಧೆಗೆ । ಗುರಿಯ ಮಾಡಿ । ವಂಚಿಸಿದಳಲ್ಲೊ ಹೀಗೆ ॥ ಮುಂಚೆ ತಾನೆ ಬಂದೆನ್ನ ಮುದ್ದಿ ಸುತಿರಲು ಮುನ್ನ" ಮುಂದಿನದು ಏಕತಾಳದಲ್ಲಿ "ಕಂಚುಕಿಯೊಳಗಿನ ಮಿಂಚುವ ಸೊಬಗಿನ ಕಂಚು ಫಲವಿಡಿದು ಚಂಚಲತೋರಿದ" (ಇಲ್ಲಿ ಕಂಚು ಫಲವೆಂಬಲ್ಲಿಂದ ತೋರಿದ ಎನ್ನುವಲ್ಲಿಗೆ ಒಂದು ದದ್ದಿಂದತ್ತಾ ಆಗುವಂತೆ ಭಾಗವತನು ಒಂದನೆಯ ಸಲ ಹೇಳಬೇಕು. ಎರಡನೆಯ ಸಲಕ್ಕೆ ಇದನ್ನು ಎರಡು ದದ್ದಿಂ ದತ್ತಾದಷ್ಟು ವಿಳಂಬವಾಗಿ ಹೇಳಿ ಮೂರನೆಯ ಸಲಕ್ಕೆ ಒಂದು ದದ್ದಿಂದತ್ತಾ... ದಷ್ಟೆ ಹಾಡಬೇಕು.) ದದಿಗಿಣ ತೈ ತಿತಿತ್ತೈ ತಾಳದಲ್ಲಿ "ಕಾಮಿನೀ ಕರೆದು ತಾರೆ" ತೈ ತಿತ್ತಿತೈ .... ತೈದಿನ ತೈದಿನ..... ತೈ ತೈ ತೈ ತೈ ತೈ ತತ್ತಾಂ ತಕ ತರಿಕಿಟ ತರಿಕಿಟ ತಾಂ ತತ್ತಾ ಕಿಟತಕ ತರಿಕಿಟ ತಾಂ ತರಿಕಿಟ ಧಿನ್ನದ್ಧಾಂ ತರಿಕಿಟ ಧಿನ್ನದ್ಧಾಂ ತರಿಕಿಟ ಧಿನ್ನದ್ಧಾಂ ಆಹೋ ಹೋ ಇಲ್ಲಿ ಮೇಳದ ಯಜಮಾನನ ಹೊಗಲಿಕೆ ದಕ್ಕಿತ್ತು. ಇನ್ನು ಮೇಲೆ ತುಂಡು ಪದ್ಯ ಹೇಳಿ ಸ್ತ್ರೀವೇಷ, ಹಾಸ್ಯವೇಷವನ್ನು ಕುಣಿಸಿ ಕೊನೆಗೆ ತೋಂಗ ತೋ ತಕದ ದಿಂದತ್ತಾ ಇಷ್ಟನ್ನು ಭಾಗವತನು ಹೇಳಲೇ ಬೇಕು. ಮದ್ದಳೆಗಾರನು ದಾ ತರಿಕಿಟ ಕಿಟತಕ ತರಿಕಿಟ ತತ್ತತಾಂ ದಿದ್ದಾದದಿ ಗಿಣತೊ ಎಂದು ಬಾರಿಸಿದೊಡನೆ ಸ್ತ್ರೀ ವೇಷವು ಹೋಗುವುದು. ಅನಂತರ "ಹೋಗಿ ಹೇಳಮ್ಮ ಹೊತ್ತು" ಎಂಬ ಪದ್ಯವನ್ನು ಭೈರವಿ ಅಷ್ಟತಾಳದಲ್ಲಿ ಹಾಡಿ ಮುಗಿತಾಯದ ತನಕ ಹಾಸ್ಯಗಾರನು ಕುಣಿದು ಹೋಗುವನು.

**ಪೀಠಿಕೆ – ಚೆಂಡೆಯಲ್ಲಿ – ಏಕತಾಳ**

ದಿಗ್ಡ್ ದಿಗ್ಡ್ ದಿಗ್ಡ್ ಡಡ್ಡಿಂಗ್ಣ್ ಡಡ್ಡ ಡಡ್ಡಿಂಗ್ಣ್ ಡಡ್ಡಿಂಗ್ಣ್ ಥಂ ತರಿಕಿಟ ತರಿಕಿಟ ಧಿಂ ಥಂ ತರಿಕಿಟ ತರಿಕಿಟ ಧಿಂ ಡೀಂಗ್ಣ್ ಡ ಡ್ಡ ಡ್ಡೀಂಗ್ಣ್ ಡ ಡ್ಡ ಡಗ ಡಗ ಡಗ ಡಗ ಡಾಂ

ರ ಡ್ಡಡ್ಡಾಂ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ಪಡಾಂ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ಪಡಾಂ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ಪಡಾಂ, ದಿಗ್ಡ್ ದಿಗ್ಡ್ ಪಡಾಂ, ದಿಗ್ಡ್ ದಿಗ್ಡ್ ಪಡಾಂ, ದಿಗ್ಡ್ ಪಡಾಂ, ದಿಗ್ಡ್ ಪಾಡಂ, ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ಧಾಂ, ತರಿಕಿಟತಕ ತರಿಕಿಟತಕ (ಉರುಳಿಕೆ) ತರಿಕಿಟತಕ ರಡ್ಡಡ್ಡಾಂ ಕಿಟತರಿಕಿಟ ತಕ್ಕುಡಾಂ ರಡ್ಡಡ್ಡಾಂ ತರಿಕಿಟಧಿಂ (ನಿಧಾನವಾಗಿ) ದೀಂಗ್ಣ್ ಕಿಟತಕ ತರಿಕಿಟ ಡಡ್ಡ ಡ್ಡಿಂಗ್ಣ್ ಕಿಟತಕ ತರಿಕಿಟ (ಮುಂದೆ ಮದ್ದಳೆಗಾರನ ಮನೋಧರ್ಮಕ್ಕೆ ಅವಕಾಶ – ಭಾಗವತನು ಜಾಗಟೆಯಲ್ಲಿ ಬಾರಿಸುವ ಏಕತಾಳವನ್ನವಲಂಬಿಸಿ ಎಲ್ಲ ತಾಳಗಳ ಗತಿವಿನ್ಯಾಸವನ್ನು ಚೆಂಡೆಯಲ್ಲಿ ಬಾರಿಸುವುದು. ಕೊನೆಗೆ ) ತ್ರೈತ ತಕತ ಧಾಂಗ್ರ ಧಾಂಗ್ರ ಧಾಂಗ್ರ ಡಡ್ಡಡ್ಡ ಧಾಂಗ್ರ ಧಾಂಗ್ರ ಧಾಂಗ್ರ ಡ್ಡೀಂ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ದಿಗ್ಡ್ ಪಡಾಂ (3 ಸಲ) ದಿಗ್ಡ್ ದಿಗ್ಡ್ ದಿಗ್ಡ್ ಪಡಾಂ (3 ಸಲ) ದಿಗ್ಡ್ ಪಡಾಂ (3 ಸಲ) ದಿಗ್ಡ್ ಪಡಾಂ ಡೀಂ (ಉರುಳಿಕೆ ನಿಧಾನವಾಗಿ, ಲಘುವಾಗಿ ಮತ್ತು ಲಘುವಾಗಿ ಘನವಾಗಿ ಹೀಗೆ ಎರಡು ವಿಧ ಬಾರಿಸಿ) ದದ್ದಿಂದತ್ತಾ ಮೂರುಸಲ – ಕೊನೆಯ ದಧಿಗಿಣತೊ ಅಥವಾ ಚೆಂಡೆಯಲ್ಲಿ ತರಿಕಿಟ ತರಿಕಿಟಧಿಂ, ತರಿಕಿಟ ತರಿಕಿಟಧಿಂ, ತರಿಕಿಟ ತರಿಕಿಟಧಿಂ, ತರಿಕಿಟ ತರಿಕಿಟ, ತೈಕು ತೈಕು ತಾ ತಾ ತರಿಕಿಟ ದ್ದಾ, ತೈಕು ತೈಕು ತಾ ತಾ ತರಿಕಿಟ ದಿದ್ದಾ ದೀಂ.... ಇಲ್ಲಿ ಎರಡು ಆವರ್ತನೆಯಷ್ಟು ಕಾಲ ಎಲ್ಲರೂ ವಿರಮಿಸಿ ತೈಕು ತೈಕು ತಾ ತಾ ತರಿಕಿಟ ದಿದ್ದಾ ತೈಕು ತೈಕು ತಾ ತಾ ತರಿಕಿಟ ಧೀ ತರಿಕಿಟ ದದ್ದಿಂಧತ್ತಾ ದದಿಗಿಣ (ಮುಂದಿನದು ದಿಗ್ರ್ರಾಗ್ಣ್ ಎಂದು ಹೆಸರು) ಡಡ್ಡಗ, ಡಡ್ಡಗ, ಧಂ ತರಿಕಿಟ ತರಿಕಿಟ ಧಿಂ, ಧಂ ತರಿಕಿಟ ತರಿಕಿಟ ಧಿಂ, ಡಂ ತರಿಕಿಟ, ತಕತರಿಕಿಟ ತಕ, ಧಂ ತರಿಕಿಟ ತಕ ತರಿಕಿಟ ತಕ ಡಂ ತರಿಕಿಟತ ತಾಂ ದಿಂ ತರಿಕಿಟ ರಡ್ಡಡ್ಡಾಂ ಕಿಟತಕ ತರಿಕಿಟ ರಡ್ಡಡ್ಡಾಂ ರಡ್ಡಡ್ಡಾಂ ತರಿಕಿಟ ಧಿಂ.

ಈ ವಾದನದಲ್ಲಿ ಚೆಂಡೆಗೆ ಪ್ರಾಧಾನ್ಯ. ಇತರ ಹಿಮ್ಮೇಳದವರು ಚೆಂಡೆವಾದಕನಿಗೆ ಹೊಂದಿಕೊಳ್ಳತಕ್ಕದ್ದು.

ಕೇಳಿ ಬಾರಿಸುವಾಗ : ಇದೇ ಪ್ರಾರಂಭ ಮತ್ತು ನಿಧಾನ ಗತಿ ಆಗಿ ತ್ರೈತ ತಕತ ಬಾರಿಸಿ ಮೂರು ದದ್ದಿಂದತ್ತಾ ಆಗಿ ಮಟ್ಟೆತಾಳದ ನಡೆಯಲ್ಲಿ ಸ್ವಲ್ಪ ಬಾರಿಸಿ ಡ್ಡೀಂಗ್ಣ್ ಆಮೇಲೆ –

ದದ್ದೀಂದತ್ತಾ..... ದಧಿಗಿಣ ಡ ಡ್ಡೀಂಗ್ಣ್s ತರಿಕಿಟ ಕಿಟಾ ತ ದ್ದೀಂ ಕಿಟಾ ತಕ ದೀಂಗ್ಣಾ ಡ ಧಂ ತರಿಕಿಟ ತಕ ತರಿಕಿಟ ತಕ ಧಂ ತರಿಕಿಟ ತ ತ್ತಾಂ ತರಿಕಿಟ ದದ್ದಿಂದತ್ತಾ.... ದಧಿಗಿಣ ಧೀಂಗ್ಣ್ ಬಾರಿಸಿ ಮುಗಿತಾಯದ ಕೊನೆಯ ದಧಿಗಿಣ ತ್ರೈತ ತಕತ ಧೀಂತ ತಕತ ಡಂಗ್ರ ಡಂಗ್ರ ಡ್ಡೀಂ. ತರಿಕಿಟ (ಉರುಳಿಕೆ) ರಡಡ್ಡ ಗಿಡಡಾಂ ರಡ್ಡಡಾಂ ಡಾಂ ರಡ್ಡ ಡೀಂಗ್ಣ್.

ಹೊಡೆದು ಮುಗಿತಾಯ. ಇದಕ್ಕೆ ತೈಕು ತೈಕು ಬಾರಿಸುವ ಸಂಪ್ರದಾಯ ಇರುವುದಿಲ್ಲ. ಸುಮಾರು 45 ವರ್ಷಗಳ ಹಿಂದೆ ಭಾಗವತರಾಗಲೀ ಸಂಗೀತಗಾರರಾಗಲೀ ಕುಳಿತು ಹಾಡುವ ಕ್ರಮವಿರಲಿಲ್ಲ. ಭಾಗವತರು ಸ್ತ್ರೀವೇಷ ಕುಣಿಸುವಾಗ ವೇಷದ ಹಿಂದಿನಿಂದ ರಂಗಸ್ಥಳದಲ್ಲಿ ಹಿಂದೆ ಮುಂದೆ ಬಾಯಿ ತಾಳ ಹೇಳಿಕೊಂಡು ಹೋಗುವ ಕ್ರಮವಿತ್ತು. ಈಗ ಹಿಮ್ಮೇಳದವರಿಗೆ ರಂಗಸ್ಥಳದಲ್ಲಿಟ್ಟಿರುವ ಚಕ್ರಗಳಿರುವ ಪೀಠದ ಹಿಂದುಗಡೆ ಆಸನ ವ್ಯವಸ್ಥೆಯಿದೆ.

## ಪೀಠಿಕೆ ಸ್ತ್ರೀವೇಷ (ಎರಡು ಸ್ತ್ರೀವೇಷಗಳು)

ಭಾಗವತರು "ಹರಸುತ ಗಜವಕ್ತ್ರಂ .... ವೇದ ವೇದ್ಯಂ... ನಮಾಮಿ" ಎಂಬಲ್ಲಿಗೆ ಧಿ ತ್ತತ್ತಾ ದಿಗ್ದ್ ತಕ ದಿಗ್ದ್ ತಕ ದದ್ದಿಂ ದತ್ತಾ ಕಿಟ ತರಿಕಿಟ .... ದದಿ ಗಿಣ ಬಾರಿಸಿದ ಮೇಲೆ ಭಾಗವತನು ತ್ತಧಿಮಿ ತಕಿಟ ತಕತ ದಿಂದತ್ತೇ..... ಹೇಳುತ್ತಾ 'ತ್ತೇ' ಎನ್ನುವಲ್ಲಿ ಸುಮಾರು ಮೂರು ಆವರ್ತದಷ್ಟು ಕಾಲ ದೀರ್ಘವಾಗಿ ಸ್ವರ ಎಳೆಯಬೇಕು. ಮತ್ತೆ ಸ್ವಲ್ಪ ವೇಗವಾಗಿ ಇದನ್ನೇ ಹೇಳುತ್ತಾ ಮೂರು ಆವರ್ತನ ಮುಂದುವರಿಸಿ ದಿಮಿತ ಕಿಟ ದಿಂದತ್ತೇ ಭಾಗವತರು ಹೇಳಿದಂತೆ ಚೆಂಡೆ ಮದ್ದಳೆ ಬಾರಿಸುತ್ತಾ ಸ್ವರ ಎಳೆಯುವಾಗ ಚೆಂಡೆಯ ಬದಿಯ ನಾದ ಕೊಡುತ್ತಾ ಇರಬೇಕು. ಇದರ ಮುಗಿತಾಯ ಹೀಗೆಯೇ ಸಾಗಿ ಕೊನೆಗೆ ತತ್ತಾಂ ಧೀಂ ತರಿಕಿಟ ತಕ ತರಿಕಿಟ ದದ್ದ ದ್ದೀಂತ ತರಿಕಿಟ ದದಿಗಿಣ ಬಾರಿಸಿ ದೀಂಗ್ಣ್ ಹೊಡೆದಾಗ ದೀಂಗ್ಣಕ್ಕೆ ಈ ಸ್ತ್ರೀ ವೇಷಗಳ ಪ್ರವೇಶ. ಮುಗಿತಾಯ ಆದಮೇಲೆ ಏಕತಾಳದ ಪದ್ಯ 'ಹರಿಹರ ಕ್ರತುಹರ' ....ದ ಬಿಡಿತ– ಮುಗಿತಾಯದ ಮೇಲೆ ಝಂಪೆ ತಾಳದಲ್ಲಿ 'ಪರಿಪಾಹಿಮಾಂರಾಮಾ..... ಪದ್ಯಕ್ಕೆ ಬಿಡಿತ ಬಾರಿಸಿ ಮುಂದೆ ದಾಂ ದಾಂ ದಾಂ ಧಾಂ ಕಿಟತಕ ಧೀಂ ಧೀಂ ಧೀಂ ಧೀಂ ಕಿಟತಕ ದದ್ದಿಂದತ್ತಾ ಕಿಟತಕ ತರಿಕಿಟ ತತ್ತಾ ದದಿಗಿಣ. ಮುಗಿತಾಯ ಎರಡು ಆವರ್ತದ ಕಾಲವಾಗಿದೆ. ಎರಡು ಪದ್ಯವನ್ನು ನಿಧಾನ ಝಂಪೆಯಲ್ಲಿ, ಎರಡನ್ನು ತ್ವರಿತ ಝಂಪೆಯಲ್ಲಿ ಹೇಳುವುದು ವಾಡಿಕೆ. ಇವುಗಳ ಬಿಡಿತ – ಮುಗಿತಾಯದ ಮೇಲೆ ಮಟ್ಟೆತಾಳದಲ್ಲಿ 'ಪಂಪಾರ್ಬಲ ಪಯ ಮಾರ್ಬಲ' ಈ ಮೂರು ಪದ್ಯವನ್ನು ವೀರರಸದಲ್ಲಿ ಹೇಳಿ ಬಿಡಿತ – ಮುಗಿತಾಯವಾಗಿ ಅಷ್ಟತಾಳದಲ್ಲಿ 'ಅಂಬುಜ ದಳ ನಯನೇ' ಒಂದು ಪದ್ಯ ಹೇಳಿ ಬಿಡಿತ ಮುಗಿತಾಯದ ಅನಂತರ ಉಡಾಪೆಯಲ್ಲಿ "ಉಡುಪತಿ ನಗುತಿರೆ ಕಡು ಮುಳಿದಾತಗೆ" ಮುಗಿತಾಯ ದಧೀಂಕು ತಕತಾಂ ತರಿಕಿಟ ತಕ ದದಿಗಿಣ ದೀಂಗ್ಣ್ ದೀಂಗ್ಣ್‌ದ ಕೊನೆ ಮುಗಿತಾಯಕ್ಕೆ ಭಾಗವತನು ತೋಂಗತ್ತೊಂ ತಕತ ದಿಂದತ್ತಾ ಹೇಳುವಾಗ ಪೀಠಿಕೆ ಸ್ತ್ರೀ ವೇಷ ನಿರ್ಗಮನ,

ಮುಂದೆ "ಅಂಬುರುಹದಳ ನೇತ್ರೆ...." ಈ ಭಾಮಿನಿಯ ಕೊನೆಗೆ ಧೀ ತತ್ತಾ ದಿಗ್ದ್ ತಕ (ಇದಕ್ಕೆ 'ದಿತ್ತ' ಎನ್ನುತಾರೆ.) ದಿಗ್ದ್ ತಕ ದದ್ದಿಂ ದತ್ತಾ.... ದದಿಗಿಣ ಧೀಂ ಕಿಟ ಕಿಟತಕ ತರಿಕಿಟ ದದ್ದ ಧೀಂಕಿಟ... ಇದು ವಿಳಂಬ ಕಾಲದಲ್ಲಿ.

## ತೆರೆ ಕುಣಿತ

ರಂಗಸ್ಥಳದ ಪ್ರವೇಶ ದ್ವಾರದಲ್ಲಿ ಎತ್ತಿ ಹಿಡಿದ ತೆರೆಯ ಹಿಂದೆ ವೇಷಧಾರಿ ಬಂದು ನಿಂತು ಭೂಮಿಯನ್ನು ಮುಟ್ಟಿ ನಮಸ್ಕರಿಸಿ ಭಾಗವತರನ್ನೂ ಮದ್ದಳೆಗಾರರನ್ನೂ ಮುಟ್ಟಿ ನಮಸ್ಕರಿಸುತ್ತಾನೆ. ಇದು ಅವರಿಗೆ ಕೊಡುವ ಗೌರವವೂ ಹೌದು. ತಾನು ಸಜ್ಜಾಗಿ ಬಂದೆನೆನ್ನುವ ಸೂಚನೆಯೂ ಹೌದು. ಮದ್ದಳೆಗಾರನು ಮುಗಿತಾಯ ದದ್ದಿಂದತ್ತಾ ಬಾರಿಸಿ ತೈಕು ತೈಕು ಪ್ರಾರಂಭಿಸುತ್ತಾನೆ. ತೈಕು ತೈಕು ಬಾರಿಸಿದಾಗ ವೇಷದ ಕುಣಿತ ತೆರೆಯ ಹಿಂದೆ – ದದ್ದಿಂದತ್ತಾ....

ದದಿಗಿಣ ಧಾಂ ತರಿಕಿಟ ತಕ ತರಿಕಿಟ ಕಿಟತಕ ಧಾಂತರಿ ಕಿಟತಕ ತರಿಕಿಟ ಕಿಟತಕ ಧಾಂ ತರಿಕಿಟ ತಕ ತರಿಕಿಟ ಕಿಟತಕ ಧಾಂತರಿ ಕಿಟತಕ ಡಗ ಡಗ ಡಾಂ ಡಿಂ ತರಿಕಿಟ

ದದ್ದಿಂದತ್ತಾ... (3 ತಾಳಕ್ಕೆ) ದದಿಗಿಣ (ಧಿನ್ನದ್ದ ನಕದಿಂ ದನ್ನದ್ದ ತರಿಕಿಟ ತತ್ತಾ ತಾಳ ಬಿಡದೆ ಹೋಗುವ ಕ್ರಮ) ದಿಂ ದತ್ತಾಂ ತಾ ತರಿಕಿಟ ದಿನ್ನ ದ್ಧಾಂ ತಾ ತರಿಕಿಟದಿಂದತ್ತಾಂ ತಕ್ಕ ತರಿಕಿಟ ದಿಂದತಾಂ ತಾ ತರಿಕಿಟ ತತ್ತದಿಂ ತರಿಕಿಟ ಪ್ಡಾಂ ತ್ತತ್ತದಿಂ ತರಿಕಿಟಾಂ ತತ್ತದಿಂ ತರಿಕಿಟತಕ ತರಿಕಿಟ ದಿದ್ದಂದೀಂತ ತರಿಕಿಟ ದದಿಗಿಣತೊ.

ಇಷ್ಟು ಒಂದು ವೇಷದ ತೆರೆ ಕುಣಿತದ ಕ್ರಮ. ಆರಂಭದ ಒಡ್ಡೋಲಗದ ಎಲ್ಲ ವೇಷಗಳಿಗೂ ಬೇರೆ ಬೇರೆಯಾಗಿ ಇದೇ ಕ್ರಮ. ಈ ತೆರೆಯ ಮರೆಯ ಕುಣಿತವನ್ನು ತೆರೆ ನಾಟ್ಯ, ತೆರೆಕಲಾಶವೆನ್ನುತ್ತಾರೆ. ತೆರೆಕ್ಲಾಸ್ ಎನ್ನುವುದು ಹೆಚ್ಚು ರೂಢಿ. ಅನಂತರ ತೆರೆ ಹಿಡಿಯುವವರು ರಂಗಸ್ಥಳದಲ್ಲಿ ಭಾಗವತರ ಎದುರುಗಡೆ ನಿಲ್ಲುವರು. ಹಿಂದೆ ವೇಷಗಳು ನಿಲ್ಲುತ್ತವೆ – ಭಾಗವತರು ಆದಿತಾಳದಲ್ಲಿ "ಹೇ ದೇವ ದೇವಾ...." ಹಾಡಿ ಬಿಡಿತದಲ್ಲಿ ದದ್ದಿಂದತ್ತಾ... ಕ್ಕೆ ತೆರೆ ತಗ್ಗಿಸುವರು. ಆ ಪದ್ಯದ ಮುಗಿತಾಯಕ್ಕೆ ತೆರೆ ಎತ್ತುವರು. "ನಂಬಿದವರಾ ... " ಬಿಡಿತಕ್ಕೆ ತೆರೆ ತಗ್ಗಿಸುವರು. ಇಡೀ ಚರಣವನ್ನು ಆದಿತಾಳದಲ್ಲಿ ಹೇಳಿ ಅರ್ಧದಿಂದ ಏಕತಾಳದಲ್ಲಿ ಎರಡು ಸಲ ಹೇಳಿದ ಮೇಲೆ ದೀಂಕಿಟ ನಕದಿನ ದೀಂಕಿಟ ನಕದಿನ ದಿತತ್ತಾ ದಿಗ್ಡ್ತಕ ದಿಗ್ಡ್ತಕ ದದ್ದಿಂದತ್ತಾ.... ದದಿಗಿಣ ಮುಗಿತಾಯಕ್ಕೆ ತೆಯೆತ್ತುವರು. ಡಡ್ಡಾಂಗ್ರ ಡಡ್ಡಾಂಗ್ರ ಡಿಂಗ್ಣ್ ಕಿಟತಕ ತರಿಕಿಟ ಕಿಟತಕ (ವೇಷಗಳು ಹಿಂದೆ ಬರುವ ವರೆಗೆ ಇದನ್ನು ಬಾರಿಸುತ್ತಾ ಡಗ ಡಗ ಡಾಂ ರಿ ತರಿಕಿಟ ರಡ್ಡಡ್ಡಾ ಕಿಟತಕ ತರಿಕಿಟ ತಕ್ಕಿಡಾಂ.... ದಧಿಗಿಣತೊ, "ಮುರಮಥನ" ಈ ಚರಣವನ್ನು ಆದಿತಾಳದಲ್ಲಿ ಹೇಳುವಾಗ ವೇಷಗಳು ಕೈ ಕೈ ಹಿಡಿದು ಕುಣಿಯುವುದು. ಅರ್ಧದಿಂದ ಏಕತಾಳದಲ್ಲಿ ಎರಡು ಸಲ ಹೇಳುವುದು. ದದ್ದಿಂದತ್ತಾ – ಮುಗಿತಾಯ –ಮುಂದೆ ಏಕತಾಳದಲ್ಲಿ 'ಕರುಣ ನಿಧೇ" ಎಂದು ಬಿಡಿತ ಕೊಟ್ಟು ಚರಣದ ಕೊನೆಗೆ ಮೂರು ದಧಿಗಿಣ ತೊ ಬಾರಿಸಿ ತಿತ್ತಿತ್ತೈ ಗತಿಯಲ್ಲಿ "ಕರುಣ ನಿಧೇ"ಯನ್ನು ಹಾಡಿ ತತ್ತೈ ತಿತ್ತಿತ್ತೈ ಗತಿಯು ವೇಗವಾಗಿ ತೈತ ತಕತದಲ್ಲಿ ರಂಗಸ್ಥಳದಿಂದ ನಿರ್ಗಮಿಸಿ ದೀಂಗ್ಣ್‌ದಲ್ಲಿ ಪ್ರತಿವೇಷವು ರಂಗಪ್ರವೇಶ ಮಾಡಿ ಕುಣಿದು ಒಳಗೆ ಹೋಗುವುದು. ಮುಂದೆ ತದ್ದೀಂಕಿಟಾಂ ತಕ ದೀಂ ಕಿಟಂ ಬಾರಿಸುವಾಗ (ಪಾಂಡವರ ಒಡ್ಡೋಲಗವಾದರೆ) ಧರ್ಮರಾಯನು ಮುಂದೆ ಇದ್ದು ಉಳಿದವರು ಕ್ರಮವಾಗಿ ಹಿಂಬಾಲಿಸಿಕೊಂಡು ರಂಗಸ್ಥಳದಲ್ಲಿ ಒಂದು ಸುತ್ತು ಬಂದು ಕುಣಿಯುತ್ತಾ ನಿರ್ಗಮಿಸುವರು. ತಧೀಂ ಕಿಟತಕ ದದ್ಧೀಂದತ್ತಾ... ದಧಿಗಿಣತೊ ಮುಗಿತಾಯ ವಾಗಿ ಏಕತಾಳದಲ್ಲಿ "ಕುಂದ ರದನ" ಜಾಗಟೆ ಎತ್ತುವಾಗ ಧೀ ತತ್ತಾ ದಿಗ್ಡ್ ತಕ ತಕ ದಿಗ್ಡ್ ತಕ ತಕವನ್ನು ಎಲ್ಲ ವೇಷಗಳೂ ಎರಡು ಬದಿಯಿಂದ ರಂಗಪ್ರವೇಶ ಮಾಡುವ ವರೆಗೆ ಬಾರಿಸುತ್ತಾ ದಧಿಂದತ್ತಾ ... ಬಾರಿಸಿ "ಕುಂದ ರದನ" ಪದ್ಯವನ್ನು ಹಾಡಿ ಕೊನೆಗೆ ಮೂರು ದಧಿಗಿಣತೊ ಬಾರಿಸಿ "ಇಂದೀವರಾಕ್ಷ" ರಾಗ ಎಳೆದು ಮೂರು ದದ್ದಿಂದತ್ತಾ ದಧಿಗಿಣ ತಾ ತಹತ ದಿನ್ನತೈ ಧೀಂತ ದಿನ್ನತೈ ತಕತ ದಿನ್ನ ತೈ ಹೇಳಿ ಮೂರು ದದ್ದಿಂದತ್ತಾ "ದೇವ । ಇಂದ್ರಾದಿ ರಕ್ಷ । ವಂದಿಸುವೆನೂ, ಗೋವಿಂದ ರಕ್ಷಿಸು" ತ್ತಿತ್ತೆತ್ತೈ, ತತ್ತೈ ದಿನ್ನತ್ತೈ ತೈದಿನ್ನತ್ತೈ ಗತಿ ವೇಗವಾಗಿ ತೈತ ತಕತ ಮತ್ತೆ ಮುಗಿತಾಯ. ದೀಂಗ್ಣ್, ನಕುಲ ಸಹದೇವ, ಭೀಮನಿಗೆ ದೀಂಗ್ಣ್, ಅರ್ಜುನನಿಗೆ ಸಭಾಕಲಾಸು ಧರ್ಮರಾಯನಿಗೆ ಬರೇ ದದ್ದಿಂದತ್ತಾ....

## ಸಭಾ ಕಲಾಸು – (ಸಭಾ ಕಲಾಶ)

ನಕುಲ ಸಹದೇವರಿಗೆ ದೀಂಗ್ಣ್ ಮುಗಿತಾಯವಾದ ಮೇಲೆ ಸಭಾ ಕಲಾಸಿನ ಸೂಚನೆಯೆಂಬಂತೆ ದದ್ದಿಂದತ್ತಾ ದಧಿಗಿಣ ತೈಕು ತೈಕು ತಾತಾ ತರಿಕಿಟ ದಿದ್ದಾ (ಮೂರು ಸಲ) ದದ್ದಿಂದತ್ತಾ ದದಿಗಿಣ ಧಾಂ ತರಿಕಿಟ ತಕ ತರಿಕಿಟ ದಿದ್ದಾ (ಮೂರು ಸಲ) ಇದರಲ್ಲಿ ಆವರ್ತನ ಮಾಡಬಹುದು. ತಳಾಂಕು ದಧಿಗಿಣ (ನಾಲ್ಕು ಸಲ) ನಾಲ್ಕು ನೆಗೆತ ನಾಲ್ಕು ಕಡೆ ಹಾರಿದ ಮೇಲೆ (ಸ್ವಲ್ಪ ವೇಗ ಗತಿಯಲ್ಲಿ) ದದ್ದಿಂ ದತಾ ಮೊದಲಿನ ಗತಿಯ ಎರಡನೆಯ ಕಾಲದಲ್ಲಿ ಹೊಡೆದು ದದ್ದಿಂದತಾ ಇದು ಈಗಿನ ಕ್ರಮ. ದಧಿಗಿಣ ಧಿತ್ತತತ್ತಾ ದಿಗ್ಡ್ ತಕ ತಕ ತಕ ದಿಗ್ಡ್ ತಕ ತಕ ತಕ ದಿಗ್ಡ್ ತಕ ದಿಗ್ಡ್ ತಕಧಿಂ (ಮೂರು ಸಲ) ದಿತ್ತ ತತ್ತಾ ದಿಗ್ಡ್ ತಕದಿಂ. (ಮೂರು ಸಲ) ದಿಗ್ಡ್, ತಕಧಿಂ, (ಮೂರು ಸಲ) ದಿಗ್ಡ್ ತಕ ದದ್ಧಿ ದತ್ತಾ ದಧಿಗಿಣ ಡಾಂಗ್ರಡ್ಡ ಡಾಂಗ್ರಡ್ಡ ಡಾಂಗ್ರಡ್ಡ ಧೀಂ। ಕಿಟತಕ, ಡಾಂಗ್ರಡ್ಡ ಡ್ರಾಂ ಗ್ರಡ್ಡ ಡಾಂಗ್ರಡ್ಡ ಧಿಂ। ಕಿಟತಕ ಡಾಂಗ್ರಡ್ಡ ಡಾಂಗ್ರಡ್ಡ ಡಾಂಗ್ರಡ್ಡಧಿಂ। ಕಿಟತಕ ಡಾಂಗ್ರಡ್ಡ ಡಾಂಗ್ರಡ್ಡ ಡಾಂಗ್ರಡ್ಡ ಧಿಂ। ಕಿಟತಕ ಡಾಂಗ್ರಡ್ಡದಿಂ ಕಿಟತಕ ಡ್ರಾಂಗ್ರಡ್ಡದಿಂ, ಕಿಟತಕ ಧಾಂ, ಕಿಟತಕ ಧಾಂ, ಕಿಟತಕ ದದ್ದಿಂದತ್ತಾ ಆ ಮೇಲೆ ದಿಂಗ್ಣ್. ಮತ್ತೆ ಭೀಮನ ದಿಂಗ್ಣ್. ಮೂರು ಅಟ್ಟಹಾಸ, ಧರ್ಮರಾಯನ ಒಡ್ಡೋಲಗ.

## ಕಿರಾತ ವೇಷ

ಕಿರಾತನ ಪಡೆಯಿಂದ ಮೊದಲ್ಗೊಂಡು ಕಿರಾತನ ತನಕ ಒಂದೊಂದೇಯಾಗಿ ತೆರೆ ಕಲಾಸಂ ಕುಣಿಯುವುದು, ತೈತ ತಕತದಲ್ಲಿ ರಂಗಸ್ಥಳ ಪ್ರವೇಶಿಸುವುದು. ಪಡೆ ಒಂದು ಸುತ್ತು ಕುಣಿದು ನಿರ್ಗಮಿಸಿದ ಮೇಲೆ ಕಿರಾತನ ಪ್ರವೇಶ. ತೈತ ತಕತ ಧೀಂತ ತಕತ (ಕೈಕಟ್ಟಿ ಭುಜ ಕುಣಿಸಿಕೊಂಡು ಪ್ರವೇಶ) ಪುನಃ ಪಡೆ ಪ್ರವೇಶ, ನಿರ್ಗಮನ. ಕಿರಾತ ಪ್ರವೇಶಿಸಿ ತೈಕ ತಕತ ಕುಣಿದು ಮಟ್ಟೆ ಇತ್ಯಾದಿ ಐದಾರು ತರದ ಕುಣಿತಗಳನ್ನು ಕುಣಿಯುವುದು. ಆ ಮೇಲೆ ಬಿಲ್ಲು ಬಾಣ ಹಿಡಿದು ಬೇಟೆಯಾಡುವ ಕ್ರಮ ಗುರಿ ನೋಡುವುದು. ಬಾಣ ಹೊಡೆಯುವುದು – ಇದಾಗಿ ಪಡೆಗೆ ಮತ್ತು ಮುದಿಯಪ್ಪಣ್ಣನೆಂಬ ಮಂತ್ರಿ (ವಿದೂಷಕ) ದೀಂಗ್ಣ್ ಆಗಿ ದಸ್ತ್ ಮೆಟ್ಟುವಾಗ ಬೀಳುವನು. ಪಡೆಯವರು ಹೊತ್ತುಕೊಂಡು ಹೋದ ಮೇಲೆ ಕಿರಾತನಿಗೆ ದೀಂಗ್ಣ. ಪದ್ಯ "ಬೇಟೆಯಾಡುತ್ತ ಬಂದ" ಏಕತಾಳದಲ್ಲಿ ಮೂರು ದದ್ದಿಂದತಾ... ತತಹತ ದಿಂದ ತೈ ಧೀಂತ ದಿಂದತ್ತಾ ದಿದ್ದಾ ದದ್ದಿಂದತ್ತಾ ಮೂರು ಸಲ ಬೇಟೆಯಾಡುತ್ತಾ ಮುಗಿತಾಯ. ಮೂರು ದಧಿಗಿಣ ತೊ. ಮುಂದೆ ಮಾರವಿ ಏಕತಾಳದಲ್ಲಿ "ಕಾಟಕ ಮೃಗಗಳ" ಬಿಡಿತ, ಪದ್ಯ, ಮುಗಿತಾಯ (ದೀಂತ ತಕತ – ಮುಗಿತಾಯ).

## ಬಣ್ಣದ ವೇಷ – ತೆರೆ ಪೊರಪ್ಪಾಟು

ಅಟ್ಟಹಾಸ : 1 ಚೌಕಿಯಲ್ಲಿ, 1 ಚೌಕಿ ರಂಗಸ್ಥಳದ ಮಧ್ಯೆ, 1 ತೆರೆಯ ಮರೆಯಲ್ಲಿ. ಚೆಂಡೆ – ಭಾಮಿನಿ ಯಾ ಕಂದ ಪದ್ಯದ ಕೊನೆಗೆ ಧೀತ್ತ ತತ್ತಾ ದಿಗ್ಡ್ ತಕ ತಕ ತಕ ದಿಗ್ಡ್ ತಕ ತಕ ತಕ ದಧಿಂದತ್ತಾ ಕಿಟತಕ ತರಿಕಿಟ ತಕ್ಕ್‌ಡಾಂ ರಡ್ಡಡ್ಡಾಂ ತರಿಕಿಟ ಡಡ್ಡಾಂಗ್ರಡ

ಡ್ಡಾಂಗ್ರ ಡಾಂಗ್ರ ತರಿಕಿಟತಕ ಡಾಂಗ್ರ ಡಾಂಗ್ರ ಡಾಂಗ್ರ ಢೀಂ. ಉರುಳಿಕೆ ತರಿಕಿಟ ತಕತರಿ ಕಿಟತರಿ ಕಿಟತಕ ಡಡ್ಡಾಂಗ್ರ ಡಡ್ಡಾಂಗ್ರ ಢೀಂ. ಅಟ್ಟಹಾಸ – 1. ಎರಡನೆಯದು ಹಾಗೆಯೆ, ಮೂರನೆಯ ಅಟ್ಟಗಾಸ ತೆರೆ ತಗ್ಗಿಸಿ ಡೀಂಗ್ಣ್ ಡ್ಡ ಡ್ಡ ಡೀಂಗ್ಣ್ ಡಗ ಡಗ ಡಾಂ ರೀಂ ತರಿಕಿಟ ದದ್ದಿಂದತ್ತಾ ದದಿಗಿಣ ದೀಂಗ್ಣ ಕಿಟತಕ ತರಿಕಿಟ ಕಿಟತಕ ಮೂರು ಸಲ. ದಿಂಗ್ಣ್, ಕಿಟತಕ ದೀಂಗ್ಣ ಕಿಟತಕ ಡಗ ಡಗ ಡಾಂ ರೀಂ ತರಿಕಿಟ ರಡ್ಡಡ್ಡಾಂ...... ದದಿಗಿಣ ದಿಂತತ್ತಾಂ ತಾ ತರಿಕಿಟ ದಿನ್ನದ್ದಾಂ ನಕ್ಕ ತರಿಕಿಟ ಧಿನ್ನತ್ತಾಂ ನಕ್ಕ ತರಿಕಿಟ ದಿನ್ನತ್ತಾಂ ನಕ್ಕ ತರಿಕಿಟ ದಿನ್ನದಾಂ ತತ್ತತಾಂ ತರಿ ಕಿಟಧಿಂ ತತ್ತತಾಂ ತರಿಕಿಟಧಿಂ ತತ್ತತಾಂ ತರಿಕಿಟ ಧಿಂ ಧಂ ತರಿಕಿಟ ತಕ ತರಿಕಿಟ ತಕ ಧಿಂತ ತರಿಕಿಟ ತರಿಕಿಟ ದೀಂಗ್ಣ್ ಕಿಟತಕ ತರಿಕಿಟ ಕಿಟತಕ (ಮೇಲಿನ ಅಷ್ಟತಾಳದ ನಿಧಾನ ಗತಿಯಲ್ಲಿ ಚೆಂಡೆ) ತೆರೆಯನ್ನು ರಂಗಸ್ಥಳದಲ್ಲಿ ಹಿಡಿಯುವರು. ವೇಷ ತೆರೆಯ ಹಿಂದೆ ಭಾಗವತರ ಬಳಿ ನಿಂತ ಮೇಲೆ ಥಂ ತರಿಕಿಟ ರಡ್ಡಂ ಥಂ ತರಿಕಿಟ ರಡ್ಡಂ ಡಗಡಗ ಡಾಂ ದೀಂ ತರಿಕಿಟ ರಡ್ಡಡ್ಡಾಂ ಮುಗಿತಾಯ ದದಿಗಿಣತೋಗೆ ತೆರೆ ತಗ್ಗಿಸಿ ಅಟ್ಟಹಾಸ, ದಿಗ್ಡ್ ದಿಗ್ಡ್‌ನಲ್ಲಿ ಪುನಃ ಉರುಳಿಕೆಯಲ್ಲಿ ದದ್ದಿಂದತ್ತಾಗೆ ತೆರೆ ಎತ್ತುವುದು. ಹಿಂದಿನಂತೆ ಡಡ್ಡಾಂಗ್ರ ಡಡ್ಡಾಂಗ್ರ ಡಾಂಗ್ಣ್ ಕಿಟತಕ ತರಿಕಿಟ ಕಿಟತಕ ..... ಹೊಡೆದು ಡಂ ತರಿಕಿಟ ರಡ್ಡಂ .... ಎರಡನೆಯ ಅಟ್ಟಹಾಸಕ್ಕೆ ಮೊದಲಿನಂತೆ ಮೂರನೆಯ ಅಟ್ಟಹಾಸದ ಕೊನೆಗೆ ದದ್ದಿಂದತ್ತಾ ಧದಿಗಿಣ ಧೀಂ ಎಂಬಲ್ಲಿಂದ ನಿಧಾನಗತಿಯಲ್ಲಿ ಬಣ್ಣದ ವೇಷ ಪೊರಪ್ಪಾಟು ಪ್ರಾರಂಭ. ಮುಖಮಾರ್ಜನ, ಸ್ನಾನ, ಅಲಂಕಾರ, ಪೂಜೆ ಇತ್ಯಾದಿ ಪ್ರತಿಯೊಂದಕ್ಕೂ ಥಂ ತರಿಕಿಟ ತರಿಕಿಟ ದೀಂ ಹೊಡೆದು ಉರುಳಿಕೆ ಬಾರಿಸಿ ಡಡ್ಡಾಂಗ್ರ ಡಡ್ಡಾಂಗ್ರ ಡೀಂ। ತರಿಕಿಟ ತರಿಕಿಟ ಧಿಂ ಎಂದು ಹೊಡೆದು ತೀರ್ಥ ಪ್ರಸಾದ ಸ್ವೀಕರಿಸಿದಲ್ಲಿ ತೆರೆ ಪೊರಪ್ಪಾಟು ಮುಗಿಯುತ್ತದೆ. ರಾವಣನಿಗೆ ಮಾತ್ರ ಶಿವಲಿಂಗ ಪ್ರತಿಷ್ಠೆ, ಪೂಜೆ, ಮಂಗಳಾರತಿ ಇತ್ಯಾದಿ ಮಾಡುವ ಅಧಿಕಾರ ಹೊರತು ಇತರ ರಕ್ಕಸರಿಗೆ ಇಲ್ಲವೆಂಬುದು ಸಂಪ್ರದಾಯ. ಆ ಮೇಲೆ ದೀಂಗ್ಣ್ ಕುಣಿದು ಪೀಠಾರೋಹಣ. ಹೆಣ್ಣು ಬಣ್ಣಕ್ಕೂ ಪ್ರವೇಶ ಮೇಲಿನಂತೆ ಆಗಿ ಮೂರನೆಯ ಅಟ್ಟಹಾಸದ ಮೇಲೆ ತಾಳದ ವಿಳಂಬಗತಿಯಲ್ಲಿ ಮುಖ ತೊಳೆಯುವುದು, ಹಲ್ಲುಜ್ಜುವುದು, ತಲೆ ಬಾಚುವುದು, ಹೇನು ಕೊಲ್ಲುವುದು, ಜಡೆ ಹೆಣೆಯುವುದು, ಹೂ ಮುಡಿಯುವುದು ಆದ ಮೇಲೆ ಮೇಲಿನಂತೆ ದೀಂಗ್ಣ್.

ಪ್ರಸಂಗದ ಕೊನೆಯಲ್ಲಿ ಮಂಗಲ ಪದ್ಯ ಹಾಡಿ ಆರತಿ ಅದಲ್ಲಿಗೆ ರಂಗಸ್ಥಳದಿಂದ ಚೌಕಿಗೆ ಹೋಗಿ ಅಲ್ಲಿ "ಕರದೊಳು ಪರಶು" .... ಹೇಳಿ ಆರತಿ ಮಾಡಿ ಪ್ರಸಾದ ಸ್ವೀಕರಿಸಿದಲ್ಲಿಗೆ ಆಟ ಕೊನೆಗೊಳ್ಳುತ್ತದೆ.

**(ಯಕ್ಷಗಾನ ಮಕರಂದ : ಪೊಳಲಿ ಶಾಸ್ತ್ರಿಸ್ಮಾರಕ ಗ್ರಂಥ ಸಂ. ಮುಳಿಯ ಮಹಾಬಲ ಭಟ್ಟ ಮತ್ತು ಇತರರು. 1980. ಪ್ರ: ಪೊಳಲಿ ಶಾಸ್ತ್ರಿ ಸ್ಮಾರಕ ಸಮಿತಿ, ಮಂಗಳೂರು)**



# ಮಾರ್ಕಂಡೇಯ ಪುರಾಣ ಮತ್ತು ಶ್ರೀ ದೇವೀ ಮಾಹಾತ್ಮ್ಯ

**ಹಿರಣ್ಯ ವೆಂಕಟೇಶ್ವರ ಭಟ್ಟ**
'ಹಿರಣ್ಯ', ಬಾಯಾರು ಅಂಚೆ
ಕಾಸರಗೋಡು ಜಿಲ್ಲೆ

ಯದ್ಯೋಗಿಭಿರ್ಭವಭಯಾರ್ತಿವಿನಾಶಯೋಗ್ಯಂ
ಆಸಾದ್ಯವಂದಿತಮತೀವ ವಿವಿಕ್ತಚಿತ್ರೈಃ ।
ತದ್ವಃ ಪುನಾತು ಹರಿಪಾದಸರೋಜಯುಗ್ಮಂ
ಆವಿರ್ಭವತ್ಕ್ರಮವಿಲಂಘಿತಭೂರ್ಭುವಃಸ್ವಃ ॥

ಪಾಯಾತ್ಸ ವಃ ಸಕಲಕಲ್ಮಷಭೇದದಕ್ಷಃ
ಕ್ಷಿರೋದಕುಕ್ಷಿಫಣಿ ಭೋಗನಿವಿಷ್ಟಮೂರ್ತಿಃ ।
ಶ್ವಾಸಾವಧೂತ ಸಲಿಲೋತ್ಕಲಿಕಾಕರಾಲಃ
ಸಿಂಧುಃ ಪ್ರನೃತ್ಯಮಿವ ಯಸ್ಯ ಕರೋತಿ ಸಂಗಾತ್ ॥

ನಾರಾಯಣ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಭಗವಂತನ ಪಾದಕಮಲಗಳೆರಡು ನಮ್ಮನ್ನು ಕಾಪಾಡಲಿ. ಭೂಲೋಕ, ಭುವರ್ಲೋಕ ಮತ್ತು ಸುವರ್ಲೋಕಗಳನ್ನು ತನ್ನ ಪಾದಗಳಿಂದ ಅಳೆದ ವಾಮನನ ತ್ರಿವಿಕ್ರಮಪಾದಗಳವು. ಏಕಾಗ್ರತೆಯ ಮನಸ್ಸನ್ನು ಹೊಂದಿದ ಯೋಗಿಗಳು ಸಂಸಾರದ ಕಷ್ಟಗಳನ್ನು ಪರಿಹರಿಸುವುದಕ್ಕಾಗಿ ಧ್ಯಾನಾಸಕ್ತರಾಗಿ ನಮಸ್ಕರಿಸುವ ಪಾದಗಳವು.

ಎಲ್ಲಾ ಕೊಳೆಗಳನ್ನು ನಾಶಮಾಡುವುದರಲ್ಲಿ ಸಮರ್ಥನಾದ, ಕ್ಷೀರ ಸಮುದ್ರದಲ್ಲಿ ಶೇಷನ ಮೇಲೆ ಮಲಗಿರುವ, ಯಾವನ ಉಸಿರಾಟದಿಂದ ಚಿಮ್ಮುತ್ತಿರುವ ಅಲೆಗಳಿಂದ ಭಯಂಕರ ವಾಗಿದ್ದರೂ, ತನ್ನಲ್ಲಿರುವ ವಿಭೂತಿಯಿಂದಾಗಿ ಚೆನ್ನಾಗಿ ನರ್ತನ

ಮಾಡುವಂತೆ ಕಾಣುತ್ತಿರುವ, ಆ ಭಗವಂತನು ಕಾಪಾಡಲಿ.

ನಾರಾಯಣನನ್ನು, ನರೋತ್ತಮನನ್ನು ಮತ್ತು ದೇವೀಸರಸ್ವತಿಯರನ್ನು ನಮಸ್ಕರಿಸಿ ಜಯವನ್ನು ಹೇಳಬೇಕು – ಪಠಿಸಬೇಕು.

ಭಗವಾನ್ ವೇದವ್ಯಾಸರು ಹದಿನೆಂಟು ಮಹಾಪುರಾಣಗಳನ್ನು ಸಾರಸ್ವತಲೋಕಕ್ಕೆ ಅನುಗ್ರಹಿಸಿದ್ದಾರೆ. ಇವುಗಳಲ್ಲಿ ಒಂದು ಮಾರ್ಕಂಡೇಯ ಪುರಾಣವು ನೂರಮೂವತ್ತನಾಲ್ಕು ಅಧ್ಯಾಯಗಳಿರುವ ಪುರಾಣವಿದು. ಮಾರ್ಕಂಡೇಯರು ಜೈಮಿನಿ ಮಹರ್ಷಿಗಳಿಗೆ ಹೇಳಿದುದರಿಂದ ಇದು ಮಾಕಂಡೇಯ ಪುರಾಣ. ಮಾರ್ಕಂಡೇಯ ಮಹರ್ಷಿ ಮತ್ತು ಜೈಮಿನಿ, ಜೈಮಿನಿ ಮಹರ್ಷಿ ಮತ್ತು ದಿವ್ಯಪಕ್ಷಿಗಳು ಮಾರ್ಕಂಡೇಯರು ಮತ್ತು ಕ್ರೌಷ್ಟುಕಿ – ಇವರ ಸಂವಾದ ರೂಪದಲ್ಲಿ ಈ ಪುರಾಣವು ಗ್ರಥಿಸಲ್ಪಟ್ಟಿವೆ.*1 ಈ ಪುರಾಣದ ಎಪ್ಪತ್ತೆಂಟನೆಯ ಅಧ್ಯಾಯದಿಂದ ತೊಂಭತ್ತನೆಯ ಅಧ್ಯಾಯದ ತನಕವಿರುವ ಹದಿಮೂರು ಅಧ್ಯಾಯಗಳು ಶ್ರೀದೇವೀ ಮಾಹಾತ್ಮ್ಯವೆಂದು ಪ್ರಸಿದ್ಧವಾದುವು. ಈ ಭಾಗವನ್ನು ಶ್ರೀ ಚಂಡೀಪಾಠ, ಶ್ರೀಸಪ್ತಶತೀ ಎಂದೂ ಕರೆಯುತ್ತಾರೆ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಾನುಚರಿತಗಳೆಂಬ ಪುರಾಣಗಳ ಪಂಚಲಕ್ಷಣಗಳಲ್ಲಿ ಮನ್ವಂತರ ನಿರೂಪಣೆಯ ಸಂದರ್ಭದ್ದು ಶ್ರೀದೇವಿ ಮಾಹಾತ್ಮ್ಯ. ಸ್ವಾಯಂಭುವ, ಸ್ವಾರೋಚಿಷ, ಔತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿಕ (ಸೂರ್ಯಸಾವರ್ಣಿಕ), ದಕ್ಷ ಸಾವರ್ಣಿಕ, ಬ್ರಹ್ಮಸಾವರ್ಣಿಕ, ಧರ್ಮಸಾವರ್ಣಿಕ, ರುದ್ರಸಾವರ್ಣಿಕ, ದೇವಸಾವರ್ಣಿಕ (ರೌಚ್ಯ) ಮತ್ತು ಇಂದ್ರ ಸಾವರ್ಣಿಕ (ಭೌತ್ಯ) – ಇವು ಹದಿನಾಲ್ಕು ಮನ್ವಂತರಗಳು. ಇವುಗಳಲ್ಲಿ ಎಂಟನೆಯದಾದ ಸಾವರ್ಣಿಕ ಮನ್ವಂತರವು ಸೂರ್ಯಸಾವರ್ಣಿಕ ಮನ್ವಂತರವೆಂದೂ ಹೇಳಲ್ಪಟ್ಟಿದೆ. ಸೂರ್ಯಪುತ್ರ ಸಾವರ್ಣಿಯು ಈ ಮನ್ವಂತರದ ಅಧಿಪತಿಯು. ಈ ಸೂರ್ಯ ಸಾವರ್ಣಿಯ ಹಿನ್ನೆಲೆಯಿರುವುದು ಸ್ವಾರೋಚಿಷಮನ್ವಂತರದಲ್ಲಿ.

ಸ್ವಾರೋಚಿಷ ಮನ್ವಂತರದಲ್ಲಿ ಮನ್ವಂತರಾಧಿಪನಾದ ಸ್ವಾರೋಚಿಷನ ಮಕ್ಕಳಲ್ಲಿ ಓರ್ವನಾದ ಚೈತ್ರನೆಂಬವನ ವಂಶದಲ್ಲಿ ಜನಿಸಿದ ಸುರಥಮಹಾರಾಜನು ಶ್ರೀದೇವಿಯ ಅನುಗ್ರಹದಿಂದ ಎಂಟನೆಯ ಮನ್ವಂತರದ ಆಧಿಪತ್ಯವನ್ನು ಪಡೆಯುತ್ತಾನೆ. ಸಮಾಧಿಯೆಂಬ ವೈಶ್ಯನು ಮೋಕ್ಷವನ್ನು ಹೊಂದುತ್ತಾನೆ. ಇದುವೇ ಶ್ರೀದೇವಿಯ ಮಾಹಾತ್ಮ್ಯವು. ಇದರ ವಕ್ತಾರರು ಮೇಧಾ ಅಥವಾ ಸುಮೇಧಸರೆಂಬ ಮಹರ್ಷಿಗಳು. ಸುರಥ ಮತ್ತು ಸಮಾಧಿಗಳಿಗೆ ಶ್ರೀದೇವಿ ಮಾಹಾತ್ಮ್ಯವನ್ನು ಹೇಳಿದವರು ವಸಿಷ್ಠಮಹರ್ಷಿಗಳೆಂದು ಶ್ರೀ ಲಕ್ಷ್ಮೀತಂತ್ರದಲ್ಲಿದೆ.

"ಜನ್ಮಾನಿ ಚರಿತೈಃ ಸಾರ್ಧಂ ಸ್ತುತಿಭಿರ್ವೇದ ವಾದಿನಾ ।
ಕಥಿತಾನಿ ಪುರಾ ಶಕ್ರ ವಸಿಷ್ಠೇನ ಮಹಾತ್ಮನಾ ॥
ಸ್ವಾರೋಚಿಷೇಂತರೇ ರಾಜ್ಞೇ ಸುರಥಾಯ ಮಹಾತ್ಮನೇ ।
ಸಮಾಧಯೇ ಚ ವೈಶ್ಯಾಯ ಪ್ರಣತಾಯಾವಸೀದತೇ ॥"

ವಸಿಷ್ಠ ಮಹರ್ಷಿಗಳೇ ಕಲ್ಪಾಂತರದಲ್ಲಿ ಸುಮೇಧಸ ಎಂಬ ಹೆಸರಿನಲ್ಲಿ ಪ್ರಸಿದ್ಧರಾಗಿ ಇದ್ದಿರಬಹುದು. ಇವರ ಹೆಸರು ಸುಮೇಧ – ರೆಂದು ಕಾತ್ಯಾಯನೀತಂತ್ರದಲ್ಲಿದೆ. (ಸಂಸ್ಕೃತದಲ್ಲಿ 'ಸುಮೇಧಸ್' ಎಂಬುದು ಸಕಾರಾಂತವಾದ ಪದವಾಗಿದೆ. ಪ್ರಥಮಾ

ವಿಭಕ್ತಿಯಲ್ಲಿ 'ಸುಮೇಧಾ:' ಎಂದಾಗುವುದು). ಕಾತ್ಯಾಯನೀ ತಂತ್ರದ ಇಪ್ಪತ್ತ ಮೂರನೆಯ ಪಟಲದಲ್ಲಿ ಶ್ರೀದೇವಿ ಮಾಹಾತ್ಮ್ಯದ ಹನ್ನೊಂದನೆಯ ಅಧ್ಯಾಯದ ಮಂತ್ರವಿಭಾಗ ನಿರೂಪಣ ಸಂದರ್ಭದಲ್ಲಿರುವ ಶ್ಲೋಕಾರ್ಧವೊಂದು ಇಂತಿದೆ. –

"ಋಷೇಃ ಸುಮೇಧಸಃ ಪ್ರೋಕ್ತಂ ವಚೋ ದೇವ್ಯಾಹತೇ ಶುಭೇ॥"

ಸುರಥ ಮತ್ತು ಸಮಾಧಿಗಳಿಗೆ ಸುಮೇಧಸ ಮಹರ್ಷಿಗಳು ಶ್ರೀದೇವೀ ಮಹಾತ್ಮ್ಯವನ್ನು ಹೇಳಿದುದು ಸ್ವಾರೋಚಿಷಮನ್ವಂತರದಲ್ಲಿ. ಆದುದರಿಂದ ಶ್ರೀದೇವೀಮಾಹಾತ್ಮ್ಯದ ಸುರಥ–ಸಮಾಧಿಗಳ ಕಥೆಯನ್ನು ಹೊರತುಪಡಿಸಿದ ಉಳಿದೆಲ್ಲಾ ಕಥಾನಕಗಳು ತತ್ಪೂರ್ವದ್ದು. ಸ್ವಾರೋಚಿಷ ಮನ್ವಂತರಕ್ಕಿಂತ ಹಿಂದಿನ ಮನ್ವಂತರ ಸ್ವಾಯಂಭುವ ಮನ್ವಂತರ. ಈ ಮನ್ವಂತರದ ವಿವರಣೆಗಳಲ್ಲಿ ಶ್ರೀದೇವೀ ಮಾಹಾತ್ಮ್ಯವು ದೊರೆಯದಿರುವುದರಿಂದ, ಶ್ರೀದೇವೀ ಮಾಹಾತ್ಮ್ಯವು ಸ್ವಾಯಂಭುವ ಮನ್ವಂತರಕ್ಕಿಂತಲೂ ಹಿಂದಿನ ಕಾಲದ್ದಾಗಿರಬೇಕು. ಹಾಗಾದಲ್ಲಿ ಅದು ಕಲ್ಪಾಂತರದ ಘಟನೆಯೆಂದು ತಿಳಿದುಕೊಳ್ಳಬೇಕಾಗುತ್ತದೆ.

ಶತ್ರುಗಳಿಂದ ಪರಾಜಿತನಾದ ಸುರಥ ಮತ್ತು ಬಂಧುಗಳಿಂದ ತಿರಸ್ಕರಿಸಲ್ಪಟ್ಟ ಸಮಾಧಿ–ಇವರೀರ್ವರೂ ಕಾಡಿನಲ್ಲಿ ಜತೆಯಾಗಿ ಸುಮೇಧ ಮಹರ್ಷಿಗಳ ಆಶ್ರಮವನ್ನು ಸೇರುತ್ತಾರೆ. ಸುಮೇಧರು ಇವರೀರ್ವರಿಗೆ ಕಲ್ಪಾಂತರದ ಶ್ರೀದೇವೀ ಮಾಹಾತ್ಮ್ಯವನ್ನು ಹೇಳುತ್ತಾರೆ. ಮೊದಲಿಗೆ ಮಧು–ಕೈಟಭರ ವಧೆ. ಇವಿಷ್ಟು ಒಂದನೆಯ ಅಧ್ಯಾಯದ ವಿಷಯ. ಮಹಿಷಾಸುರ ಸೈನ್ಯವಧವೃತ್ತಾಂತವು ಎರಡನೆಯ ಅಧ್ಯಾಯ. ಮೂರನೆಯ ಅಧ್ಯಾಯದಲ್ಲಿ ಮಹಿಷಾಸುರವಧವೃತ್ತಾಂತವಿದೆ. ದೇವತೆಗಳ ಶ್ರೀದೇವೀ ಸ್ತುತಿಯು ನಾಲ್ಕನೆಯ ಅಧ್ಯಾಯದ ವಿಷಯವಾಗಿದೆ. ಶುಂಭಾಸುರನದೂತನಾದ ಸುಗ್ರೀವನೆಂಬವನೊಂದಿಗೆ ಶ್ರೀದೇವಿಯ ಸಂವಾದವು ಐದನೆಯ ಅಧ್ಯಾಯವಾಗಿದೆ. ಧೂಮ್ರಲೋಚನವಧೆ, ಚಂಡಮುಂಡರವಧೆ, ರಕ್ತಬೀಜವಧೆ, ನಿಶುಂಭವಧೆ ಮತ್ತು ಶುಂಭವಧೆಗಳು ಕ್ರಮವಾಗಿ ಆರನೆಯ, ಏಳನೆಯ, ಎಂಟನೆಯ, ಒಂಭತ್ತನೆಯ ಮತ್ತು ಹತ್ತನೆಯ ಅಧ್ಯಾಯಗಳಾಗಿವೆ. ದೇವತೆಗಳು ಶ್ರೀದೇವಿಯನ್ನು ಸ್ತೋತ್ರಮಾಡುವುದು ಹನ್ನೊಂದನೆಯ ಅಧ್ಯಾಯದಲ್ಲಿ. ಈ ಸ್ತೋತ್ರಕ್ಕೆ 'ನಾರಾಯಣೀ ಸ್ತುತಿ' ಎಂದು ಹೆಸರಿದೆ. ಹನ್ನೆರಡನೆಯ ಅಧ್ಯಾಯದಲ್ಲಿ ಫಲಸ್ತುತಿಯಿದೆ. ಸುರಥ ಸಮಾಧಿಗಳಿಗೆ ಶ್ರೀದೇವಿಯ ವರವನ್ನು ದಯಪಾಲಿಸುವ ಕಥಾನಕವು ಹದಿಮೂರನೆಯ ಅಧ್ಯಾಯವಾಗಿದೆ.

ಈ ಹದಿಮೂರು ಅಧ್ಯಾಯಗಳಿಗಿಂತ ಹಿಂದಿನ ಅಧ್ಯಾಯದಲ್ಲಿ – ಅಂದರೆ ಪುರಾಣದ ಎಪ್ಪತ್ತೇಳನೆಯ ಅಧ್ಯಾಯದಲ್ಲಿ ಶ್ರೀದೇವೀ ಮಾಹಾತ್ಮ್ಯಕ್ಕೆ ಹಿನ್ನೆಲೆಯಾಗಿ ಎಂಟನೆಯ ಸೂರ್ಯಸಾವರ್ಣಿ ಮನ್ವಂತರದ ವಿವರಗಳಿವೆ. ಹದಿಮೂರು ಅಧ್ಯಾಯಗಳಿಗೆ ದೇವೀ ಮಾಹಾತ್ಮ್ಯವೆಂಬ ಸಂಜ್ಞೆಯು ಪುರಾಣದ ತೊಂಭತ್ತೊಂದನೆಯ ಅಧ್ಯಾಯದಲ್ಲಿ ಕೊಡಲಾಗಿದೆ. ಮಾರ್ಕಂಡೇಯರ ಮಾತುಗಳಲ್ಲಿ ಈ ವಿಚಾರವು ನಿರೂಪಿತವಾಗಿದೆ.

"ಸಾವರ್ಣಿಕಮಿದಂ ಸಮ್ಯಕ್ಪ್ರೋಕ್ತಂ ಮನ್ವಂತರಂ ತವ ।
ತಥೈವ ದೇವೀಮಾಹಾತ್ಮ್ಯಂ ಮಹಿಷಾಸುರಘಾತನಮ್ ॥
ಉತ್ಪತ್ತಯಶ್ಚ ಯಾ ದೇವ್ಯಾ ಮಾತೃಣಾಂಚ ಮಹಾಹವೇ ।
ತಥೈವ ಸಂಭವೋ ದೇವ್ಯಾಶ್ಚಾಮುಂಡಾಯಾ ಯಥಾ ಭವಃ ॥

ಶಿವದೂತ್ಯಾಶ್ಚ ಮಾಹಾತ್ಮ್ಯಂ ವಧಃ ಶುಂಭನಿಶುಂಭಯೋಃ ।
ರಕ್ತಬೀಜವಧಶ್ಚೈವ ಸರ್ವಮೇತತ್ತವೋದಿತಮ್ ॥

– ಮಾರ್ಕಂಡೇಯ ಪುರಾಣ, ಅಧ್ಯಾಯ–91, ಶ್ಲೋಕಗಳು 1ರಿಂದ 3ರ ತನಕ

ಶ್ರೀದೇವೀ ಮಾಹಾತ್ಮ್ಯದಲ್ಲಿ ಮಹತ್ವಪೂರ್ಣವಾದ ನಾಲ್ಕು ಸ್ತೋತ್ರಗಳಿವೆ. 1. ಮಹಾವಿಷ್ಣುವನ್ನು ಆವರಿಸಿದ್ದ ಯೋಗನಿದ್ರೆಯ ನಿರ್ಗಮನಕ್ಕಾಗಿ ಮತ್ತು ಮಧುಕೈಟಭರ ವಧೆಗಾಗಿ ಬ್ರಹ್ಮನು ಮಾಡಿರುವ ಶ್ರೀದೇವೀಸ್ತುತಿ. 2. ಮಹಿಷಾಸುರಾದಿಗಳ ವಧೆಯ ಅನಂತರ ದೇವತೆಗಳು ಮಾಡಿರುವ ಶ್ರೀದೇವೀಸ್ತುತಿ. 3. ಶುಂಭಾದ್ಯಾಸುರರ ವಧೆಗಾಗಿ ದೇವತೆಗಳು ಮಾಡಿರುವ ಶ್ರೀದೇವೀ ಸ್ತುತಿ. 4. ಶುಂಭಾದಿಗಳ ವಧೆಯ ಅನಂತರ ದೇವತೆಗಳು ಮಾಡಿರುವ ಶ್ರೀದೇವೀ ಸ್ತುತಿ. ಬ್ರಹ್ಮನು ಮಾಡಿರುವ ಶ್ರೀದೇವೀ ಸ್ತುತಿಯು ಒಂದನೆಯ ಅಧ್ಯಾಯದಲ್ಲಿದೆ. ಇದಕ್ಕೆ ಸೂಕ್ತದ ಸ್ಥಾನಮಾನವನ್ನು ಕೊಡಲಾಗಿದೆ. ಆದುದರಿಂದ ಇದನ್ನು ಪೌರಾಣಂ ಅಥವಾ ಪೌರಾಣಿಕಂ ರಾತ್ರಿ ಸೂಕ್ತಮ್" ಎಂದು ಕರೆಯುತ್ತಾರೆ. ಎರಡನೆಯದು ನಾಲ್ಕನೆಯ ಅಧ್ಯಾಯದಲ್ಲಿದ್ದು 'ಶಕ್ರಾದಿಸ್ತುತಿ' ಯೆನಿಸಿದೆ. ಮೂರನೆಯದು ಐದನೆಯ ಅಧ್ಯಾಯದಲ್ಲಿದೆ. ಇದನ್ನು 'ಅಪರಾಜಿತಾಸ್ತೋತ್ರ'ವೆಂದು ಕರೆಯುತ್ತಾರೆ. ನಾಲ್ಕನೆಯದು ಹನ್ನೊಂದನೆಯ ಅಧ್ಯಾಯದಲ್ಲಿದೆ. ಇದು 'ನಾರಾಯಣೀಸ್ತುತಿ'ಯೆಂದು ಪ್ರಸಿದ್ಧವಾಗಿದೆ.

ಚಂಡಮುಂಡವಧ, ರಕ್ತಬೀಜವಧ, ನಿಶುಂಭವಧ, ಶುಂಭವಧ ಮತ್ತು ನಾರಾಯಣೀ ಸ್ತುತಿ – ಹೀಗೆ ಹೆಸರುಗಳಿವೆ. ಎಂಭತ್ತೊಂಭತ್ತನೆಯ ಅಧ್ಯಾಯಕ್ಕೆ ಶುಂಭ ನಿಶುಂಭವಧವೆಂಬ ಹೆಸರನ್ನು ಕೊಡಲಾಗಿದೆ. ಇದು ಪ್ರಮಾದವೋ, ಮುದ್ರಣ ದೋಷವೋ ಆಗಿರಬಹುದು. ತೊಂಭತ್ತನೆಯ ಅಧ್ಯಾಯಕ್ಕೆ ಹೆಸರಿಲ್ಲ. ಇಲ್ಲಿ ಗ್ರಂಥ ಪುಷ್ಪಿಕಾ ವಾಕ್ಯದ ಅನಂತರ 'ಸಂಪೂರ್ಣಂ ದೇವೀಮಾಹಾತ್ಮ್ಯಮ್' ಎಂದಿದೆ.

(Markandeya Mahapuranam, Nag publishers. Second Edition - 1989)

*1 ಮಾರ್ಕಂಡೇಯ ಪುರಾಣದ ವಕ್ತಾರರು ಮಾರ್ಕಂಡೇಯ ಮಹರ್ಷಿಗಳು. ಅವರು ಪುರಾಣಾಚಾರ್ಯರು. ಪಾರ್ವತೀ ಸಹಿತನಾದ ಪರಮೇಶ್ವರನು ಮಾರ್ಕಂಡೇಯರಿಗೆ ಪುರಾಣಾಚಾರ್ಯತ್ವವನ್ನು ಅನುಗ್ರಹಿಸಿದ ವಿಚಾರವು ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದ ಹತ್ತನೆಯ ಅಧ್ಯಾಯದಲ್ಲಿದೆ.

"ಇತ್ಯರ್ಚಿತೋಽಭಿಷ್ಟುತಶ್ಚ ಮುನಿನಾ ಸೂಕ್ತಯಾಗಿರಾ।
ತಮಾಹ ಭಗವಾನ್ ಶರ್ವಃ ಶರ್ವಯಾ ಚಾಭಿನಂದಿತಃ ॥
ಕಾಮೋ ಮಹರ್ಷೇ ಸರ್ವೋಽಯಂ ಭಕ್ತಿಮಾಂಸ್ತ್ವಮಧೋಕ್ಷಜೇ।
ಆಕಲ್ಪಾಂತಾದ್ಯಶಃ ಪುಣ್ಯಮಜರಾಮರತಾ ತಥಾ ॥
ಜ್ಞಾನಂ ತ್ರೈಕಾಲಿಕಂ ಬ್ರಹ್ಮನ್ ವಿಜ್ಞಾನಂ ಚ ವಿರಕ್ತಿಮತ್ ।
ಬ್ರಹ್ಮವರ್ಚಸ್ವಿನೋ ಭೂಯಾತ್ ಪುರಾಣಾಚಾರ್ಯತಾಸ್ತು ತೇ॥"

– ಶ್ರೀ ಮದ್ಭಾಗವತ ಮಹಾಪುರಾಣ, ದ್ವಾದಶಸ್ಕಂಧ, ದಶಮೋಧ್ಯಾಯ, ಶ್ಲೋಕಗಳು– 35, 36 ಮತ್ತು 37

ಹೀಗೆ ಪುರಾಣಾಚಾರ್ಯರಾದ ಮಾರ್ಕಂಡೇಯ ಮಹರ್ಷಿಗಳಿಂದ ಪ್ರೋಕ್ತವಾದುದು ಈ ಪುರಾಣವು. ಮಾರ್ಕಂಡೇಯ ಮಹರ್ಷಿಗಳಿಗೆ ಈ ಪುರಾಣವು ಬ್ರಹ್ಮನಿಂದ

ಹೇಳಲ್ಪಟ್ಟಿದ್ದೆಂದು ಪುರಾಣದ ನೂರಮೂವತ್ತನಾಲ್ಕನೆಯ ಅಧ್ಯಾಯದಲ್ಲಿದೆ.

ಏವಮುಕ್ತ್ವಾ ಜೈಮಿನೇಯಂ ಮಾರ್ಕಂಡೇಯೋ ಮಹಾಮುನಿನಿಃ ।
ವಿಸೃಜ್ಯ ಕ್ರೌಷ್ಟುಕಿಮುನಿಂ ಚಕ್ರೇ ಮಾಧ್ಯಾಹ್ನಿಕೀಂ ಕ್ರಿಯಾಮ್ ॥
ಅಸ್ಮಾಭಿಶ್ಚ ಶ್ರುತಂ ತಸ್ಮಾದ್ಯತ್ತೇ ಪ್ರೋಕ್ತಂ ಮಹಾಮುನೇ ।
ಅನಾದಿಸಿದ್ಧಮೇತದ್ಧಿ ಪುರಾ ಪ್ರೋಕ್ತಂ ಸ್ವಯಂಭುವಾ ॥
ಮಾರ್ಕಂಡೇಯಾಯ ಮುನಯೇ ಯತ್ತೇಽಸ್ಮಾಭಿರುದಾಹೃತಮ್ ।
ಪುಣ್ಯಂ ಪವಿತ್ರಮಾಯುಷ್ಯಂ ಧರ್ಮಕಾಮಾರ್ಥಸಿದ್ಧಿದಮ್ ॥
ಪಠತಾಂ ಶೃಣ್ವತಾಂ ಸದ್ಯಃ ಸರ್ವಪಾಪಪ್ರಮೋಚನಮ್ ।
ಆದಾದೇವ ಕೃತಾ ಯೇ ಚ ಪ್ರಶ್ನಾಶ್ಚತ್ವಾರ ಏವ ಹಿ ॥
ಪಿತುಃ ಪುತ್ರಸ್ಯ ಸಂವಾದಸ್ತಥಾ ಸೃಷ್ಟಿಃ ಸ್ವಯಂಭುವಃ ।
ತಥಾ ಮನೂನಾಂ ಸ್ಥಿತಯೋ ರಾಜ್ಞಾಂಚ ಚರಿತಂ ಮುನೇ ॥
ಅಸ್ಮಾಭಿರೇತತ್ತೇ ಪ್ರೋಕ್ತಂ ಕಿಮದ್ಯ ಶ್ರೋತುಮಿಚ್ಛಸಿ ।
ಏತಾನ್ಸರ್ವಾನ್ನರಃ ಶ್ರುತ್ವಾ ಪಠತೇ ವಾ ಸಭಾಸು ಚ ॥
ವಿಧೂಯ ಸರ್ವಪಾಪಾನಿ ಬ್ರಹ್ಮಣೋಽಂತೇ ಲಯಂ ವ್ರಜೇತ್ ।
ಅಷ್ಟಾದಶಪುರಾಣಾನಿ ಯಾನಿ ಪ್ರಾಹ ಪಿತಾಮಹಃ ॥
ತೇಷಾಂ ತು ಸಪ್ತಮಂ ಜ್ಞೇಯಂ ಮಾರ್ಕಂಡೇಯಂ ಸುವಿಶ್ರುತಮ್॥

ಮಾರ್ಕಂಡೇಯ ಪುರಾಣ
ಅಧ್ಯಾಯ – 134. ಶ್ಲೋಕಗಳು 1ರಿಂದ 8

ಶ್ರೀ ಮನ್ಮಹಾಭಾರತದ ಕುರಿತಾಗಿ ಇದ್ದ ಸಂಶಯಗಳನ್ನು ನಿವಾರಿಸಲು ಮಹರ್ಷಿ ಜೈಮಿನಿಗಳು ಮಾರ್ಕಂಡೇಯರಲ್ಲಿಗೆ ಬಂದು ಪ್ರಶ್ನಿಸುತ್ತಾರೆ. ಇಲ್ಲಿ ಜೈಮಿನಿಗಳು ನಾಲ್ಕು ಪ್ರಶ್ನೆಗಳನ್ನು ಕೇಳುತ್ತಾರೆ. ಈ ಪ್ರಶ್ನೆಗಳೇ ಮಾರ್ಕಂಡೇಯರಿಗೆ ಬ್ರಹ್ಮದೇವನು ಹೇಳಿದ ಪುರಾಣವನ್ನು ಜೈಮಿನಿಗಳಿಗೆ ಹೇಳುವುದಕ್ಕೆ ಕಾರಣವಾಗಿದೆ.

"ಕಸ್ಮಾನ್ಮಾನುಷತಾಂ ಪ್ರಾಪ್ತೋಂ ನಿರ್ಗುಣೋಽಪಿ ಜನಾರ್ದನಃ ।
ವಾಸುದೇವೋ ಜಗತ್ಪೂತಿ ಸ್ಥಿತಿ ಸಂಯಮಕಾರಣಮ್ ॥
ಕಸ್ಮಾಚ್ಚ ಪಾಂಡುಪುತ್ರಾಣಾಮೇಕಾ ಸಾ ದ್ರುಪದಾತ್ಮಜಾ ।
ಪಂಚಾನಾಂ ಮಹಿಷೀ ಕೃಷ್ಣಾ ಹ್ಯತ್ರ ನಃ ಸಂಶಯೋ ಮಹಾನ್ ॥
ಭೇಷಜಂ ಬ್ರಹ್ಮಹತ್ಯಾಯಾ ಬಲದೇವೋ ಮಹಾಬಲಃ ।
ತೀರ್ಥಯಾತ್ರಾಪ್ರಸಂಗೇನ ಕಸ್ಮಾಚ್ಚಕ್ರೇ ಹಲಾಯುಧಃ ॥
ಕಥಂ ಚ ದ್ರೌಪದೇಯಾಸ್ತೇಽಕೃತದಾರಾ ಮಹಾರಥಾಃ ।
ಪಾಂಡುನಾಥಾ ಮಹಾತ್ಮನೋ ವಧಮಾಪುರನಾಥವತ್ ॥"

ಇಲ್ಲಿ ನಾಲ್ಕು ಪ್ರಶ್ನೆಗಳಿವೆ. 1. ನಿರ್ಗುಣನಾದ ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಕಾರಣನಾದ ಜನಾರ್ದನನು. ವಾಸುದೇವನು ಯಾವ ಕಾರಣದಿಂದ ಮನುಷ್ಯತ್ವವನ್ನು ಹೊಂದಿದನು? 2. ಪಾಂಡುವಿನ ಮಕ್ಕಳಾದ ಧರ್ಮರಾಜ, ಭೀಮ, ಅರ್ಜುನ, ನಕುಲ ಮತ್ತು ಸಹದೇವರೆಂಬೀ ಐವರಿಗೆ ದ್ರೌಪದಿಯೊಬ್ಬಳು ಹೇಗೆ ಹೆಂಡತಿಯಾದಳು?

3. ಮಹಾಬಲನಾದ ಬಲರಾಮನು ಸೂತಪುರಾಣಿಕರನ್ನು ಕೊಂದು, ಪ್ರಾಪ್ತವಾದ ಬ್ರಹ್ಮಹತ್ಯಾದೋಷ ಪ್ರಾಯಶ್ಚಿತ್ತಕ್ಕಾಗಿ ತೀರ್ಥಯಾತ್ರೆಯನ್ನು ಕೈಗೊಳ್ಳುವ ಪ್ರಸಂಗವೇಕೆ ಬಂತು? 4. ದ್ರೌಪದಿಯ ಮಕ್ಕಳಾದ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ ಮತ್ತು ಶ್ರುತಸೇನರಿಗೆ ಪಾಂಡವರೇ ರಕ್ಷಕರಾಗಿದ್ದೂ, ಮಹಾತ್ಮರೂ, ಮಹಾರಥರೂ ಆದ ಆ ಐವರು ದ್ರೌಪದೇಯರು ಅವಿವಾಹಿತರಾಗಿಯೇ ಮರಣವನ್ನು ಹೊಂದಲು ಕಾರಣವೇನು? ಜೈಮಿನಿಗಳ ಈ ನಾಲ್ಕು ಪ್ರಶ್ನೆಗಳಿಗೆ ಉತ್ತರಗಳನ್ನು ವಿಂಧ್ಯ ಪರ್ವತದ ಗುಹಾಮಧ್ಯದಲ್ಲಿರುವ ಪಿಂಗಾಕ್ಷ, ವಿಬೋಧ, ಸುಪುತ್ರ ಮತ್ತು ಸಮುಖರೆಂಬ ದಿವ್ಯಪಕ್ಷಿಗಳಿಂದ ಪಡೆದುಕೊಳ್ಳುವಂತೆ ಮಾರ್ಕಂಡೇಯರು ಸೂಚಿಸುತ್ತಾರೆ. ನಾಲ್ಕನೆಯ ಅಧ್ಯಾಯದಿಂದ ನಲುವತ್ತೆರಡನೆಯ ಅಧ್ಯಾಯದ ತನಕ ಪಿಂಗಾಕ್ಷಾದಿ ಪಂಚಪಕ್ಷಿಗಳ ಮತ್ತು ಜೈಮಿನಿಗಳ ಸಂವಾದರೂಪದಲ್ಲಿ ಪುರಾಣವಿದೆ. ಅನಂತರ ಜೈಮಿನಿಗಳ ಪ್ರಶ್ನೆಗಳಿಗೆ ಉತ್ತರರೂಪವಾಗಿ ಪೂರ್ವದಲ್ಲಿ ಕ್ರೌಷ್ಟುಕಿಯೆಂಬವನಿಗೆ ಮಾರ್ಕಂಡೇಯರು ಹೇಳಿರುವ ವಿಚಾರಗಳನ್ನೇ ದಿವ್ಯಪಕ್ಷಿಗಳು ಹೇಳುತ್ತವೆ. ಹೀಗೆ ಕ್ರೌಷ್ಟುಕಿ-ಮಾರ್ಕಂಡೇಯ ಸಂವಾದವು ದಿವ್ಯಪಕ್ಷಿಗಳಿಂದ ಜೈಮಿನಿಗಳಿಗೆ ಅನೂದಿತವಾಗಿದೆ. ಇದು ನೂರಮೂವತ್ತಮೂರನೆಯ ಅಧ್ಯಾಯದ ತನಕವಿದೆ. ನೂರಮೂವತ್ತನಾಲ್ಕನೆಯ ಅಧ್ಯಾಯವು ಪುರಾಣದ ಕೊನೆಯ ಅಧ್ಯಾಯವಾಗಿದ್ದು, ಈ ಅಧ್ಯಾಯದಲ್ಲಿ ದಿವ್ಯಪಕ್ಷಿಗಳು ಜೈಮಿನಿಗಳಿಗೆ ಪುರಾಣವನ್ನು ಸಮಾಪ್ತಿಗೊಳಿಸಿ ಪುರಾಣದ ಶ್ರವಣಫಲಗಳನ್ನು ಹೇಳುತ್ತವೆ.

ಸರ್ಗ (ಪ್ರಧಾನ ಸೃಷ್ಟಿ) ಪ್ರತಿಸರ್ಗ (ಗೌಣ ಸೃಷ್ಟಿ ಮತ್ತು ಪ್ರಳಯ) ವಂಶ (ದೇವತೆಗಳ ಮತ್ತು ರಾಜರ ಪರಂಪರೆ), ಮನ್ವಂತರ (ಚತುರ್ದಶಮನುಗಳ ವಿವರಣೆ) ಮತ್ತು ವಂಶಾನುಚರಿತ (ಸೂರ್ಯವಂಶ ಮತ್ತು ಚಂದ್ರವಂಶದ ರಾಜರ ಚರಿತ್ರೆ) ಗಳೆಂಬ ಪುರಾಣದ ಪಂಚಲಕ್ಷಣಗಳಿಂದ ಸಮನ್ವಿತವಾದುದು ಶ್ರೀ ಮಾರ್ಕಂಡೇಯ ಪುರಾಣವು. ಪುರಾಣದ ಪಂಚಲಕ್ಷಣಗಳಲ್ಲಿ ಒಂದನೆಯದಾದ ಸರ್ಗವು ಈ ಪುರಾಣದ ನಲುವತ್ತೇಳನೆಯ ಅಧ್ಯಾಯದಿಂದ ಐವತ್ತೈದನೆಯ ಅಧ್ಯಾಯದ ತನಕವಿರುವ ನಿರೂಪಣೆಯಲ್ಲಿ ನಿರೂಪಿತವಾಗಿದೆ. ಎರಡನೆಯದಾದ ಪ್ರತಿಸರ್ಗವೆಂಬ ಲಕ್ಷಣವು ನಲುವತ್ತಾರನೆಯ ಅಧ್ಯಾಯದಲ್ಲಿ ನಿರೂಪಿತವಾಗಿದೆ. ಮೂರನೆಯ ಲಕ್ಷಣವಾದ ವಂಶವು ನೂರ ಹನ್ನೊಂದನೆಯ ಅಧ್ಯಾಯದಿಂದ ನೂರಮೂವತ್ತಾರನೆಯ ತನಕದ ಅಧ್ಯಾಯಗಳಲ್ಲಿ, ನಾಲ್ಕನೆಯದಾದ ಮನ್ವಂತರವು ನಲುವತ್ತಾರು, ಐವತ್ತಾರು, ಅರುವತ್ತೊಂದರಿಂದ ಎಂಭತ್ತು, ಎಂಭತ್ತನಾಲ್ಕರಿಂದ ನೂರು - ಇವಿಷ್ಟು ಅಧ್ಯಾಯಗಳಲ್ಲಿವೆ. ಐದನೆಯ ಲಕ್ಷಣವಾದ ವಂಶಾನುಚರಿತವು ನೂರ ಎರಡರಿಂದ ನೂರ ಹತ್ತನೆಯ ಅಧ್ಯಾಯದ ತನಕವಿರುವ ಭಾಗಗಳಲ್ಲಿದೆ.

ಹೆಚ್ಚಿನ ಪುರಾಣಗಳು ನೈಮಿಷಾರಣ್ಯದಲ್ಲಿ ಸೂತಪುರಾಣಿಕರಿಂದ ಶೌನಕಾದಿಗಳಿಗೆ ಪ್ರೋಕ್ತವಾದುದೆಂಬ ರೀತಿಯಲ್ಲಿ ಉಪೋದ್ಘಾತವನ್ನು ಹೊಂದಿರುತ್ತವೆ. ಇಂತಹ ಉಪೋದ್ಘಾತಾತ್ಮಕ ನಿರೂಪಣವನ್ನು ಮಾರ್ಕಂಡೇಯ ಪುರಾಣವು ಹೊಂದಿರುವುದಿಲ್ಲ. ಈ ಪುರಾಣವು ವ್ಯಾಸರ ರಚನೆಯೆಂಬುದಾಗಲೀ, ಪುರಾಣಗಳ ಸಂಪಾದಕರೂ, ವಕ್ತಾರರೂ ಆಗಿರುವ ಸೂತಪುರಾಣಿಕರೆಂದು ಪ್ರಸಿದ್ಧರಾದ ಲೋಮಹರ್ಷಣರ ಉಲ್ಲೇಖ

ವಾಗಲೀ, ಅವರ ಪುತ್ರರಾದ ಸೌತಿಗಳೆಂದು ಪ್ರಸಿದ್ಧರಾದ ಉಗ್ರಶ್ರವರ ಉಲ್ಲೇಖವಾಗಲೀ, ಪುರಾಣಶ್ರವಣ ಕುತೂಹಲಿಗಳೂ, ಶ್ರವಣಬದ್ಧಾದರರೂ ಆಗಿರುವ ಶೌನಕರ ಉಲ್ಲೇಖವಾಗಲೀ ಇಲ್ಲಿ ಕಂಡುಬರುವುದಿಲ್ಲ. ಶ್ರೀಮನ್ಮಹಾಭಾರತದ ವ್ಯಾಸಕರ್ತೃತ್ವವು ಇಲ್ಲಿ ನಿರೂಪಿತವಾಗಿದೆ.

"ಭಗವನ್ ಭಾರತಾಖ್ಯಾನಂ ವ್ಯಾಸೇನೋಕ್ತಂ ಮಹಾತ್ಮನಾ।
ಪೂರ್ಣಮಸ್ತಮಲೈಃ ಶುಭ್ರೈರ್ನಾನಾಶಾಸ್ತ್ರಸಮುಚ್ಚಯೈಃ ॥
ಜಾತಿಶುದ್ಧಸಮಾಯುಕ್ತಂ ಸಾಧುಶಬ್ದೋಪಶೋಭಿತಮ್ ।
ಪೂರ್ವಪಕ್ಷೋಕ್ತಿ ಸಿದ್ಧಾಂತಪರಿನಿಷ್ಠಾಸಮನ್ವಿತಮ್ ।
ತ್ರಿದಶಾನಾಂ ಯಥಾ ವಿಷ್ಣುರ್ದ್ವಿಪದಾಂ ಬ್ರಾಹ್ಮಣೋ ಯಥಾ।
ಭೂಷಣಾನಾಂ ಚ ಸರ್ವೇಷಾಂ ಯಥಾ ಚೂಡಾಮಣಿರ್ವರಃ ।
ಯಥಾಯುಧಾನಾಂ ಕುಲಿಶಮಿಂದ್ರಿಯಾಣಾಂ ಯಥಾಮನಃ ।
ತಥೇಹ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಮ್ ।
ಅತ್ರಾರ್ಥಶ್ಚೈವ ಧರ್ಮಶ್ಚ ಕಾಮೋ ಮೋಕ್ಷಶ್ಚ ವರ್ಣ್ಯತೇ ।
ಪರಸ್ಪರಾನುಬಂಧಾಶ್ಚ ಸಾನುಬಂಧಾಶ್ಚ ತೇ ಪೃಥಕ್ ॥
ಧರ್ಮಶಾಸ್ತ್ರಮಿದಂ ಶ್ರೇಷ್ಠಮರ್ಥಶಾಸ್ತ್ರಮಿದಂ ಪರಮ್ ।
ಕಾಮಶಾಸ್ತ್ರಮಿದಂ ಚಾಗ್ರ್ಯಂ ಮೋಕ್ಷಶಾಸ್ತ್ರಂ ತಥೋತ್ತಮಮ್ ॥
ಚತುರಾಶ್ರಮಧರ್ಮಾಣಾಮಾಚಾರಸ್ಥಿತಿಸಾಧನಮ್।
ಪ್ರೋಕ್ತಮೇತನ್ಮಹಾಭಾಗ ವೇದವ್ಯಾಸೇನ ಧೀಮತಾ ॥
ತಥಾ ತಾತ ಕೃತಂ ಹ್ಯೆತದ್ ವ್ಯಾಸೇನೋದಾರಕರ್ಮಣಾ ।
ಯಥಾ ವ್ಯಾಪ್ತಂ ಮಹಾಶಾಸ್ತ್ರಂ ವಿರೋಧೈರ್ನಾಭಿಭೂಯತೇ ॥
ವ್ಯಾಸವಾಕ್ಯಜಲೌಘೇನ ಕುತರ್ಕತರುಹಾರಿಣಾ ।
ವೇದಶೈಲಾವತೀರ್ಣೇನ ನೀರಜಸ್ಕಾಮಹೀಕೃತಾ ॥
ಕಲಶಬ್ದಮಹಾಹಂಸಂ ಮಹಾಖ್ಯಾನಪರಾಂಬುಜಮ್ ।
ಕಥಾ ವಿಸ್ತೀರ್ಣಸಲಿಲಂ ಕಾರ್ಷ್ಣಂ ವೇದಂ ಮಹಾಹ್ರದಮ್ ।
ತದಿದಂ ಭಾರತಾಖ್ಯಾನಂ ಬಹ್ವರ್ಥಂ ಶ್ರುತಿವಿಸ್ತರಮ್ ॥

– ಅಧ್ಯಾಯ–1, ಶ್ಲೋಕಗಳು 5 ರಿಂದ 15 ರ ತನಕ

ಇಲ್ಲಿ ಮಹಾಭಾರತ ಪ್ರಶಂಸೆಯೊಂದಿಗೆ 'ವ್ಯಾಸೇನೋಕ್ತಂ' 'ವೇದವ್ಯಾಸೇನ'. 'ವ್ಯಾಸೇನೋದಾರಕರ್ಮಣಾ', 'ವ್ಯಾಸವಾಕ್ಯಜಲೌಘೇನ', 'ಕಾರ್ಷ್ಣಂ' – ಶಬ್ದಗಳು ಮಹಾಭಾರತದ ವ್ಯಾಸ ಕರ್ತೃಕತ್ವವನ್ನು ಸ್ಫುಟಗೊಳಿಸುತ್ತವೆ. ಆದರೆ ಪುರಾಣಗಳು ಮತ್ತು ವೇದವ್ಯಾಸರ ಸಂಬಂಧದ ಕುರಿತು ಏನನ್ನೂ ಹೇಳದೆ ಮಾರ್ಕಂಡೇಯ ಪುರಾಣವು ಬ್ರಹ್ಮನಿಂದ ಬ್ರಹ್ಮಮಾನಸ ಪುತ್ರರಾದ ಸಪ್ತರ್ಷಿಗಳಿಗೆ, ಭೃಗುಮುನಿಯಿಂದ ಚ್ಯವನಮುನಿಗೆ, ಚ್ಯವನ ಮಹರ್ಷಿಗಳಿಂದ ಇತರ ಮಹರ್ಷಿಗಳಿಗೆ, ಮಹರ್ಷಿಗಳಿಂದ ದಕ್ಷಪ್ರಜಾಪತಿಗೆ, ದಕ್ಷ ಪ್ರಜಾಪತಿಯಿಂದ ಮಾರ್ಕಂಡೇಯ ಮಹರ್ಷಿಗಳಿಗೆ ಅನುಕ್ರಮವಾಗಿ ಉಪದೇಶಿಸಲ್ಪಟ್ಟಿತೆಂದು ಮಾರ್ಕಂಡೇಯರು ಕ್ರೌಷ್ಟುಕಿಗೆ ತಿಳಿಸುತ್ತಾರೆ.

"ಉತ್ಪನ್ನಮಾತ್ರಸ್ಯ ಪುರಾ ಬ್ರಹ್ಮಣೋಽವ್ಯಕ್ತಜನ್ಮನಃ ।
ಪುರಾಣಮೇತದ್ವೇದಾಶ್ಚ ಮುಖೇಭ್ಯೋಽನುವಿನಿಃಸೃತಾಃ ॥
ಪುರಾಣಸಂಹಿತಾಶ್ಚಕ್ರುರ್ಬಹುಲಾ ಪರಮರ್ಷಯಃ ।
ವೇದಾನಾಂ ಪ್ರವಿಭಾಗಶ್ಚ ಕೃತಸ್ತೈಸ್ತು ಸಹಸ್ರಶಃ ।
ಧರ್ಮೋರ್ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ಮಹಾತ್ಮನಃ ।
ತಸ್ಯೋಪದೇಶೇನ ವಿನಾ ನ ಹಿ ಸಿದ್ಧಂ ಚತುಷ್ಟಯಮ್ ।
ವೇದಾನ್ ಸಪ್ತರ್ಷಯಸ್ತಸ್ಮಾಜ್ಜಗೃಹುಸ್ತಸ್ಯ ಮಾನಸಾಃ ।
ಭೃಗೋಃ ಸಕಾಶಾಚ್ಚ್ಯವನಸ್ತೇನೋಕ್ತಂ ಚ ದ್ವಿಜನ್ಮನಾಮ್ ।
ಋಷಿಭಿಶ್ಚಾಪಿ ದಕ್ಷಾಯ ಪ್ರೋಕ್ತಮೇತನ್ಮಹಾತ್ಮಭಿಃ ॥
ದಕ್ಷೇಣ ಚಾಪಿ ಕಥಿತಮಿದಮಾಸೀತ್ತದಾ ಮಮ ।
ತತ್ತುಭ್ಯಂ ಕಥಯಾಮ್ಯದ್ಯ ಕಲಿಕಲ್ಮಷನಾಶನಮ್ ॥

– ಅಧ್ಯಾಯ 42, ಶ್ಲೋಕಗಳು 21 ರಿಂದ 26 ರ ತನಕ

ಮಾರ್ಕಂಡೇಯ ಪುರಾಣದ ವಕ್ತೃ–ಶ್ರೋತೃಗಳ ಪರಂಪರೆಯು ಮೇಲಿನ ಶ್ಲೋಕಗಳಲ್ಲಿ ವ್ಯಕ್ತವಾಗಿದೆ. ಪರಮರ್ಷಿಗಳು ಪುರಾಣ ಸಂಹಿತೆಯನ್ನು ರಚಿಸಿದರು ಮತ್ತು ವೇದಗಳನ್ನು ವಿಭಾಗಿಸಿದರೆಂಬ ಈ ಪುರಾಣದ ಹೇಳಿಕೆಯು ವಿಶಿಷ್ಟವಾಗಿದೆ. ವೇದವ್ಯಾಸರ ವೇದವಿಭಾಗ ಕರ್ತೃತ್ವ ವಿಷಯದಲ್ಲಿ ಜಿಜ್ಞಾಸೆಯೊಂದು ನಿರ್ಣಯಪೂರ್ವಕವಾಗಿ ಪಂಡಿತ ಶ್ರೀಪಾದ ದಾಮೋದರ ಸಾತವೇಲಕರರು ಸಂಪಾದಿಸಿದ, ಪಾರಡಿಯ ಸ್ವಾಧ್ಯಾಯ ಮಂಡಲದಿಂದ ಪ್ರಕಾಶಿತವಾದ "ಕೃಷ್ಣಯಜುರ್ವೇದೀಯ ತೈತ್ತಿರೀಯ ಸಂಹಿತಾ" ಗ್ರಂಥದ 'ವೇದವೇದಿಕಾ' ಎಂಬ ದೀರ್ಘವಾದ ಪೀಠಿಕಾರೂಪದ ಲೇಖನದಲ್ಲಿದೆ. ಈ ಲೇಖನವನ್ನು ಬರೆದವರು ಗೋಕರ್ಣದ ಮಹರ್ಷಿ ದೈವರಾತರು. 'ಕಿಂ ವ್ಯಾಸೇನ ವ್ಯಸ್ತಾ ವೇದಾಃ?', 'ವ್ಯಾಸಪೂರ್ವೋ ಮಂತ್ರವಿಭಾಗಃ' ಎಂಬ ಎರಡು ವಿಷಯಗಳು ಅಲ್ಲಿ ಚರ್ಚಿಸಲ್ಪಟ್ಟಿವೆ.

ಪುರಾಣದ ನೂರಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಈ ಪುರಾಣವು ಅನಾದಿಸಿದ್ಧವಾದುದು. ಮಾರ್ಕಂಡೇಯರಿಗೆ ಪುರಾಣವನ್ನು ಹೇಳಿದವನು 'ಬ್ರಹ್ಮದೇವನೆಂಬುದರಿಂದ ಹಿಂದೆ ಹೇಳಿದ ವಕ್ತೃ–ಶ್ರೋತೃಪರಂಪರೆಯನ್ನೂ ಬ್ರಹ್ಮವಕ್ತೃತ್ವವನ್ನೂ ಸಮನ್ವಯಗೊಳಿಸಬಹುದು. ಆದರೆ ಪುರಾಣದ ವ್ಯಾಸಕರ್ತೃತ್ವಕ್ಕೆ ಪುರಾಣದಲ್ಲಿ ಯಾವ ಉಲ್ಲೇಖವೂ ದೊರೆಯುವುದಿಲ್ಲ. ಅಷ್ಟಾದಶ ಮಹಾಪುರಾಣಗಳನ್ನು ಹೆಸರಿಸಿ, ಮಾರ್ಕಂಡೇಯ ಪುರಾಣ ಶ್ರವಣಾಂತ್ಯದಲ್ಲಿ ವ್ಯಾಸಪೂಜೆಯನ್ನು ಮಾಡಬೇಕೆಂದಿದೆ. ಅಷ್ಟಾದಶ ಪುರಾಣಗಳನ್ನು ಹೇಳಿದವನು ಬ್ರಹ್ಮನೆಂದಿದೆ.

"ಅಸ್ಮಾಭಿರೇತತ್ತೇ ಪ್ರೋಕ್ತಂ ಕಿಮದ್ಯ ಶ್ರೋತುಮಿಚ್ಛಸಿ ।
ಏತಾನ್ಸರ್ವಾನ್ನರಃ ಶ್ರುತ್ವಾ ಪಠತೇ ವಾ ಸಭಾಸು ಚ ॥
ವಿಧೂಯ ಸರ್ವಪಾಪಾನಿ ಬ್ರಹ್ಮಣೋಽಂತೇ ಲಯಂ ವ್ರಜೇತ್।
ಅಷ್ಟಾದಶಪುರಾಣಾನಿ ಯಾನಿ ಪ್ರಾಹ ಪಿತಾಮಹಃ ॥
ತೇಷಾಂ ತು ಸಪ್ತಮಂ ಜ್ಞೇಯಂ ಮಾರ್ಕಂಡೇಯಂ ಸುವಿಶ್ರುತಮ್।
ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ॥"

ಮಾರ್ಕಂಡೇಯಯಂಚ ಸಪ್ತಮುವವ್" ಎಂದು ಏಳನೆಯ ಪುರಾಣವಾಗಿ ಮಾರ್ಕಂಡೇಯ ಪುರಾಣವು ಹೇಳಲ್ಪಟ್ಟಿದೆ. ಮಾರ್ಕಂಡೇಯ ಪುರಾಣಾಂತರ್ಗತವಾಗಿರುವ ಶ್ರೀದೇವಿ ಮಾಹಾತ್ಮ್ಯವು ಪ್ರಾಚೀನರಿಂದ ಅನುಷ್ಠೇಯ ಗ್ರಂಥವಾಗಿ, ಪ್ರಾಸಾದಿಕ ಗ್ರಂಥವಾಗಿ ಸ್ವೀಕರಿಸಲ್ಪಟ್ಟಿದೆ. ಹದಿಮೂರು ಅಧ್ಯಾಯಗಳ ಈ ಭಾಗವನ್ನು ಪ್ರತ್ಯೇಕವಾಗಿ ಅವಲೋಕಿಸಿದಾಗ, ಪುರಾಣದಿಂದ ಬೇರೆಯಾಗಿ ನೋಡಿದಾಗ ಅದೊಂದು ಸ್ವತಂತ್ರ ಗ್ರಂಥದಂತೆ ಕಾಣುವುದು. ಉಪೋದ್ಘಾತ-ಉಪಸಂಹಾರ ಮತ್ತು ಫಲಶ್ರುತಿಗಳನ್ನಿ ಹೊಂದಿದ ಗ್ರಂಥವಾಗಿರುವುದು. ಈ ಗ್ರಂಥದ ವಾಕ್ಯಗಳಿಗೆ, ಶ್ಲೋಕಗಳಿಗೆ ಮಂತ್ರತ್ವವನ್ನು ಸ್ವೀಕರಿಸಿ ಪ್ರಾಚೀನಪ್ರಾಜ್ಞರು ಆರಾಧನ-ಪಾರಾಯಣ, ಹವನ-ತರ್ಪಣಾದಿಗಳಿಗೆ ವಿನಿಯೋಗ ರೂಪದಲ್ಲಿ ನಿರ್ದೇಶಿಸಿದ್ದಾರೆ. ವೇದಮಂತ್ರಗಳು ಮತ್ತು ಮೂಲಮಂತ್ರಗಳಲ್ಲದೆ ಶ್ಲೋಕಗಳನ್ನು ಮಂತ್ರ ಸದೃಶವಾಗಿ ಸ್ವೀಕರಿಸಿ ಅವುಗಳಿಗೆ ಹವನಗಳನ್ನು ವಿಧಿಸಿದ್ದು ಕಂಡುಬರುತ್ತದೆ. ಶ್ರೀ ಮದ್ಭಾಗವತ ಸಪ್ತಾಹಾನುಷ್ಠಾನಾಂಗವಾಗಿ ಶ್ರೀ ಮದ್ಭಾಗವತ ಮಹಾಪುರಾಣದ ದಶಮಸ್ಕಂದದ ಶ್ಲೋಕಗಳಿಂದ ಹೋಮವನ್ನು ಮಾಡುವ ವಿಧಿಯಿದೆ. ಕೆಲವು ಮೂಲ ಮಂತ್ರಗಳು ಶ್ಲೋಕರೂಪದಲ್ಲಿವೆ. ಅಂತೆಯೇ ಸಪ್ತಶತಿಯ ಶ್ಲೋಕಗಳಿಗೆ ಅನುಷ್ಠಾನ ವಿಧಾನಗಳನ್ನು ನಿರೂಪಿಸಿದ್ದಾರೆ.

ಕಾತ್ಯಾಯನೀ ತಂತ್ರ, ವಾರಾಹೀತಂತ್ರ, ಗೌರೀತಿಲಕ, ಮಂತ್ರಮಹಾರ್ಣವ, ಮಂತ್ರ ಮಹೋದಧಿ, ದುರ್ಗೋಪಾಸನಕಲ್ಪದ್ರುಮ ಶ್ರೀಸಪ್ತಶತೀ ಪದ್ಧತಿ, ಶ್ರೀ ಚಂಡಿಕೋಪಾಸ್ತಿ ದೀಪಿಕಾ ಮೊದಲಾದ ಗ್ರಂಥಗಳಲ್ಲಿ ಸಪ್ತಶತಿಯ ಅನುಷ್ಠಾನವು ನಿರ್ದೇಶಿತವಾಗಿದೆ.

ಸಪ್ತಶತಿಯ ಅನುಷ್ಠಾನವನ್ನು ನಿರ್ದೇಶಿಸಿರುವ ಗ್ರಂಥಗಳು ಅನೇಕವಾಗಿರುವುದರಿಂದ ಅನುಷ್ಠಾನದಲ್ಲಿಯೂ ಅನೇಕ ಪ್ರಭೇದಗಳು ಹುಟ್ಟಿಕೊಂಡಿವೆ. ಶ್ಲೋಕಗಳ ವಿಭಾಗದಲ್ಲಿ ಅನೇಕ ಪ್ರಕಾರಗಳಿವೆ. ಪ್ರಧಾನವಾಗಿ ಪೂಜಾ ವಿಭಾಗದ ಪೂರ್ವಾಂಗ ಉತ್ತರಾಂಗಗಳಲ್ಲದೆ ಕವಚ, ಅರ್ಗಲ, ಕೀಲಕ, ಏಕಾದಶನ್ಯಾಸ, ರಾತ್ರಿಸೂಕ್ತ, ನವಾರ್ಣಮಂತ್ರ, ಸಪ್ತಶತೀನ್ಯಾಸ, ಸಪ್ತಶತೀ, ಉತ್ತರನ್ಯಾಸ, ನವಾರ್ಣಮಂತ್ರ, ದೇವೀಸೂಕ್ತ, ರಹಸ್ಯತ್ರಯ (ಪ್ರಾಧಾನಿಕ, ವೈಕೃತಿಕ, ಮೂರ್ತಿ ರಹಸ್ಯಗಳು) ಮತ್ತು ಅಪರಾಧ ಕ್ಷಮಾಪಣಗಳು ಅನುಷ್ಠಾನದ ಅನುಕ್ರಮ ಬದ್ಧವಾದ ವಿಷಯಗಳಾಗಿವೆ.

ಪಾರಾಯಣವು ನಿತ್ಯ, ನೈಮಿತ್ತಿಕ, ಕಾಮ್ಯಗಳೆಂದು ಮೂರುವಿಧ. ಪಲ್ಲವ ಪಾರಾಯಣ, ಯೋಜನ ಪಾರಾಯಣ ಮತ್ತು ಸಂಪುಟಿತ ಪಾರಾಯಣಗಳೆಂದು ಪಾರಾಯಣವು ಮೂರು ವಿಧವಾಗಿದೆ. ನವಚಂಡೀ, ಶತಚಂಡೀ, ಸಹಸ್ರಚಂಡೀ ಅಯುತಚಂಡಿ ಮೊದಲಾದ ವಿಧಾನಗಳಲ್ಲಿ ಹವನ ಸಹಿತಾನುಷ್ಠಾನವು ವಿಹಿತವಾಗಿದೆ. ಸಪ್ತಶತಿಯ ಕೆಲವು ಶ್ಲೋಕಗಳು ಸಿದ್ಧಿಪ್ರದಗಳೆಂಬುದಾಗಿ ತಿಳಿದು ಅವುಗಳನ್ನು ಪ್ರತ್ಯೇಕವಾಗಿ ಜಪಿಸುವ ನಿರ್ದೇಶನವೂ ಪ್ರಾಚೀನರಿಂದ ಮಾಡಲ್ಪಟ್ಟಿದೆ.

ಹದಿಮೂರು ಅಧ್ಯಾಯಗಳ ಸಪ್ತಶತಿಯು ಪ್ರಥಮ, ಮಧ್ಯಮ ಮತ್ತು ಉತ್ತಮ ಚರಿತ್ರಗಳೆಂದು ವಿಭಕ್ತವಾಗಿದೆ. ಒಂದನೆಯ ಅಧ್ಯಾಯವು ಪ್ರಥಮ ಚರಿತ್ರವಾಗಿದೆ. ಎರಡು, ಮೂರು ಮತ್ತು ನಾಲ್ಕನೆಯ ಅಧ್ಯಾಯಗಳು ಮಧ್ಯಮ ಚರಿತ್ರವಾಗಿದೆ. ಐದನೆಯ ಅಧ್ಯಾಯದಿಂದ ಹದಿಮೂರನೆಯ ಅಧ್ಯಾಯದ ತನಕದ ಭಾಗಗಳು ಉತ್ತಮ

ಚರಿತ್ರೆಯೆನಿಸಿವೆ.

ಸಪ್ತಶತಿಯ ಅನುಷ್ಠಾನವು ಭಾರತದ ಆದ್ಯಂತ ಪ್ರಚಲಿತವಾಗಿದೆ. 'ಸಪ್ತಶತೀ ವಿದ್ಯಾ' ಎಂಬುದಾಗಿ ಉಲ್ಲೇಖಿಸಲ್ಪಟ್ಟು ಶಾಕ್ತ ಪರಂಪರೆಯಲ್ಲಿ ಮಹತ್ತ್ವದ ಸ್ಥಾನವೂ ಇದಕ್ಕಿದೆ. ಶೈವ ಮತ್ತು ವೈಷ್ಣವ ಪರಂಪರೆಗಳಲ್ಲಿಯೂ ಸಪ್ತಶತಿಯ ಆದರಣೀಯವಾಗಿದೆ ಮತ್ತು ಅನುಷ್ಠೇಯವಾಗಿ ಸ್ವೀಕೃತವಾಗಿದೆ.



# ಹಿಮ್ಮೇಳ : ಶೈಲಿ ಮತ್ತು ಪರಂಪರೆ

**ಗುರುರಾಜ ಮಾರ್ಪಳ್ಳಿ**
**ಲೇಖಕ, ರಂಗನಿರ್ದೇಶಕ, ಕಲಾವಿದ**
**ಮಜೂರು, ಕಾಪು, ಉಡುಪಿ**

ತೆಂಕುತಿಟ್ಟಿನಲ್ಲಿ ಪ್ರಖ್ಯಾತ ಭಾಗವತರುಗಳಾದ ಅಗರಿ ಮತ್ತು ಬಲಿಪ ಭಾಗವತರುಗಳ ಶೈಲಿಗೆ ಹೋಲಿಸಿದರೆ ತೆಂಕುತಿಟ್ಟಿನ ಈಗಿನ ಯಕ್ಷಗಾನ ಭಾಗವತಿಕೆ ಈಗ ಕರ್ನಾಟಕ ಸಂಗೀತದ ಅನುಕರಣ ವಿಧಾನಕ್ಕೆ ಒಲಿದು ಬಿಟ್ಟಿದೆ ಎಂದು ಹೇಳಬೇಕಾಗುತ್ತದೆ. ತೆಂಕುತಿಟ್ಟಿನ ಸದ್ಯದ ಭಾಗವತರುಗಳು ಅಗರಿ ಮತ್ತು ಬಲಿಪರ ಶೈಲಿಯನ್ನು ಮರೆತು ಈಗಿನ ಕರ್ನಾಟ ಸಂಗೀತಕ್ಕೆ ಬಂದುದು ಸ್ತುತ್ಯರ್ಹ ಬೆಳವಣಿಗೆಯೇನಲ್ಲ. ದಾಮೋದರ ಮಂಡೆಚ್ಚರಂತಹ ಭಾಗವತರು ಸ್ವತಃ ಕರ್ನಾಟಕ ಸಂಗೀತ ವಿದ್ವಾಂಸರಾಗಿದ್ದು , ಅನಿವಾರ್ಯವಾಗಿ ಯಕ್ಷಗಾನವನ್ನು ಕರ್ನಾಟಕ-ಸಂಗೀತ ಶೈಲಿಯಲ್ಲಿ ಹಾಡಿದ್ದಿರ ಬಹುದು. ಆದರೆ ಅದನ್ನು ಉಳಿದ ಭಾಗವತರು ಅನುಕರಿಸುವುದ ಕ್ಕಿಂತ ಅಗರಿ ಅಥವಾ ಬಲಿಪ ಭಾಗವತರ ಶೈಲಿಗಳನ್ನು ಅನುಕರಿಸುತ್ತ ಬಂದಿದ್ದರೆ ಯಕ್ಷಗಾನ ಅನ್ನುವ ಹಾಡುಗಾರಿಕೆಯ ಶೈಲಿ ಕರ್ನಾಟಕ ಸಂಗೀತವನ್ನು; ಕರ್ನಾಟಕ ಸಂಗೀತವು ಯಕ್ಷಗಾನವನ್ನು ಹಾಳು ಮಾಡುವ ಪರಿಸ್ಥಿತಿಗೆ ಬರುತ್ತಿರಲಿಲ್ಲ.

ಕರ್ನಾಟಕ ಸಂಗೀತ ಯಕ್ಷಗಾನ ಭಾಗವತಿಕೆಯನ್ನು ಮಾತ್ರವಲ್ಲ ಕಥಕ್ಕಳಿ, ಕೂಡಿಯಟ್ಟಂ, ಮೋಹಿನಿಯಾಟ್ಟಂ, ಭರತನಾಟ್ಯ ಮುಂತಾದ ಶೈಲೀಕೃತ ನೃತ್ಯಗಳ ಹಿಮ್ಮೇಳವನ್ನು ಅವರ ಜಾಗದಿಂದ ಒಕ್ಕಲೆಬ್ಬಿಸಿದೆ. ಹಿಮ್ಮೇಳದ ಕುರಿತು ಪ್ರಭಾವಿ ಯಾಗಿ ಮಾತಾಡಬಲ್ಲ ವಿದ್ವಾಂಸರುಗಳು ಈ ಕುರಿತು ವಿವೇಚನಾಪೂರ್ಣ ಚಿಂತನೆಗಳನ್ನು ಯಕ್ಷಗಾನ ಬಡಗು ತಿಟ್ಟಿನ ಭಾಗವತಿಕೆ ಇವತ್ತು ಪ್ರಸ್ತುತ ರಂಗಪ್ರಸ್ತುತಿಯಲ್ಲಿ ಸಿನಿಮಾ, ಕೋಲಾಟ, ಗಜಲ್, ಜನಪದ ಗೀತೆ, ಕವ್ವಾಲಿಗಳ ಮಿಸಳ್ ಬಾಜಿಯಾಗಿರುವಾಗ ಯಕ್ಷಗಾನ ಹಿಮ್ಮೇಳ ಶೈಲಿಯನ್ನು ಲುಪ್ತ

ವಾಗಿ ಹೋಗುತ್ತಿರುವ ಒಂದು ಗಾನ ಪದ್ಧತಿಯಾಗಿ ಇಂದು ಚಿಂತನೆ ಮಾಡುವ ಪರಿಸ್ಥಿತಿ ಬಂದಿದೆ.

ಯಕ್ಷಗಾನದ ಗಾನಶೈಲಿಯ ಕುರಿತು ಯೋಚಿಸುವ ಚಿಂತಿಸುವ ಮನಸ್ಸುಗಳಿದ್ದರೆ ಹಿಮ್ಮೇಳದ ಶೈಲಿಯನ್ನು ಪುನಃ ರೂಢಮೂಲಗೊಳಿಸುವ ಅಗತ್ಯದ ಬಗ್ಗೆ ಚಿಂತನೆ ಮಾಡುವ ಅನಿವಾರ್ಯ ಕಾಲಘಟ್ಟಕ್ಕೆ ನಾವು ಬಂದು ತಲುಪಿದ್ದೇವೆ ಎಂಬುದನ್ನಷ್ಟೇ ಹೇಳಲು ಸಾಧ್ಯ. ತೆಂಕುತಿಟ್ಟಿನ ವೀರರಸದ ಹಾಡುಗಳನ್ನು ಕರ್ನಾಟಕ ಸಂಗೀತಕ್ಕೆ ಅಳವಡಿಸಲು ಸಾಧ್ಯವಾಗದಿರುವುದು ಯಕ್ಷಗಾನಕ್ಕೆ ಅದರದ್ದೇ ಎಂದು ನಿರೀಕ್ಷಿಸುವ ಹಾಗಿಲ್ಲ. ಯಕ್ಷಗಾನ ಇಂದಿನ ಗಾನ ಮಾರ್ಗ ಎಲ್ಲಿ ಮುಟ್ಟೀತು ಎಂಬುದನ್ನು ಹೇಳಲೂ ಸಾಧ್ಯವಿಲ್ಲ. ಕೆಲವು ಬಾರಿ ಸಂಗತಿಗಳ ವಿಷಾದಪೂರ್ಣ ಮತ್ತು ಶೋಚನೀಯವಾಗಿರುತ್ತದೆ. ಆದರೆ ಜಾಗತೀಕರಣದ ಮಂತ್ರ ಜಪಿಸುತ್ತಿರುವ ಜಗತ್ತಿಗೆ ಸತ್ಯಸೌಂದರ್ಯ ಶಾಂತಿಯ ಅನುಭೂತಿಯೇ ಧಾರಾವಾಹಿಗಳ ಮೂಲಕ ಹೊರಟು ಹೋಗಿ ಜಾಹೀರಾತಿನ ಗಮ್ಮತ್ತಿನಲ್ಲಿ ಜಗತ್ತು ಜಡಗಟ್ಟಿರುವಾಗ ರಸ ಮತ್ತು ಧ್ವನಿಗಳ ಕುರಿತು ಮಾತಾಡುವವರನ್ನು ಲೇವಡಿ ಮಾಡುತ್ತ ಜಗತ್ತು ನಾಗಾಲೋಟದಲ್ಲಿ ಮುಂದುವರಿಯುತ್ತ ಇರುತ್ತದೆ.

ನಮ್ಮ ದೃಷ್ಟಿಯನ್ನು ಸ್ವಲ್ಪ ಹಿಂದಕ್ಕೆ ಸರಿಸಿದರೆ ಡಾ. ಕಾರಂತರು ಯಕ್ಷಗಾನ ಶೈಲಿಗೆ ಮನಸೋತು ಸುಮಾರು ಅರುವತ್ತು ರಾಗಗಳ ಧ್ವನಿಮುದ್ರಣವನ್ನು ಸ್ಪೂಲುಗಳಲ್ಲಿ ಮಾಡಿದ ದಾಖಲೆಯಿದೆ. ಆಗ ಡಾ. ಕಾರಂತರು ಪಕ್ಕವಾದ್ಯ ಬಳಸಿ ಭಾಗವತರುಗಳ ಸ್ವರ ಸಂಚಾರಗಳನ್ನು ಹಿರಿಯ ಸಂಗೀತಗಾರ ಪದ್ಮಚರಣ್ ಅವರ ಮೂಲಕ ದಾಖಲಿಸಿದ್ದರು. ಆ ಕಾಲಕ್ಕೆ ಯಕ್ಷಗಾನವನ್ನು ಕನಿಕರದಿಂದ ನೋಡಿದ ವಿದ್ವಾಂಸರಿಗೇನೂ ಕೊರತೆಯಿರಲಿಲ್ಲ. ಯಕ್ಷಗಾನವನ್ನು ಯಕ್ಷಗಾನವಾಗಿ ನೋಡಬೇಕಾದ ಅಗತ್ಯವೂ ಕಂಡುಕೊಂಡ ವಿದ್ವಾಂಸರುಗಳು ಇದ್ದರು. ಯಕ್ಷಗಾನ ಶೈಲಿಯ ಕುರಿತು ಇಷ್ಟೆಲ್ಲ ದಾಖಲೆ ಸಂಗ್ರಹಿಸಿದ ಡಾ. ಕಾರಂತರು ತಮ್ಮ ಖ್ಯಾತಿಯಲ್ಲಿ ನೀಲಾವರ ರಾಮಕೃಷ್ಣಯ್ಯ ಅವರ ಹಾಡು ಯಕ್ಷಗಾನದಿಂದ ಕರ್ನಾಟಕ ಸಂಗೀತಕ್ಕೆ ಜಾರಿ ಭಾವಗೀತೆಯ ಮಟ್ಟಕ್ಕೆ ತಲುಪಿದುದನ್ನು ಏಕೆ ಗುರುತಿಸಲಿಲ್ಲ? ಬದಲಿಗೆ ರಾಮಕೃಷ್ಣಯ್ಯನವರಿಂದ ಪ್ರಾರಂಭಗೊಂಡ ಈ ಯಕ್ಷಗಾನ ಶೈಲಿ ಯಲ್ಲಾಪುರ ಗಣಪತಿ ಭಟ್ಟರಿಂದ ಮುಂದುವರಿಯಲ್ಪಟ್ಟು ಅರೆಯಕ್ಷ-ಕರ್ನಾಟಕ ಭಾಗವತಿಕೆಯಾಗಿ ಮುಂದುವರಿದ ಸಂಗತಿಯಾಯಿತು.

ಒಂದು ರಂಗ ಪರಂಪರೆಯಾಗಿ ಮಾತ್ರವಲ್ಲ ಜೀವಂತರಂಗಭೂಮಿಯಾಗಿ ಜನರ ನಡುವೆ ಇರುವ ಯಕ್ಷಗಾನ ಇಂಥ ಪ್ರಭಾವಗಳಿಗೆ ಒಳಗಾಗಬಾರದು ಎಂದು ಫರ್ಮಾನು ಆದ ಹಿಮ್ಮೇಳದ ಶೈಲಿ ಇತ್ತೆಂಬುದಕ್ಕೆ ಸರಿಯಾದ ಆಧಾರವಾಗಿದೆ. ಹಾಗೆಂದು ಎಲ್ಲ ಭಾಗವತರೂ ಯಕ್ಷಗಾನ ಶೈಲಿಯಿಂದ ಹೊರಗೆ ಬಂದಿದ್ದಾರೆಂದು ಇದರ ಅರ್ಥವಲ್ಲ. ಹಾಸ್ಯಗಾರರ ಹಾಡುಗಳಲ್ಲಿ, ಉದ್ಗಾರಗಳಲ್ಲಿ ವೀರರಸಗಳಲ್ಲಿ ಇರುವ ಸ್ವಂತಿಕೆ ಬೇರೆ ರಸಗಳಲ್ಲಿ ಕಂಡು ಬರುವುದಿಲ್ಲ ಎಂಬುದನ್ನು ನಾವು ವಿಮರ್ಶೆ ಮಾಡಿ ನೋಡಬೇಕು. ಹಾಗಿದ್ದರೆ ಇಂದಿಗೆ ಈಗಿನ ಕರ್ನಾಟಕ ಸಂಗೀತದ ಗಾಢ ಪ್ರಭಾವಕ್ಕೆ ಒಳಗಾಗಿ ಹಾಡುವ ಭಾಗವತರುಗಳದು ಯಕ್ಷಗಾನ ಶೈಲಿ ಅಲ್ಲವೇ? ಅದು ಯಕ್ಷಗಾನ ಶೈಲಿ ಅಲ್ಲವಾದರೂ ಹಿಮ್ಮೇಳದ ಶೈಲಿಯಾಗಿ ರೂಪುಗೊಂಡಿದೆಯಲ್ಲ. ಭರತನಾಟ್ಯ, ಕಥಕ್ಕಳಿ, ಕೂಡಿಯಾಟ್ಟಂ

ಗಳಲ್ಲಿ ಕರ್ನಾಟಕ ಸಂಗೀತದ ಗಮಕಗಳಿಗೆ ವಿನ್ಯಾಸಗಳು ಬದಲಾದಂತೆ ಯಕ್ಷಗಾನ ನೃತ್ಯದಲ್ಲಿ ಬದಲಾವಣೆ ಕಂಡು ಬಂದಿದೆಯೇ ಇಲ್ಲ. ಯಕ್ಷಗಾನ ನೃತ್ಯ ಅದರಷ್ಟಕ್ಕೆ ಇದೆ. ಭಾಗವತರ ಭಾಗವತಿಕೆ ಅದರಷ್ಟಕ್ಕೆ ಇದೆ. ಈ ಒಂದು ವಿಪರೀತಕ್ಕೆ ಕಾರಣವಾಗಿರುವ ವಿಷಯ. ಇದಕ್ಕೆ ಭಾಗವತರುಗಳನ್ನಾಗಲಿ ಕಲಾವಿದರನ್ನಾಗಲೀ ದೂಷಿಸುವ ಹಾಗಿಲ್ಲ. ಯಕ್ಷಗಾನ ಭಾಗವತಿಕೆಯಿಂದ ಕೃತಕ ಕಂಠದಿಂದ ಅಸ್ಪಷ್ಟ ಪದಗಳಿಂದ ಶ್ರುತಿ ಮಾಧುರ್ಯವನ್ನು ಬಿಟ್ಟು ಅಣಕ ಮಾಡುವ ಭಾಗವತರುಗಳಿಗಿಂತ ಇದು ಎಷ್ಟೋ ಮೇಲು. ಇಲ್ಲಿ ಹಿಮ್ಮೇಳದ ಶೈಲಿಗೆ ತಕ್ಕಂತೆ ನೃತ್ಯ ವಿಧಾನ ಬದಲಾಗುವುದರ ಅಗತ್ಯವಿದೆ. ಇದನ್ನು ತೆಂಕುತಿಟ್ಟಿನ ಗುರುಗಳು ನೃತ್ಯಾಚಾರ್ಯರು ಗಮನಿಸಿಲ್ಲ ಎಂಬ ಅಂಶವನ್ನಷ್ಟೇ ಹೇಳಬಹುದು.

ಜನಪರ ರಂಗಭೂಮಿಗಳಲ್ಲಿ ಇಂತಹ ವ್ಯತ್ಯಾಸಗಳು ನಡೆದೇ ನಡೆಯುತ್ತವೆ. ಹಿಂದೂಸ್ಥಾನಿ ಮತ್ತು ಕರ್ನಾಟಕಿ ಶಾಸ್ತ್ರೀಯ ಸಂಗೀತವಷ್ಟೇ ಮೌಲಿಕವಾದ ರಂಗ ಪರಂಪರೆ ಯಕ್ಷಗಾನ ಭಾಗವತಿಕೆಯ ಕಂಠಸ್ಥ ಪರಂಪರೆಗೆ ಇದೆಯೆಂಬುದನ್ನು ನಾವು ಗುರುತಿಸಬೇಕು. ಈ ಒಂದು ಅಂಶವನ್ನು ಒಪ್ಪಿಕೊಳ್ಳುವವರು ಮಾತ್ರ ತೆಂಕುತಿಟ್ಟು ಮತ್ತು ಬಡಗುತಿಟ್ಟಿನ ಯಕ್ಷಗಾನ ಕಂಠಸ್ಥ ಸಂಪ್ರದಾಯದ ಸ್ವಂತಿಕೆಯನ್ನು ಗುರುತಿಸಿ ಅದರ ಗಮಕ ಮೀಂಡು ಪಲ್ಟಾಗಳನ್ನು ಅಧ್ಯಯನ ಮಾಡಿ ಹಿಮ್ಮೇಳದ ಶೈಲಿಯನ್ನು ಕಾಪಾಡಬಲ್ಲರು. ಆದರೆ ಆ ವ್ಯವಧಾನ ಯಕ್ಷಗಾನ ರಂಗಭೂಮಿಯ ಹಿಮ್ಮೇಳದ ಶೈಲಿಯನ್ನು ಶುದ್ಧೀಕರಿಸುವುದರಲ್ಲಿ ಬೇಕು. ಹೊರಳಿಸುವ ಅಧಿಕಾರ ಯಾರಿಗೂ ಇಲ್ಲ. ಆದರೆ ಎಲ್ಲೋ ಒಂದು ಕಡೆ ಯಕ್ಷಗಾನ ಹಿಮ್ಮೇಳದ ಹೊರಳುವಿಕೆ ಆರಂಭವಾಗಿ ಅದು ಎಲ್ಲೂ ನಿಲ್ಲುವ ಸೂಚನೆ ಕಾಣಿಸುತ್ತಿಲ್ಲ. ತೆಂಕುತಿಟ್ಟಿನ ಯಕ್ಷಗಾನದಲ್ಲಿ ಇವತ್ತು ಎತ್ತುಗಡೆಯ ಆಲಾಪನೆಗಳನ್ನು ಕರ್ನಾಟಕ ಸಂಗೀತದ ಶೈಲಿಯಲ್ಲಿ ನಿರರ್ಗಳವಾಗಿ ವಿಸ್ತರಿಸುವ ಭಾಗವತರುಗಳ ಸ್ವೇಚ್ಛೆಯ ಮಟ್ಟಕ್ಕೆ ಬಂದು ತಲುಪಿದ್ದಾರೆ. ಬಡಗುತಿಟ್ಟಿನ ಯಕ್ಷಗಾನ ಭಾಗವತಿಕೆಯ ಅಪಭ್ರಂಶಗಳನ್ನು ಈಗಾಗಲೇ ಹೇಳಿದ್ದೇನೆ.

ಈ ಉಲ್ಲೇಖಗಳು ಅನಿವಾರ್ಯವಾಗಿದ್ದರೂ ಯಕ್ಷಗಾನ ಹಿಮ್ಮೇಳದ ನಿಜಶೈಲಿಯನ್ನು ಗುರುತಿಸಲು ಪ್ರಮಾಣ ಅಥವಾ ಮಾದರಿಯಾಗಿ ನಮ್ಮಲ್ಲಿ ಮೂರು ಜನ ಭಾಗವತರನ್ನು ಆಯ್ಕೆ ಮಾಡಿಕೊಳ್ಳಬಹುದು. ಅಗರಿ, ಬಲಿಪ ಮತ್ತು ಬಡಗು ತಿಟ್ಟಿನಲ್ಲಿ ಜಾನುವಾರು ಕಟ್ಟೆ ಗೋಪಾಲಕೃಷ್ಣ ಭಾಗವತರು. ಜಾನುವಾರು ಕಟ್ಟೆಯವರು ವೀರರಸವೊಂದನ್ನುಳಿದು ತೆಂಕುತಿಟ್ಟಿನ ಭಾಗವತಿಕೆಗೂ ಮಾದರಿಯಾಗಬಲ್ಲವರು. ಅಗರಿ ಹಾಗೂ ಜಾನುವಾರು ಕಟ್ಟೆಯವರು ಹಾಡಿನ ಶೈಲಿಗಳಲ್ಲಿರುವ ಸಾಮ್ಯ ಮತ್ತು ಭಾಗವತ ಯಕ್ಷಗಾನ ಹಿಮ್ಮೇಳದ ಶೈಲಿ ಒಂದು ಕಾಲದಲ್ಲಿ ಒಂದೇ ಆಗಿತ್ತು ಎಂಬುದನ್ನು ತೋರಿಸುತ್ತದೆ. ಹಿಮ್ಮೇಳದ ವಾದನಗಳ ಮಟ್ಟಿಗೆ ಬಡಗುತಿಟ್ಟಿನ ಮದ್ದಳೆ ಚೆಂಡೆಗಳ ವಿನ್ಯಾಸದಲ್ಲಿ ಸ್ವಂತಿಕೆಯಿದೆ.

ಪುರಾಣದ ಚೌಕಟ್ಟಿನಿಂದ ಯಕ್ಷಗಾನವನ್ನು ಹೊರಗೆ ತಂದರೆ ನಾವು ಯಕ್ಷಗಾನ ಹಿಮ್ಮೇಳದ ಕುರಿತು ಚಿಂತನೆ ನಡೆಸುವುದರಲ್ಲಿ ಯಾವ ಔಚಿತ್ಯವೂ ಕಾಣಿಸುವುದಿಲ್ಲ. ಹಿಂದೂಸ್ಥಾನೀ ಸಂಗೀತದ ಆಲ್ಹೆಯ ಬಿಲಾವಲ್, ಸಾರಂಗ, ಬೃಂದಾವನೀ ಸಾರಂಗ, ಕರ್ನಾಟಕ ಸಂಗೀತದ ಶಂಕರಾಭರಣ, ಮಧ್ಯಮಾವತಿ, ಶ್ರೀರಾಗಗಳನ್ನು ಸಮೀಕರಿಸುವ

ರಾಗಗಳು ಯಕ್ಷಗಾನದಲ್ಲಿದ್ದರೂ ಅವುಗಳ ಗಮಕ, ತಿರುವುಗಳು ಬೇರೆಯೇ. ಯಕ್ಷಗಾನದ ಭೈರವಿ, ಕೇದಾರ ಗೌಳ, ಕಾಂಬೋಧಿ, ನಾಟಿ, ಆನಂದ ಭೈರವಿ, ಮೋಹನ, ತುಜಾವಂತು, ಕಲ್ಯಾಣಿ, ಪೂರ್ವಿ, ಆರಭಿ, ಸಾವೇರಿ, ಭೂಪಾಲಿ, ರೇಗುಪ್ತಿ, ರಾಗಗಳಲ್ಲಿ ಅಸಾಧಾರಣ ಸ್ವಂತಿಕೆ ಇದೆ. 'ಇದು ಯಕ್ಷಗಾನ' ಎಂದು ಗುರುತಿಸಬಹುದಾದ ಗಮಕಗಳಿವೆ.

ಆದರೆ ಯಕ್ಷಗಾನ ರಂಗಭೂಮಿಯಲ್ಲಿ ನಾವಿಂದು ಇದರ ವಿಕೃತರೂಪಗಳನ್ನಷ್ಟೇ ನೋಡಲು ಸಾಧ್ಯ. ಯಕ್ಷಗಾನವನ್ನು ಭಾಗವತರುಗಳು ಕನ್ನಡದಲ್ಲಿ ಸಹಜ ಕಂಠದಲ್ಲಿ ಹಾಡಬೇಕಾದ ಅಗತ್ಯವಿದೆ ಎಂದು ಬಡಗುತಿಟ್ಟಿನ ಭಾಗವತರುಗಳನ್ನು ಕೇಳಿದ ಸಾಮಾನ್ಯರಿಗೂ ವಿದ್ವಾಂಸರಿಗೂ ಹೊಳೆಯುತ್ತದೆ. ಜಾನಪದವೆಂದರೆ ಅರಚಾಟ ಎಂಬ ಭಾವನೆಯಿಂದ ಹೊರಗೆ ಬರಬೇಕಾಗುತ್ತದೆ. ಎಂಥ ಶ್ರುತಿ ಮಾಧುರ್ಯದ ಶಾಸ್ತ್ರೀಯ ಸಂಗೀತಗಾರರ ಸಂಗೀತವನ್ನು ಕರ್ಕಶಗೊಳಿಸುವ ಸೌಂಡು ಸಿಸ್ಟಮ್‌ಗಳಿಗೆ ಹೊಂದಿಕೊಂಡ ಪ್ರೇಕ್ಷಕರ ಸಂವೇದನೆ ಯಾವ ರೀತಿಯದು ಎಂದು ಊಹಿಸುವುದೇ ಕಷ್ಟ. ಪ್ರಯಾಣದ ಸವಿಯನ್ನು ಕರ್ಕಶ ಹಾಡುಗಳಿಂದ ಮಣ್ಣು ಮಾಡುವ ಬಸ್ಸಿನ ಸಿಬ್ಬಂದಿಯ ಹಾಗೇ ಸೌಂಡ್ ಸಿಸ್ಟಮ್‌ನ ಮೌಲಿಕ ಮಾಪನ ವ್ಯವಸ್ಥೆ ಬದಲಾಗದೆ ಯಾವುದನ್ನೂ ವಿಮರ್ಶೆಗೆ ದಾಖಲಿಸಲು ಬರುವುದಿಲ್ಲ.

ಈ ಎಲ್ಲ ಅತಿರೇಕಗಳ ನಡುವೆ ಯಕ್ಷಗಾನ ಹಿಮ್ಮೇಳದ ಶೈಲಿ ದಕ್ಷಿಣ ಭಾರತದ ನೃತ್ಯ ಪರಂಪರೆಯ ಗಾನಶೈಲಿಗಳಲ್ಲಿ ಅಷ್ಟಿಷ್ಟಾಗಿ ಸ್ವಂತಿಕೆಯಿಂದ ಉಳಿದುಕೊಂಡಿರುವುದು ಕಡಿಮೆ ಆಶ್ಚರ್ಯದ ಸಂಗತಿಯೇನಲ್ಲ. ಯಕ್ಷಗಾನ ಹಿಮ್ಮೇಳದ ಶೈಲಿಗೂ ನಾಟ್ಯಕ್ಕೂ ಇರುವ ಅವಿನಾಭಾವ ಸಂಬಂಧಗಳನ್ನು ಉಳಿಸಿ ಬೆಳೆಸುವವರು ಮೊದಲು ಇಂದಿನ ವಿದ್ಯುನ್ಮಾನ ಯಂತ್ರಗಳ ಪ್ರಭಾವದಿಂದ ಹೊರಗೆ ಬರಬೇಕಾಗುತ್ತದೆ. ಧ್ವನಿ ಸಂಬಂಧಿ ವ್ಯವಹಾರಗಳಲ್ಲಿ ಮೊದಲ ಶ್ರೇಯಸ್ಸು ಶ್ರುತಿ ಮಾಧುರ್ಯಕ್ಕೆ ಸಲ್ಲಬೇಕು. ಉಳಿದದ್ದು ತಂತಾನೇ ಅದನ್ನು ಆಧರಿಸಿ ಮುಂದುವರಿಯುತ್ತದೆ.

ವಿದ್ಯುನ್ಮಾನ ಯಂತ್ರಗಳ ಆವಿಷ್ಕಾರ ಎಂತಹ ಶ್ರೇಷ್ಠ ಪ್ರದರ್ಶನಗಳಿಗೆ ಅವಕಾಶ ಮಾಡಿಕೊಡಬಲ್ಲುದು ಎಂಬ ಕಲ್ಪನೆ ಇವತ್ತಿನ ಯಕ್ಷಗಾನ ಹಿಮ್ಮೇಳನದವರಿಗೆ ಇದೆ ಎಂಬುದನ್ನು ಒಪ್ಪಿಕೊಳ್ಳುವುದು ಕಷ್ಟ. ಆದರೆ ಜನಸಮೂಹದಲ್ಲಿ ಯಾವಾಗಲೂ ಒಂದು ಚಿಂತನಶೀಲ ಸೌಂದರ್ಯಾರಾಧಕರ ಗುಂಪು ಇರುತ್ತದೆ. ಈ ಗುಂಪಿನ ತುಡಿತ ಕಲೆಯನ್ನು ಕಲೆಯಾಗಿ ಗುರುತಿಸುವ ಕಾಯಕಕ್ಕೆ ಯಾವಾಗಲೂ ಸಿದ್ಧವಾಗಿರುತ್ತದೆ.

ಯಕ್ಷಗಾನದ ಹಿಮ್ಮೇಳದ ಶೈಲಿಯ ಕುರಿತು ನಮ್ಮಲ್ಲಿ ಚಿಂತನೆಯೇನೂ ಕಡಿಮೆಯಾಗಿದೆ ಎಂದೇನಲ್ಲ. ಅದನ್ನು ಅಳವಡಿಸಿದ ಪ್ರಯೋಗಗಳು ಪ್ರದರ್ಶನಗಳು ಕಡಿಮೆಯಾಗಿವೆ. ಕಲೆಯ ನೈತಿಕ ಅಧಃಪತನವು ಸಂಸ್ಕೃತಿಯ ಅಧಃಪತನದಷ್ಟೇ ಮರ್ಮಭೇದಕವಾದದ್ದು. ಆದ್ದರಿಂದ ಹಿಮ್ಮೇಳವನ್ನು ರೂಢಮೂಲಗೊಳಿಸುವ ಒಂದು ಪ್ರಯತ್ನಕ್ಕೆ ಯಕ್ಷಗಾನದಲ್ಲಿ ವಿಪುಲ ಅವಕಾಶಗಳಿವೆ.

ಇಲ್ಲಿ ಪ್ರಸ್ತುತಪಡಿಸಿದ ಅಂಶಗಳಲ್ಲಿ ಯಕ್ಷಗಾನ ಗಾಯನ ಪರಂಪರೆಯನ್ನು ಯಾರಾದರೂ ಉದ್ದೇಶಪೂರ್ವಕವಾಗಿಯೇ ಹಾಳು ಮಾಡಿದ್ದಾರೆಂದು ವಿವರಿಸುವ ಉದ್ದೇಶವಿಲ್ಲ. ಅರಿತೋ ಅರಿಯದೆಯೋ ಯಕ್ಷಗಾನ ಹಿಮ್ಮೇಳದ ಸ್ವಾತಂತ್ರ್ಯವು ಸ್ವೇಚ್ಛೆಯ

ಕಡೆಗೆ ಹರಿದಿದೆ ಎಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ಯಕ್ಷಗಾನ ಗಾನಶೈಲಿ ಬಹಳ ಕಾಲದಿಂದ ಒಂದು ಸ್ವತಂತ್ರ ಶೈಲಿಯಾಗಿತ್ತೆಂಬುದನ್ನು ಮೂಲಭೂತವಾಗಿ ಒಪ್ಪಿಕೊಳ್ಳಬೇಕೆಂಬುದು ನನ್ನ ಆಶಯ. ಆದರೆ ಈಗಿರುವ ರೂಪವೇ ಸರ್ವಮಾನ್ಯ ಎಂಬ ಆಗ್ರಹ ಮಾತ್ರ ಸಲ್ಲದು. ಯುಕ್ತತೆಯಲ್ಲಿ ಯುಕ್ತಿಯೂ ಅಡಗಿರುವುದ ರಿಂದ ನಮ್ಮ ಕಲೆಯ ಸಾಧ್ಯತೆಗಳನ್ನು ನಾವೇ ಅಲ್ಲಗಳೆಯುವಂತೆ ನಡೆಯುವ ವಿಮರ್ಶೆ ಅಪಾಯಕಾರಿಯಾದದ್ದು. ಪ್ರಾಂಜಲ ದೃಷ್ಟಿಯಿಂದ ನೋಡುವಾಗ ಅರಿವಿಗೆ ಬರುವ ಯಕ್ಷಗಾನ ಭಾಗವತಿಕೆಯ ಶೈಲಿ ಮತ್ತು ನಾಟ್ಯ ಸಂಪ್ರದಾಯಗಳ ಕುರಿತು ವಿವೇಚನಪೂರ್ಣ ಪ್ರಯೋಗಗಳ ಅಗತ್ಯವಿದೆ ಎಂಬುದನ್ನು ಗಮನಕ್ಕೆ ತರುವುದೂ ಇಲ್ಲಿಯ ಉದ್ದೇಶವಾಗಿದೆ.



# ಸಮರಸದ ದಾಂಪತ್ಯ

**ಡಾ. ರಮಾನಂದ ಬನಾರಿ**
**ಸಾಹಿತಿ, ಕಲಾವಿದ**
ಗಣರಾಜ ಕ್ಲಿನಿಕ್, ಮಂಜೇಶ್ವರ
ಕಾಸರಗೋಡು

ತಾಳಮದ್ದಳೆ ಒಂದು ಕಲೆಯಾಗಿ ಪ್ರಕಟವಾಗುವಲ್ಲಿ ಅರ್ಥಗಾರಿಕೆಯ ವಿಭಾಗವೇ ಈ ಕಲಾ ಪ್ರಕಾರದ ಹೆಗ್ಗಳಿಕೆ ಎಂಬುದನ್ನು ಒಪ್ಪಿಯೇ ಆದರೂ–ಹಿಮ್ಮೇಳ– ಮುಮ್ಮೇಳ ಗಳೆರಡೂ ಸಮಾನ ಮಹತ್ತ್ವದ ಸ್ಥಾನವನ್ನು ಪಡೆದುಕೊಳ್ಳುತ್ತವೆ ಎನ್ನುವ ಅಭಿಪ್ರಾಯವನ್ನೂ ಅಲ್ಲಗಳೆಯುವುದಕ್ಕಾಗುವುದಿಲ್ಲ.

ತಾಳಮದ್ದಳೆಯ ಒಟ್ಟು ಕಲಾ ಸೌಂದರ್ಯವನ್ನು ಆಸ್ವಾದಿಸುವುದು ಬಹುಮಂದಿ ಪ್ರೇಕ್ಷಕರ ಲಕ್ಷ್ಯವಾದರೂ ಕೆಲವರು ಕೇವಲ ಮಾತುಗಾರಿಕೆಯ ಮಹಿಮೆಯನ್ನು ವೀಕ್ಷಿಸುವುದಕ್ಕಾಗಿಯೇ ಪ್ರೇಕ್ಷಕರಾಗಿರುತ್ತಾರೆ; ಮಾತ್ರವಲ್ಲ ಅವರ ದೃಷ್ಟಿಯಲ್ಲಿ ತಾಳಮದ್ದಳೆಯ ಉದ್ದೇಶವೇ ಮಾತಿನ ವಿವಿಧ ಅವತಾರಗಳನ್ನು ಅನಾವರಣಗೊಳಿಸುವುದೇ ಆಗಿರುತ್ತದೆ. ಅಂಥವರು ಆಸ್ವಾದಿಸುವುದು ಮಾತಿನ ಅಂದವನ್ನು ಚಕಮಕಿಯನ್ನು ಮಾತ್ರ. ತಾಳಮದ್ದಳೆಗೆ ಸಂಬಂಧಿಸಿದ ಮಾತುಕತೆಯಲ್ಲಿ ಅವರ ಮೊದಲ ಪ್ರಶ್ನೆಯೆ ಅರ್ಥಕ್ಕೆ ಯಾರು? ಪ್ರಸಂಗ ಯಾವುದು? ಯಾರಿಗೆ ಯಾವ ಅರ್ಥ? ಇತ್ಯಾದಿಯೇ ಆಗಿರುತ್ತದೆ. ವಿಮರ್ಶೆಯಲ್ಲೂ ಅಷ್ಟೇ. ಆ ಪಾತ್ರ ಹೇಗಿತ್ತು? ಏನು ಚರ್ಚೆಗಳು ನಡೆದುವು? ಯಾವ ಅರ್ಥಧಾರಿಯದ್ದು ಹೆಚ್ಚು 'ರೈಸಿತು'? ಇಂತಹದೇ ಪ್ರಶ್ನೆಗಳು. ಭಾಗವತರ ಮೃದಂಗವಾದಕರ ಬಗ್ಗೆ ಅವರು ವಿಚಾರಿಸುವುದು ವಿರಳ.

ಇನ್ನೊಂದು ವರ್ಗವೂ ಇದೆ. ಸಂಖ್ಯಾದೃಷ್ಟಿಯಿಂದ ಅಲ್ಪಸಂಖ್ಯಾಕರಾದ ಅವರು ಹಿಮ್ಮೇಳ ಪಕ್ಷಪಾತಿಗಳು. ಹಾಡುಗಾರಿಕೆ, ಮೃದಂಗವಾದನಗಳನ್ನು ಆಸ್ವಾದಿಸುತ್ತ ಅದನ್ನೇ

ಮಾತಾಡುತ್ತಾ ಅದರ ಬಗ್ಗೆಯೇ ಯಾರು ಹೇಗೆ ಇತ್ಯಾದಿಗಳ ವಿವರಣೆಯಲ್ಲಿ ತೊಡಗಿಕೊಳ್ಳುವವರು.

ಮೂರನೆಯ ವರ್ಗವೇ ನಿಜವಾದ ತಾಳಮದ್ದಳೆಯ ಪ್ರೇಕ್ಷಕರು. ಅವರು ಸಮಾನ (ಸ) ಹೃದಯಿಗಳು. ಸಮಾನ ಸುಖಿಗಳು, ಹಿಮ್ಮೇಳ ಮುಮ್ಮೇಳಗಳೆರಡನ್ನೂ ಆಸ್ವಾದಿಸುತ್ತ ಕಲೆಯ ಅಖಂಡತ್ವವನ್ನು ಸವಿಯುವವರು, ಗೌರವಿಸುವವರು.

ಕಲೆಯಾಗಿ ಪ್ರಸ್ತುತವಾಗುವ ತಾಳಮದ್ದಳೆಯ ಒಂದೊಂದು ಪ್ರದರ್ಶನಗಳಲ್ಲೂ ಇದೇ ಬಗೆಯ ವರ್ಗೀಕರಣ ಮತ್ತೊಂದು ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಮೊದಲನೆಯ ವರ್ಗದಲ್ಲಿ ಹಿಮ್ಮೇಳದವರಿಗೂ ಮುಮ್ಮೇಳದವರಿಗೂ – ಒಂದೇ ವೇದಿಕೆಯಲ್ಲಿರುವವರೆಂಬುದನ್ನು ಬಿಟ್ಟರೆ ಬೇರೆ ಏನೂ ಸಂಬಂಧವಿರುವುದಿಲ್ಲ. ಹಾಡುಗಾರಿಕೆಗೂ ತಮಗೂ ಏನೂ ಸಂಬಂಧವಿಲ್ಲದವರಂತೆ ಅರ್ಥಧಾರಿಗಳೂ ಅರ್ಥಗಾರಿಕೆಗೂ ತಮಗೂ ಏನೂ ಸಂಬಂಧವಿಲ್ಲದವರಂತೆ ಭಾಗವತರೂ ವರ್ತಿಸುತ್ತಾರೆ. ಕೆಲವೆಡೆ ಇದು ಎಷ್ಟು ಅತಿರೇಕಕ್ಕೆ ಹೋಗುತ್ತದೆ ಎಂದರೆ ಕೆಲವರು 'ಬಿಡುವಿನ ವೇಳೆ'ಯಲ್ಲಿ ಪತ್ರಿಕೆಗಳ ಮೇಲೆ ಕಣ್ಣಾಡಿಸುವುದೂ ಇದೆ. ಪ್ರತ್ಯೇಕವಾಗಿ ಎದ್ದು ತೋರುವ ಕೆಲವು ಚಟಗಳೂ ಪ್ರವೃತ್ತಿಗಳೂ ತೀರ ಸಾಮಾನ್ಯವೆಂಬಂತೆ ನಡೆಯುತ್ತಿರುತ್ತವೆ.

ಎರಡನೆಯ ವರ್ಗದಲ್ಲಿ ಹಿಮ್ಮೇಳ ಮುಮ್ಮೇಳಗಳು ಅಗತ್ಯಕ್ಕಿಂತ ಹೆಚ್ಚು ಪರಸ್ಪರ ಬೆರೆಯುತ್ತವೆ. ಭಾಗವತರ ಹಾಡಿನ ಉದ್ದಕ್ಕೂ ಅರ್ಥದಾರಿಯು ತನ್ನದೇ ರೀತಿಯಲ್ಲಿ ಹಾಡಿ ತೋರಿಸುವುದು, ಪದ ಪದಕ್ಕೂ ಅಭಿನಯಿಸಿ ತೋರಿಸುವುದು. ಅರ್ಥಧಾರಿಯ ನಡೆಯಲ್ಲಿ ಎಡೆಯಲ್ಲಿ ಅಲ್ಲಲ್ಲಿ ಭಾಗವತರು ಪ್ರವೇಶ ಮಾಡುವುದು ಇತ್ಯಾದಿಗಳು ನಡೆಯುವುದುಂಟು.

ಸಹಜವಾಗಿಯೇ ಮೂರನೆಯ ವರ್ಗ ಮೇಲಿನ ಎರಡರ ನಡುವೆ ಇರುವ ಸಮನ್ವಯದ ಮತ್ತು ಸಮರಸದ ಮಾರ್ಗ. ಅಲ್ಲಿ ಹಿಮ್ಮೇಳ ಮುಮ್ಮೇಳಗಳು ಹದವಾದ ಪ್ರಮಾಣದಲ್ಲಿ 'ಪರಸ್ಪರಂ ಭಾವಯಂತಃ' ಎಂಬ ಹಾಗೆ ಒಂದನ್ನೊಂದು ಸಂಗಮಿಸುತ್ತವೆ – ಮಿಶ್ರಣವಾಗಿ ಅಲ್ಲ; ಸಂಯುಕ್ತ ಧಾತುವಾಗಿ. ಅಂಗಾಂಗಗಳ ಸೌಷ್ಠವದ ಸಮನ್ವಯದಿಂದ ಸುಂದರವಾದ ಆಕೃತಿಯೊಂದು ಮೂಡಿಬರುವಂತೆ.

ಹಾಗೆ ಆದಾಗ ಮಾತ್ರ ಕಲೆಯನ್ನು ಇಡಿಯಾಗಿ ಸ್ವೀಕರಿಸುವುದಕ್ಕೂ ಇಡಿಯಾಗಿ ಆಸ್ವಾದಿಸುವುದಕ್ಕೂ ಸಾಧ್ಯವಾಗುತ್ತದೆ. ಇಂತಹ ಕಲಾ ಪ್ರದರ್ಶನಗಳನ್ನು ನಿರ್ಮಾಣ ಮಾಡುವುದು ಮತ್ತು ಅದನ್ನೇ ಪ್ರೇಕ್ಷಕರು ಮತ್ತೂ ಮತ್ತೂ ಅಪೇಕ್ಷಿಸುವಂತಹ ಸದಭಿರುಚಿಯನ್ನು ಸೃಷ್ಟಿ ಮಾಡುವುದು ಕಲೆಯ ವರ್ತುಲದಲ್ಲಿ ಸಹಭಾಗಿಗಳಾಗುವವರೆಲ್ಲರ ಆದ್ಯ ಕರ್ತವ್ಯ ಮತ್ತು ಹೊಣೆಗಾರಿಕೆ ಕೂಡ.

ಅತಿಯಾದ ಸರಸ, ಅತಿಯಾದ ವಿರಸ ಈ ಎರಡನ್ನೂ ಮೀರಿ ನಿಲ್ಲುವ ಹಿತಮಿತವಾದ ಸಮರಸದ ದಾಂಪತ್ಯವಾಗಬೇಕು– ತಾಳಮದ್ದಳೆಯ ಹಿಮ್ಮೇಳ ಮುಮ್ಮೇಳಗಳ ನಡುವಣ ಸಾಂಗತ್ಯ.

ತಾಳಮದ್ದಳೆಯ ವಿವಿಧಾಂಗಗಳ ತರಬೇತಿ ಈ ಸೂತ್ರವನ್ನು ಅಡಿಪಾಯವಾಗಿ ಅಂಗೀಕರಿಸಬೇಕು. ಮತ್ತು ಈ ಸೂತ್ರದನ್ವಯ ಇದರ ಮೇಲೆ ರಚಿಸುವಂತಹ ಸೌಧ

ಹೇಗಿರಬೇಕು – ಎಂಬುದರ ಸೂಕ್ಷ್ಮವಾದ ವಿವರಗಳನ್ನು ತಜ್ಞರ ಸಮಾವೇಶದಲ್ಲಿ ವಿವೇಚಿಸಿ, ಚರ್ಚಿಸಿ ಮಾರ್ಗದರ್ಶಿಕೆಗಳನ್ನು ಸಿದ್ಧಪಡಿಸಬೇಕು. ಅವುಗಳ ಅನುಷ್ಠಾನದ ಅರಿವನ್ನು ವಿಶದಗೊಳಿಸುವುದಕ್ಕಾಗಿ ಶಿಬಿರಗಳು, ಕಮ್ಮಟಗಳು, ತಾಲೀಮುಗಳು ಹಾಗೂ ಇನ್ನಿತರ ಪ್ರಾಯೋಗಿಕ ವಿಧಾನಗಳು ಕಾಲ ಕಾಲಕ್ಕೆ ನಡೆಯುತ್ತ ಕಲೆಗೆ ಕಾಯಕಲ್ಪವನ್ನು ನೀಡುತ್ತಿರಬೇಕು.

ಯಕ್ಷಗಾನದ (ತಾಳಮದ್ದಳೆಯ) 'ಸೊಗಡಿಗೆ' ಭಂಗವಾಗದಂತೆ ಆಧುನಿಕ ತಂತ್ರಜ್ಞಾನದ ಸೌಲಭ್ಯಗಳನ್ನು ಮತ್ತು ಸಹೋದರ ರಂಗ ಪ್ರಕಾರಗಳಲ್ಲಿ ಕಾಣಿಸಿಕೊಳ್ಳುವ ಕೆಲವೊಂದು ವಿಶಿಷ್ಟ ತಂತ್ರಗಳನ್ನು ರಸಾವಿಷ್ಕಾರಕ್ಕೆ ಪೂರಕವಾಗಿ ಹೇಗೆ ಹೊಂದಿಸಿಕೊಳ್ಳಬಹುದೆನ್ನುವುದೂ ವಿವೇಚನೀಯ.

ದಿವಂಗತ ದಿವಾಣ ಭೀಮ ಭಟ್ಟರು ಒಬ್ಬ ಪರಿಪೂರ್ಣ ಹಿಮ್ಮೇಳ ಕಲಾವಿದರು. ವರ್ಷಗಳ ಹಿಂದೆ ಶ್ರೀ ಎಡನೀರು ಮಠದಲ್ಲಿ ಕಲೆಯ ಒಳಗೂ ಹೊರಗೂ ನನಗೆ ದೊರಕಿದ ಅವರ ಸಹವಾಸದ ಸುಖ ಸದಾ ಸ್ಮರಣೀಯ. ವಿಷಾದ ಮತ್ತು ವಿನೋದಗಳ ಅಸಂಗತ ರೇಖೆಗಳನ್ನು ಸುಸಂಗತವೆಂಬಂತೆ ಬೆಸೆಯಬಲ್ಲ ಅವರ ಮುಖಭಾವ ಬದುಕು ಮತ್ತು ಕಲೆಗಳಿಗೆ ಏಕಪ್ರಕಾರವಾಗಿ ಅನ್ವಯಿಸುವ ಹಾಗೆ ಕವಿಯೊಬ್ಬ ಬರೆಯಬಹುದಾದ ಭಾಷ್ಯವೆಂದೇ ನಾನು ಭಾವಿಸಿದ್ದೇನೆ. ಅವರಂತಹ ಮಹಾನ್ ಕಲಾವಿದನ ಶತಮಾನದ ಉತ್ಸವ ಹಿಮ್ಮೇಳ ಮುಮ್ಮೇಳಗಳ ಸಾಮರಸ್ಯದ ಕುರಿತಾದ ಚಿಂತನ ಮತ್ತು ಪ್ರಯೋಗಗಳಿಂದ ಅರ್ಥವತ್ತಾಗಿ ಆಚರಿಸಲ್ಪಟ್ಟರೆ ಅದೇ ಅವರಿಗೆ ನಾವು ಸಲ್ಲಿಸಬಹುದಾದ ನಿಜವಾದ ಗೌರವ.



# ನೃತ್ಯರೂಪಕ ಭಿನ್ನ ನಾದತರಂಗಗಳ ಫಲಿತಾಂಶ

**ಪ್ರೊ. ಉದ್ಯಾವರ ಮಾಧವ ಆಚಾರ್ಯ**
**ಕವಿ, ಸಾಹಿತಿ, ರಂಗ ನಿರ್ದೇಶಕ**
'ವ್ಯಾಸ', ಚಿಟ್ಪಾಡಿ
ಉಡುಪಿ – 574 101

'ನೃತ್ಯರೂಪಕ' ಒಂದು ಪ್ರತ್ಯೇಕ ಕಲಾಪ್ರಕಾರವೇ? ಪ್ರಶ್ನೆ ಸರಳ. ಉತ್ತರ ಸರಳವಲ್ಲ. ಏಕೆಂದರೆ ರಂಗವ್ಯಾಪಾರದ ಹಲವು ಮಜಲುಗಳು ನಮಗೆದುರಾಗುತ್ತವೆ ಉತ್ತರಿಸಲು ಪ್ರಯತ್ನಿಸಿದಾಗ ಕಾಣುವ ಒಂದು ರಹಸ್ಯ–ಭಿನ್ನನಾದ ತರಂಗಗಳು ನಿಜವಾದ ನೃತ್ಯ ರೂಪಕದ ಭಿನ್ನ ನೆಲೆಗಳು. ಅವುಗಳ ಸಾಂಗತ್ಯವೇ ಒಂದು ಸಾಹಿತ್ಯ ಕೃತಿಯನ್ನು ರಂಗದ ಮೇಲೆ ಸಾಧ್ಯವಾಗಿಸುವ ನೃತ್ಯ ರೂಪಕದ ಸಂಗೀತ ಶಕ್ತಿ. ಈ ಶಕ್ತಿ ಸರಳ ವಿವರಣೆಗೆ ಸಿಗಲಾರದು. ನೃತ್ಯ ರೂಪಕ (ಬ್ಯಾಲೆ) ಪ್ರತ್ಯೇಕ ಕಲಾ ಪ್ರಕಾರವಾಗುವುದೇ (1)ಶಕ್ತಿಯುತ ಸಾಹಿತ್ಯ, (2) ಅದಕೊಪ್ಪುವ ರಂಗ ಚಲನೆ ಮತ್ತು (3) ನಾದ ನೃತ್ಯ ಇವುಗಳಿಂದ.

ಸಂಭಾಷಣೆ, ಸಂಗೀತ, ವಾದನ, ಚಲನೆ, ಅಭಿನಯ, ಆಹಾರ್ಯ ಮಾತ್ರವಲ್ಲ ನಡುನಡುವೆ 'ಮೌನ'ವೂ – ಒಂದು ವಸ್ತುವನ್ನು ರೂಪಕವಾಗಿಸುವಲ್ಲಿ ಹಲವು ನೆಲೆಗಳಾಗಿ ನಮಗೆ ಎದುರಾಗುತ್ತವೆ. ಈ ಸೂಕ್ಷ್ಮಗಳನ್ನು ಮನಗಾಣದಿದ್ದರೆ ರಂಗದಲ್ಲಿ ಬಂದು ಹೋಗುವ ಎಲ್ಲವೂ ನೃತ್ಯರೂಪಕವಾಗುವ ಅಪಾಯವಿದೆ. ಬಂದು, ನಿಂತು, ನೋಡಿ, ಮಾತನಾಡಿ, ಮರೆಯಾಗುವುದು ಸಂತೆ ಅಥವಾ ಜಾತ್ರೆಯಾದರೆ ಈ ಎಲ್ಲದರಲ್ಲಿ ಕಲಾತ್ಮಕ ವಿನ್ಯಾಸವನ್ನು ಸೃಷ್ಟಿಸಿ ಒಂದು ವಿಷಯವನ್ನು ನಾದ ಶಕ್ತಿಯ ಮೂಲಕ ಸಹೃದಯನ ಮನೋಭಿತ್ತಿಯಲ್ಲಿ ಬೇರೆಯಾಗಿ, ಅನುಭವವಾಗಿ ಸ್ಥಾಪಿಸುವುದು 'ರೂಪಕ'ವಾಗುತ್ತದೆ. ನೃತ್ಯದ ಚೌಕಟ್ಟಿಗೊಳಪಡಿಸಿದರೆ ಅದು ನೃತ್ಯ ರೂಪಕವಾಗುತ್ತದೆ.

ಇದು ಭಿನ್ನವಾಗುವುದು ಹೇಗೆ? ತೊಡಕಿರುವುದೇ ಇಲ್ಲಿ. ಭಿನ್ನವಾಗಿಸುವುದು ಸುಲಭ ಎಂದು ತಿಳಿಯುವುದರಲ್ಲಿ. ಸುಲಭ

ಎಂದು ತಿಳಿಯುವವರು 'ಸಿದ್ಧ ಉಡುಪನ್ನು' ಧರಿಸುವ ರೀತಿ ಇದು ಎಂದು ತಿಳಿಯುತ್ತಾರೆ. ಅಳತೆ ತಿಳಿಸುವುದು, ಆಕೃತಿ ನೋಡುವುದು, ಬಣ್ಣ ಆಯ್ಕೆ ಮಾಡುವುದು, ಒಂದನ್ನು ಆಯ್ದು ಧರಿಸುವುದು – ಈ ರೀತಿಯಲ್ಲಿ ನೃತ್ಯ ರೂಪಕವನ್ನು ಸೃಷ್ಟಿಸುವುದು ಸಾಧ್ಯ ಎಂದು ತಿಳಿದರೆ, ಮೇಲೆ ಹೇಳಿದ ಹಲವು ಮಜಲುಗಳ ಸಂಕೀರ್ಣತೆಯನ್ನಾಗಲೀ, ಔಚಿತ್ಯವನ್ನಾಗಲೀ ವಿಶ್ಲೇಷಿಸುವ ಗೋಜಿಗೇ ಒಬ್ಬ ಹೋಗಬೇಕಾಗಿಲ್ಲ. ಭಿನ್ನ ಬಣ್ಣ, ಭಿನ್ನ ವಿನ್ಯಾಸ, ಭಿನ್ನ ವಸ್ತ್ರ – ಇವುಗಳ ಸಂಗಮದ ಅಳತೆಗೊಪ್ಪುವ ಸಿದ್ಧ ಉಡುಪನ್ನು ಧರಿಸಿದರೆ – ಭಿನ್ನತೆ ಸಾಧಿಸಿದ್ದೇನೆ ಎಂಬ ಭ್ರಮೆಯಿಂದ ನಮ್ಮ ಬೆನ್ನನ್ನು ನಾವೇ ತಟ್ಟಿಕೊಂಡಂತಾಗುತ್ತದೆ. ಇದು ಸೃಷ್ಟಿಯಲ್ಲ. ಅಳವಡಿಕೆ ಮಾತ್ರ. ಅನುಕರಣೆ ಮಾತ್ರ ರಂಗಸೃಷ್ಟಿಯ ಮೂಲದ ಪುನರಾವೃತ್ತಿ ಮಾತ್ರ. ಮೂಲ ಎಲ್ಲಿದೆ? ಏನದು?

ರಂಗಸೃಷ್ಟಿಯ ಮೂಲ ನಿಗೂಢ. ಅದೊಂದು ಪ್ರವಾಹ. ನಿರಂತರದ ರಭಸ. ಈ ರಭಸದೊಂದಿಗೆ ಸಾಗುವುದರಲ್ಲಿ ಇಂದಿನ ರಂಗಸೃಷ್ಟಿಯ ರಹಸ್ಯ ಅಡಗಿದೆ. ಸಾಗುವಾಗ ಕೆಲವು ಭ್ರಮೆಗಳು ನಮ್ಮನ್ನು ಮುತ್ತುತ್ತವೆ. ರಭಸದಲ್ಲಿರುವ ಯಾವುದಾದರೂ ಒಂದನ್ನು ನನ್ನ ಬಳಿ ಇರುವ ರಂಗಾಕ್ಷರ – ವ್ಯಾಕರಣದಿಂದ ತುಸು ಬದಲಿಸಿ ಬಿಟ್ಟರೆ ಸರಿ, ನಾನು ಹೊಸ ಸೃಷ್ಟಿಗಾರನಾದೆ ಎನ್ನುವುದೇ ಪ್ರಧಾನ ಭ್ರಮೆ. ಉದಾಹರಣೆಗೆ – 'ಭಾವಯಾಮಿ ರಘುರಾಮಂ', ಕೀರ್ತನೆಯ ಮೂಲಕ ರಾಮಾಯಣದ ಚಿತ್ರಣ ಅಥವಾ 'ಶ್ರೀ ಕೃಷ್ಣಃ ಕಮಲಾನಾಥೋ' ಶ್ಲೋಕ ಮಾಲಿಕೆಯ ಮೂಲಕ ಕೃಷ್ಣಾವತಾರದ ಮಹಿಮೆಗಳ ಚಿತ್ರಣಗಳನ್ನು ಭಿನ್ನವಾಗಿಸುವ ಪ್ರಯತ್ನ ಮಾಡಿದಾಗ ಈ ಭ್ರಮೆಯ ಸ್ವರೂಪ ತಿಳಿಯುತ್ತದೆ. ಕಾರಣ ಅದಕ್ಕೆ ಗಟ್ಟಿಯಾದ ಚೌಕಟ್ಟು ಸ್ಥಾಪನೆಯಾಗಿರುವಾಗ ಬದಲಿಸುವುದೆಂದರೆ ಒಂದು ಮಹಾಸೌಧದ ಪಂಚಾಗದ ಕಲ್ಲುಗಳನ್ನು ಅಲುಗಿಸಿದ ಹಾಗೆ. ಅಲ್ಲಿ ಇಲ್ಲಿ, ನಾಲ್ಕು ಸುತ್ತು ಬರುವಲ್ಲಿ ಎಂಟು ಬಾರಿ, ಶಿವಧನುವಿನ ಬಾಗುವಿಕೆಯಲ್ಲಿ ಅಳತೆ ಮೀರಿಸುವುದು ಇತ್ಯಾದಿ ಲೆಕ್ಕಾಚಾರವನ್ನು ಬದಲಿಸಿ – ಬೇರೆಯೇ ಕೋರಿಯೋಗ್ರಫಿ ಮಾಡಿದೆ ಎಂದರೆ ಆ ಭ್ರಮೆ ಕಾಡಿದ್ದು ಸ್ಪಷ್ಟವಾಗುತ್ತದೆ. ಅಥವಾ ಕಾಡದೇ ಇರುವುದೂ.

ಹೌದು. ಈ ರೀತಿಯ ಶಾಬ್ದಿಕ ವಿವರಣೆಯಿಂದ ಏನನ್ನೂ ಹೇಳಿದಂತಾಗದು. ವಿಶೇಷವೇನೆಂದರೆ 'ಸೃಷ್ಟಿ' ಗೆ ಬರುವಾಗ ಅದು ನೀರಗುಳ್ಳೆಯಂತೆ ಕ್ಷಣದಲ್ಲಿ ನಿರ್ಮಾಣ ಗೊಂಡು ಕ್ಷಣದಲ್ಲಿ ಕರಗಿ ಹೋಗುವಂಥದ್ದು. ಆ ಕ್ಷಣದಲ್ಲಿ ಅದನ್ನು ಸಹೃದಯತನದ ಸ್ಪಂದನದಿಂದ ಸೆರೆಹಿಡಿದರೆ ಮಾತ್ರ ಅದೊಂದು ಅನುಭವವಾಗುವುದು ಸಾಧ್ಯ. ಪುನಃ ಹೇಳಬೇಕು – ಈ ಸೃಷ್ಟಿ ಪ್ರಕ್ರಿಯೆ 'ರಭಸದ' ಪ್ರವಾಹದಂತೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಅದಕ್ಕೆ ಸಾಕ್ಷಿಯಾಗುವ ಅವಕಾಶಗಳು ಮಾತ್ರ ಕಡಿಮೆ. ಭಿನ್ನತೆ ಸಾಧಿಸಿದ್ದೇವೆ ಎಂದು ಜಾಹೀರಾತುಗೊಳಿಸುವವರ ಮಧ್ಯೆ ಇಂಥ ಪ್ರಯತ್ನಗಳು ಕರಗಿ ಹೋಗುವ ಸಂದರ್ಭಗಳೇ ಜಾಸ್ತಿ. ನಾವೆಷ್ಟು ಸಹೃದಯರು ಪ್ರವಾಹದ ಬದಿಯಲ್ಲಿಯೋ ಎದುರಿನಲ್ಲಿಯೋ ಕುಳಿತು ಧ್ಯಾನಸ್ಥರಾಗುತ್ತೇವೆ. ಈ ಪ್ರಶ್ನೆ ಎಷ್ಟು ಮಂದಿಯನ್ನು ಕಾಡುತ್ತದೆ?

ಧ್ಯಾನಸ್ಥರಾಗುವವರು ಇಲ್ಲವೆಂದಲ್ಲ. ಇದ್ದಾರೆ. ಅಂಥ ಆಗುವವರ ಮುಂದೆ ಸೃಷ್ಟಿ ಆಗಗೊಡುವಂಥ ಪ್ರಯತ್ನ ಮಾಡಲು ಇಂಥ ಅಮೂರ್ತ ಚಿಂತನೆ ಬಹಳ ಅಗತ್ಯ. ಅದರಲ್ಲೂ ಈ ಸಂಚಿಕೆಯ ಸಂಪಾದಕರು ನನಗೆ ನೀಡಿದ – ನೃತ್ಯ ರೂಪಕಗಳಲ್ಲಿ ಹಿಮ್ಮೇಳದ

ಸೃಜನಶೀಲ ಅನ್ವಯ – ಎಂಬ ವಿಷಯವನ್ನಿರಿಸಿಕೊಂಡು ನನ್ನ ಅಲ್ಪ ಅನುಭವವನ್ನು ಅಕ್ಷರ ರೂಪಕ್ಕಿಳಿಸಲು ಅಮೂರ್ತ ಚಿಂತನ ಮಂಥನ ತೀರ ಅನಿವಾರ್ಯ. ಕೆಲವು ಪ್ರಾಥಮಿಕ ಎನ್ನಿಸಬಹುದಾದ ಕೆಲವು ಉದಾಹರಣೆಗಳ ನೆರವಿನಿಂದಲೇ ನನ್ನ ಪ್ರಯತ್ನ ಸಾಗಬೇಕಾಗಿದೆ. ಇದೊಂದು ಟಿಪ್ಪಣಿ ಮಾತ್ರ. ಕೈಪಿಡಿ ಅಲ್ಲ. ಹೀಗಾಗಬೇಕೆಂಬ ಮಾರ್ಗದರ್ಶನವೂ ಅಲ್ಲ.

ಹೇಗೆ ವಾದನ ವೈಭವ ಸೃಜನಗೊಳ್ಳದೆ (ಹಿರಿಯ ಕಲಾಚಿಂತಕ ದಿ। ರಾಮದಾಸ ಸಾಮಗರು 'ಸರ್ಜನ' ಎನ್ನಬೇಕು – ಆಗ ಕ್ರಿಯೇಟಿವ್ ಅರ್ಥ ಸಾಧ್ಯ ಎಂದದ್ದು ನೆನಪಾಗುತ್ತಿದೆ) ಮೃತಗೊಳ್ಳುತ್ತದೆ ಎಂಬುದನ್ನರಿಯಲು ಇಂದಿನ ಯಾಂತ್ರಿಕ ಯುಗದಲ್ಲಿ ಬಹು ಸುಲಭ. ನೆನಪಿಸಿಕೊಳ್ಳಿ – ನೀವು ನೋಡಿದ ಶಿವನ ಅಥವಾ ಗಣಪತಿಯ ಧ್ಯಾನ ಶ್ಲೋಕದ ಸಿದ್ಧ ಸಂಗೀತಕ್ಕೆ ಸಾಲು ಸಾಲು ಕಲಾವಿದರು ಸಮವಸ್ತ್ರ ಧರಿಸಿ ಕವಾಯತು ನಡೆಸಿ ಅಲ್ಲಲ್ಲಿ ಶಿವ ಯಾ ಗಣಪತಿಯ ಶಿಲ್ಪವನ್ನು ಗುಂಪು ರಚನೆಯಲ್ಲಿ ನಿರ್ಮಿಸಿ ಹೊಗೆಯ ಮಧ್ಯೆ ಕುಣಿವ ರೂಪಕದಂಥ ಪ್ರಯತ್ನ ಇವೆಲ್ಲದಕ್ಕೆ ಉತ್ತಮ ನಿದರ್ಶನ. ಆ ಸಿದ್ಧ ಸಂಗೀತ ತಟ್ಟೆ ಮತ್ತೆ ಮತ್ತೆ ಯಾರೋ ಹಾರಿ ಕುಪ್ಪಳಿಸಿ ಕುಣಿದಾಡುವ ನೃತ್ಯಕ್ಕಾಗಿ ಸೃಷ್ಟಿಗೊಂಡ ಹಿನ್ನೆಲೆಯಲ್ಲ. ಅದರ ವಾದನ ಸಮ್ಮೇಳನದ ಉದ್ದೇಶವೇ ಬೇರೆ. ಇರಲಿ. ಅದನ್ನೇ ಹಿನ್ನೆಲೆಯಾಗಿ ಬಳಸುವ ಮುನ್ನೆಲೆಯ ನೃತ್ಯವೂ ಅದಕ್ಕೆ ಸಂಗತವಲ್ಲ. ಅಲ್ಲಿರುವ ಶ್ಲೋಕಾನುಕ್ರಮಣಿಕೆಯ ಬದಲು ಬೇರೆ ವಾಕ್ಯ ಗಮಕ ಸರಣಿಯನ್ನು ಪೋಣಿಸಿ ಧ್ವನಿಗ್ರಹಣ ಮಾಡಿ ನುಡಿಸಿದರೂ ಈ ರಂಗದ ನಡೆಯಲ್ಲಿ ವ್ಯತ್ಯಾಸವಾಗದು. ಅದೇ ಹಾರು ಬೀಳು ನೆಗೆತದ ರಂಗನಡೆ. ಒಂದು ನಿರ್ದಿಷ್ಟ ಲಯದ ನೆಪದಲ್ಲಿ ಸಾಗುವ ಇಂಥ ರಂಗಕ್ರಿಯೆಗಳಲ್ಲಿ ಸೃಷ್ಟಿ ಸ್ಥಗಿತಗೊಳ್ಳುವುದಲ್ಲದೆ ಇನ್ನೇನನ್ನು ಕಾಣುವುದು ಸಾಧ್ಯ? ಇಲ್ಲಿ ಹಿನ್ನೆಲೆ ಹಿಮ್ಮೇಳದ ಸೃಜನಶೀಲ ಅನ್ವಯ ನಡೆಯುವುದಿಲ್ಲ. ಬದಲು ಭಾವರಹಿತ ಸಂವಹನ ಸ್ಖಾಲಿತ್ಯದ ಅಬ್ಬರ ಮಾತ್ರ ಪ್ರೇಕ್ಷಕರನ್ನು ಬಹು ಸುಲಭವಾಗಿ ಸೆರೆಹಿಡಿಯುತ್ತದೆ.

ಇಂಥ ಯಾಂತ್ರಿಕತೆಯಲ್ಲಿ ಹಿಮ್ಮೇಳ ನಿಷ್ಕ್ರಿಯಗೊಂಡಿರುತ್ತದೆ ಎಂಬುದನ್ನು ತಿಳಿಸುವುದು ಆ ಪ್ರಯತ್ನಗಳ ಗುಣಮಟ್ಟವನ್ನು ಅಳೆಯುವುದಕ್ಕಲ್ಲ. ಅವುಗಳ ಆಕರ್ಷಣೆಯನ್ನು ಮೆಚ್ಚುವ ಮಾನದಂಡವೇ ಬೇರೆ. ಭಕ್ತಿ ಎಂಬ ಮಾನದಂಡದ ಮೂಲಕ ಅನೇಕ ಆರಾಧನಾ ಕಲೆಗಳ (ಉದಾಹರಣೆಗೆ ನಾಗಮಂಡಲ) ಏಕತಾನತೆಯನ್ನೋ ಅರ್ಥನೀಡದ ಅಬ್ಬರವನ್ನೋ ನಾವು ಸಹಿಸಿ, ಅಂದರೆ ಅದ್ಯಾವುದಕ್ಕೂ ತಲೆ ಕೆಡಿಸಿಕೊಳ್ಳದೆ ಹೇಗೆ ಅಧ್ಯಾತ್ಮದ ಅನುಭವವನ್ನು ಪಡೆದು ಪುನೀತರಾಗುತ್ತೇವೆಯೋ ಅದೇ ರೀತಿ ಇಂಥ ರಂಜನೀಯ ರಾದ್ಧಾಂತಗಳ ಆಸ್ವಾದನೆಗೆ 'ರಂಜನೆ' ಎಂಬ ಮಾನದಂಡ ನಮ್ಮಲ್ಲಿರಬೇಕಾಗುತ್ತದೆ. ವೇದಿಕೆಯ ಮೇಲಿರುವವರೂ ಕುಣಿದು ಅಬ್ಬರಿಸುವುದು ಮತ್ತು ಕೆಳಗಿದ್ದವರೂ ಸ್ಪಂದಿಸಿ ದನಿಕೂಡಿಸಿ ಸಿಳ್ಳೆ ಹೊಡೆದು ರಂಜನೆಗೊಳಗಾಗುವುದು – ಇತ್ಯಾದಿಗಳೆಲ್ಲ ಕಲಾಸೃಷ್ಟಿಯ ವಿರುದ್ಧ ನೆಲೆಯಲ್ಲಿರುತ್ತವೆ. ಆದರೆ ಇವುಗಳ ಸ್ಪಂದನದ ಮತ್ತು ಸ್ಪಂದನ ಸ್ಖಲನದ ನೆಲೆಗಳ ಅರಿವಾಗುವುದೂ ಸೃಜನ ಕಲಾವಂತಿಕೆಗೆ ಅಗತ್ಯ. ಇನ್ನೂ ಸಾಮಾನ್ಯವಾದ ದೈನಂದಿನ ನಮ್ಮ ಅನುಭವದ ಉದಾಹರಣೆಯಿಂದ ಇದನ್ನು ಇನ್ನಷ್ಟು ಅರ್ಥಮಾಡಿಕೊಳ್ಳಬಹುದು. ಎಡೆಬಿಡದೆ ಬರುವ ಧಾರಾವಾಹಿಗಳ ಹಿನ್ನೆಲೆ ಸಂಗೀತವನ್ನು ಗಮನಿಸಿ – ಒಮ್ಮೆ ಹಲವು

ಸಂಗೀತ ತುಣುಕುಗಳ ಧ್ವನಿಗ್ರಹಣ ಮಾಡಿಟ್ಟುಕೊಂಡು ನೂರಾರು ಕಂತುಗಳಲ್ಲಿ ಸಾಗುವ ಧಾರಾವಾಹಿಯುದ್ದಕ್ಕೂ ಅವೇ ತುಣುಕುಗಳನ್ನುಪಯೋಗಿಸುವಾಗ ಸೃಷ್ಟಿ ಹೇಗೆ ಸಾಧ್ಯ? ಸೃಜನತೆಯ ಅನುಭವ ಸಾಧ್ಯವೇ? ಅಪಘಾತಕ್ಕೆ ತುತ್ತಾದವರ ಕಳೇಬರವನ್ನು ಸಾಗಿಸುವಂತೆ ಈ ಪ್ರಯತ್ನ ಸಾಗುತ್ತಿರುತ್ತದೆ.

ಇಷ್ಟು ನಿಷ್ಠುರವಾಗಿ ತೀವ್ರವಾಗಿ ನಮ್ಮ ಕಲಾ ಸಂವೇದನೆಯನ್ನು ನಾವು ಹುರಿಗೊಳಿಸಿದಾಗ ಮಾತ್ರ ಕಲಾ ಪ್ರಪಂಚದ ಸೃಜನ (ಕ್ರಿಯೇಟಿವ್) ಪ್ರಕ್ರಿಯೆಯ ಪರಿ ಒಬ್ಬನ ಅರಿವಿಗೆ ಬರುವುದು ಸಾಧ್ಯ. ನೃತ್ಯ ರೂಪಕ ಒಂದು ಪ್ರತ್ಯೇಕ ಕಲಾಪ್ರಕಾರ ಎಂದೆನ್ನಿಸಿಕೊಳ್ಳಲು ಹಿಮ್ಮೇಳದ ಈ ಹರಿತ–ತ್ವರಿತ–ಸ್ಫುರಿತ ಮಿಲನ ಅಗತ್ಯ. ದಾಂಪತ್ಯದ ಧಾರ್ಮಿಕ ನಡೆಯಲ್ಲಿ 'ರತಿ' ಹುದುಗಿದ ರೀತಿ ಇದು. ಸೃಷ್ಟಿಗೆ ಈ ಸರಸ ಅಗತ್ಯ. ಕೆಲವೊಮ್ಮೆ ವಿರಸವೂ. (ನನ್ನ ರಂಗ ಪ್ರಯೋಗ 'ಪಾಂಚಾಲಿ'ಯ ಕೊನೆಯ ಹಂತದಲ್ಲಿ ಕೆಲವು ಕ್ಷಣ ಶ್ರುತಿ ನಿಲ್ಲಿಸಿದ್ದು ದ್ರೌಪದಿಯ ಒಟ್ಟು ಬದುಕಿನ ಪರಿ ಅನಾಥವಾದುದನ್ನು ಸೂಚಿಸಲು. ಶ್ರುತಿ ತಪ್ಪಿದಾಗ ಅವಲಂಬಿಸಿದ ಎಲ್ಲ ನಾದ–ವಾದನಗಳು ಅನಾಥವಾಗುತ್ತವೆಯಲ್ಲವೇ? ದ್ರೌಪದಿ ಪಂಚವಲ್ಲಭೆಯಾಗಿಯೂ ಅನಾಥೆಯಾಗುವುದನ್ನು ನಾದದಿಂದ ತಿಳಿಸದೆ ಮೌನದಿಂದ ತಿಳಿಸುವ ಪ್ರಯತ್ನ ಇದು.)

ಈ ರೀತಿ ತುಂಬ ಆಳವಾಗಿ ಯೋಚಿಸಿದರೆ ಜಗತ್ತಿನ ಎಲ್ಲ ನೃತ್ಯ ಪ್ರಕಾರಗಳನ್ನೂ ನೃತ್ಯ ರೂಪಕಗಳೆಂದೇ ಕರೆಯಬಹುದು. ಏಕ ವ್ಯಕ್ತಿ ಪ್ರಸ್ತುತಿಯಾಗಿರಬಹುದು – ಅನೇಕ ಪಾತ್ರಗಳ ಅಭಿವ್ಯಕ್ತಿಯಾಗಿರಬಹುದು. ಆದರೆ ಒಂದು ನಿರ್ದಿಷ್ಟ ನೆಲೆಯಲ್ಲಿ 'ನೃತ್ಯ ರೂಪಕ'ವನ್ನು ಪ್ರತ್ಯೇಕವಾದ ಕಲಾಸೃಷ್ಟಿಯಾಗಿಸಬೇಕಾದರೆ, ರಂಗ ನಡೆಯಾಗಿಸಬೇಕಾದರೆ ಪ್ರಾರಂಭದಲ್ಲಿ ನಾನು ಹೇಳಿದ 'ನೆಲೆ'ಗಳನ್ನು ನಿರ್ದೇಶಕನಾಗಿ ಒಂದು ಕನಸಿನಂತೆ ಕಲ್ಪಿಸಿಕೊಳ್ಳಬೇಕಾಗುತ್ತದೆ. 'ಹಿಮ್ಮೇಳ'ಕ್ಕೆ ಸೃಷ್ಟಿ ಪೂರಕವಾದ ಹೊಸ ಅರ್ಥವನ್ನು ಕಂಡುಕೊಳ್ಳಬೇಕಾಗುತ್ತದೆ. ಅಚ್ಚರಿ ಎನಿಸುತ್ತದೆ–ಭಾರತೀಯ ಕಲಾಪರಂಪರೆಯಲ್ಲಿ ಈ 'ಸೃಷ್ಟಿ'ಯ ಕುರಿತು ಸ್ಪಷ್ಟ ಕಲ್ಪನೆ ಇದ್ದಂತಿದೆ. ಒಂದು ಲೆಕ್ಕದಲ್ಲಿ 'ಹಿಮ್ಮೇಳ' ಎನ್ನುವುದೇ ಪಶ್ಚಿಮದ ಎರವಲು. ನಮ್ಮ ಪರಂಪರೆಯಲ್ಲಿ ಅದು ಪ್ರತ್ಯೇಕವಲ್ಲ. ಶಿವ ಕುಣಿಯಬೇಕಾದರೆ ಅವನ ಕೈಯಲ್ಲಿ ಡಮರು ಬೇಕು. ಕೃಷ್ಣನಿಗೆ ಕೊಳಲು ಬೇಕು. ರಂಗಸ್ಥಳವೆಂದರೆ ಇವೆಲ್ಲ ಪ್ರತ್ಯೇಕಗೊಳ್ಳದೆ ಒಟ್ಟಾಗಿರುವ ಸೃಷ್ಟಿ ಕೇಂದ್ರ, ರತಿ ಸ್ಥಾನ. ಹೆಚ್ಚು ಕಡಿಮೆ ನಮ್ಮ ಅನೇಕ ಜಾನಪದ – ಶಿಷ್ಟ ಕಲಾರಂಗದಲ್ಲಿ ವಾದನ ವಾದ್ಯಗಾಯನ ಪಾತ್ರ ಸಮೂಹ ಒಟ್ಟಾಗಿರುವ ಸಂದರ್ಭಗಳೇ ಜಾಸ್ತಿ. ನೃತ್ಯ ಶಿಲ್ಪವೂ ಇದನ್ನೇ ದಾಖಲಿಸುತ್ತದೆ. ನಮ್ಮ ಯಕ್ಷಗಾನದಲ್ಲಿ ಪಾತ್ರಗಳೊಂದಿಗೇ ರಂಗಸ್ಥಳದಲ್ಲಿ ವಾದ್ಯವಾದನ ಗಾಯನದವರ ಚಲನೆ ಒಂದು ಸಮಗ್ರ ಕಾವ್ಯದ ಸಾವಯವ ರಚನೆಯಂತೆ, ಒಂದೇ ರಂಗಚಲನೆಯಂತೆ ನಡೆಯಬೇಕೆಂಬ ಉದ್ದೇಶ ಹಿಂದಿನವರಿಗಿದ್ದಂತಿತ್ತು. (ಎಲ್ಲಿಯೋ ಕಳೆದುಹೋಗಿದೆ –ಅದು ಬೇರೆ ವಿಷಯ) ಹಿಮ್ಮೇಳವು ಸೃಜನಶೀಲ ಅನ್ವಯಕ್ಕೆ ಸಹಕಾರಿಯಾಗಲು ಈ ರಂಗ ಸಾಂಗತ್ಯ ತೀರ ಅಗತ್ಯ. ಮದ್ದಳೆ ವಾದಕರ ಕೈ ಕುಣಿಯುವುದು ಕಲಾಪಾತ್ರಧಾರಿಯ ಕಾಲು ಕುಣಿಯುವುದು, ಭಾಗವತರ ಕಂಠ ಕುಣಿಯುವುದು ಪಾತ್ರಧಾರಿಯ ಭಾವ ನರ್ತಿಸುವುದು ಒಂದಾದಾಗ, ಈ ಸಾಂಗತ್ಯ ಸಾಧ್ಯ – ಇದೇನೂ 'ಆಗದು ಹೋಗದು' ಎಂಬ ಅರ್ಥಶೂನ್ಯ ಆಲಂಕಾರಿಕ

ಮಾತುಗಳಲ್ಲ. ರಂಗಸೃಷ್ಟಿ ಎಂಬ ಸಮಗ್ರ ಕಲ್ಪನೆಯನ್ನು ಮನಸ್ಸಿಗೆ ತಂದುಕೊಂಡಾಗ ಮಾತ್ರ ಈ ಬಣ್ಣನೆಯ ಹಿಂದಿನ ಯಥಾರ್ಥತೆ ತಿಳಿಯುತ್ತದೆ. (ಕಲಿತ ನೃತ್ಯ ವ್ಯಾಕರಣದ ಬಲದಿಂದ 'ಸಂಯೋಜಿ'ಸವುದನ್ನೇ 'ನಿರ್ದೇಶನ' ಎಂದು ತಪ್ಪಾಗಿ ಅರ್ಥೈಸುವ ಇಂದಿನ ದಿನಗಳಲ್ಲಿ ಈ ರೀತಿಯ ಚಿಂತನೆಯ 'ಶಿಬಿರದ, ಅವಲೋಕನದ ಅನಿವಾರ್ಯತೆ ಹೆಚ್ಚುತ್ತಿದೆ ದಿನದಿಂದ ದಿನಕ್ಕೆ)

ಸಿದ್ಧ ನಡೆಯಲ್ಲಿ ಸೃಷ್ಟಿ ಹೇಗೆ ಸಾಧ್ಯ ಎಂಬುದೇ ನಿರ್ದೇಶನದ ಮುಂದಿರುವ ದೊಡ್ಡ ಸವಾಲು. ಸಿದ್ಧ ನಡೆಯಲ್ಲಿ ಸಾಗುತ್ತ, ಪ್ರಸಿದ್ಧ ಛಾಪಿನಿಂದ ಬಿಡುಗಡೆಗೊಳ್ಳುತ್ತ ಪ್ರತ್ಯೇಕತೆಗಾಗಿ ಪ್ರಯತ್ನಿಸಿದಾಗ ಸ್ವತಂತ್ರ ನೃತ್ಯ ರೂಪಕದ ಆವಿರ್ಭಾವ ಸಾಧ್ಯ. ಯಕ್ಷಗಾನದಲ್ಲಿ ಡಾ. ಶಿವರಾಮ ಕಾರಂತರ ಪ್ರಯೋಗ ಬ್ಯಾಲೆಯಾಗಿ ರೂಪುಗೊಂಡ ರೀತಿ ಅದು. (ಅವುಗಳ ಮಿತಿ ಪ್ರತ್ಯೇಕ ವಿಶ್ಲೇಷಣೆಗೆ ವಸ್ತು) ಆದರೆ ಅದು ಯಕ್ಷಗಾನದ ಸಾಧ್ಯತೆಯಾಗಿ ರೂಪುಗೊಳ್ಳದಿರಲು ಕಾರಣ – ಕಾರಂತರ ಕಿನ್ನರ ನೃತ್ಯದ ರೂಪಾಂತರ ಮಾತ್ರ ಆದುದು. ಆದರೆ ಹಿರಿಯ ಕಲಾಶಕ್ತಿಯಾದ ಕಾರಂತರಿಂದ ಆದ ಬಹುದೊಡ್ಡ ಕೊಡುಗೆ ಎಂದರೆ – ಸಿದ್ಧ ಯಕ್ಷಗಾನದ ನಡೆಯ ಬಿಗಿ ಮತ್ತು ಕಾರಂತರ ಕಲ್ಪನೆಯ ಕಿನ್ನರ ನೃತ್ಯದ (ಯಕ್ಷಗಾನದ ಸೋಗಿನಲ್ಲಿ ) ಕ್ರಿಯೇಟಿವ್ ಸಡಿಲು ತನದ ನಡುವೆ ಹೊಸ ಶೋಧನೆಗೆ ನೀಡಿದ ಅದ್ಭುತ ರಂಗಪ್ರಚೋದನೆ. ದುರಂತವೆಂದರೆ ಆ ಪ್ರಚೋದನೆ ಈಗೀಗ ವೈಯಕ್ತಿಕ ಅಂದರೆ ಒಬ್ಬೊಬ್ಬರ ಕಲ್ಪನಾ ವಿಹಾರವಾಗಿ ರಂಗಸ್ಥಳವನ್ನು ಅಲುಗಿಸುತ್ತ ಕಾರಂತರ ಪ್ರೇರಣೆ ಎಲ್ಲಿಯೋ ಕಳೆದು ಹೋಗುವಂತಾದುದು. ಏಕೋ ಕಾರಂತರೂ ಪ್ರಾಯಶಃ ತನ್ನ ಉಳಿದ ಸಾಮಾಜಿಕ, ಸಾಹಿತ್ಯಿಕ, ಬೌದ್ಧಿಕ, ಸಾಂಸ್ಕೃತಿಕ ಚಟುವಟಿಕೆಗಳ ಬಾಹುಳ್ಯದಿಂದಿರಬೇಕು ತನ್ನ ಪ್ರಯೋಗಗಳಿಗೆ – ರವೀಂದ್ರ ಸಂಗೀತ ನಾಟ್ಯದಂತೆ ಪ್ರತ್ಯೇಕ ಸ್ಥಾನಮಾನ ನೀಡುವ ಗೋಜಿಗೂ ಹೋಗಲಿಲ್ಲ.

'ನೃತ್ಯ ರೂಪಕಗಳಲ್ಲಿ ಹಿಮ್ಮೇಳದ ಸೃಜನಶೀಲ ಅನ್ವಯ' – ಎಂಬ ಸಂಪಾದಕರ ಸೂಚಿತ ಕಲ್ಪನೆಯ ಬೇರು ಕಾರಂತರ ಪ್ರಯತ್ನಗಳ ಪದರುಗಳಲ್ಲಡಗಿದೆ. ಅದರ ಮರು ಪರಿಶೀಲನೆ ನಡೆದರೆ ಕವಲುದಾರಿ ಕಂಡೀತು. ಕವಲು ಎಂದರೆ ವಿಪರೀತ, ಅಡ್ಡಾದಿಡ್ಡಿ ದಾರಿಯಲ್ಲ – ನೃತ್ಯ ರೂಪಕದ ಸಾಧ್ಯತೆಗಳ ಶೋಧ. ಸಿದ್ಧ ನಡೆಯ ಪರಂಪರೆಯ ಪ್ರದರ್ಶನಕ್ಕಿಂತ ಭಿನ್ನವಾಗಿ ವಿವಿಧ ರಂಗರೂಪಕಗಳ ನೆರವಿನಿಂದ 'ನೃತ್ಯ ರೂಪಕ' ಎಂಬ ಪ್ರತ್ಯೇಕ ಸ್ವತಂತ್ರ ಕಲಾ ಸೃಷ್ಟಿಯ ಶೋಧ. ಅದನ್ನೇ ನಾನು ಭಿನ್ನ ನಾದ ತರಂಗಗಳ ಫಲಿತಾಂಶ ಎಂದು ಕರೆದಿದ್ದೇನೆ. ಅದು ಹಿಮ್ಮೇಳ ಮುಮ್ಮೇಳವಾಗುವ ಒಂದು ವಿಶಿಷ್ಟ ರಂಗಸೃಷ್ಟಿ.

ಈ ಪ್ರಬಂಧದ ಮಿತಿಗನುಸಾರ ಹೀಗೆ ಸಂಕ್ಷೇಪಿಸಬಹುದು. ಹಿಮ್ಮೇಳ ಹಿಮ್ಮೇಳವಾಗದೆ ಮುಮ್ಮೇಳದೊಂದಿಗೆ ಬೆರೆಯಬೇಕು – ಇದನ್ನು ನಾದ ಸಾಂಗತ್ಯ ಎನ್ನೋಣ. ಸಂಭಾಷಣೆ ಸಹಿತವೂ ಇದು ಸಾಧ್ಯ. ಆ ಸಂಭಾಷಣೆಗೆ ನಾದ ಸೌಕರ್ಯ ತುಂಬುವ ವಾದನ ಮಿಡಿತ ಅಗತ್ಯ. ನನ್ನ ಅನುಭವವನ್ನೆ ಇಲ್ಲಿ ಪ್ರಸ್ತುತಗೊಳಿಸಬೇಕು – ಕೇರಳದ ಕಾಲಡಿಯಲ್ಲಿ ನನ್ನ ಕೃತಿ ಸೌಂದರ್ಯ ಲಹರಿಯನ್ನು ಕನ್ನಡದಲ್ಲಿಯೇ ಪ್ರದರ್ಶಿಸಿದಾಗ ನಾಟ್ಯ ಶಾಸ್ತ್ರ ಪರಿಣತರು ಹಿನ್ನೆಲೆ ಮಾತು – ನಾದ ವಾದನವನ್ನು ಮುನ್ನೆಲೆಯ ಪ್ರದರ್ಶನದ

ಭಾಗವಾಗಿಯೇ ಕಂಡು ಒಪ್ಪಿದರೆ ಸ್ಥಳೀಯ ವಿಮರ್ಶಕರೊಬ್ಬರು ತಮ್ಮ ಬರಹದಲ್ಲಿ ಪಾಂಚಾಲಿಯ ನನ್ನ ಹಿನ್ನೆಲೆಯನ್ನು ಮಾಧವಾಚಾರ್ಯರ – ಕುಟ್ಟುವಿಕೆ ಎಂದು ಕರೆದರು. ಈ ಎರಡೂ ಅನಿಸಿಕೆಗಳು ನೃತ್ಯ ರೂಪಕದ ಹಿಮ್ಮೇಳದ ಸೂಕ್ಷ್ಮತೆಗಳನ್ನೇ ಬಿಂಬಿಸುತ್ತವೆ.

ವಸ್ತುವಿನ ಆಯ್ಕೆಯೇ ಪ್ರಧಾನ ಹಂತ. 'ಎಲ್ಲ ಹಿಮ್ಮೇಳ ಎಲ್ಲ ವಸ್ತುಗಳಿಗೆ' ಎಂಬ ಸ್ಥಾಪಿತ ಧೋರಣೆ ತುಂಬ ಅಪಾಯಕಾರಿ. ಹೌದು. ಇದು ಬಲು ಕಷ್ಟದ ದಾರಿ. ನಾನು ಒಪ್ಪಿಕೊಳ್ಳಬೇಕು. ನನ್ನೆಲ್ಲ ರಂಗಪ್ರಯತ್ನಗಳಲ್ಲಿಯೂ ಈ ದಿಸೆಯಲ್ಲಿ ಯಶಸ್ಸು ಅರ್ಧ ಕನಸಾಗಿ ಉಳಿದಿದೆ. ಇರಲಿ. ಮನಸ್ಸು ಮಾಡಿದರೆ ಇದು ಸುಲಭ. ಬೇಕಾಗಿಯೋ ಬೇಡವಾಗಿಯೋ ಅಪರಿಮಿತ ಪರದೇಶದ ವಾದನಗಳನ್ನು (ರಿಥಮ್‌ಪ್ಯಾಡ್) ನಾವು ಬಳಸುತ್ತಿದ್ದೇವಲ್ಲ, ಹಾಗೆಯೇ ವಸ್ತುವಿಗೊಪ್ಪುವ ಭಾರತೀಯ ವಾದ್ಯ ವಾದನಗಳನ್ನು ಶ್ರುತಿ ಸಾಮ್ಯ ಸಾಧಿಸಿ ಬಳಸಿದರೆ 'ಸರ್ಜನತೆ' ಮಿಂಚುತ್ತದೆ. ಕೆಲವು ಕಲಾ ಪ್ರಕಾರಗಳಿಗೆಂದೇ ಮೀಸಲಿರುವ ವಾದನಗಳನ್ನು (ಉದಾ – ಎಡಕ್ಕ , ಮುಖವೀಣೆ ಇತ್ಯಾದಿ) ನಮ್ಮ ವಸ್ತು ಬಯಸುವ ನುಡಿತಗಳಿಗೆ ಬಗ್ಗಿಸಿ ಹಿಗ್ಗಿಸಿ ಹಿನ್ನೆಲೆ ಒದಗಿಸುವ ಪ್ರಯತ್ನ ಇಂಥ ಕನಸಿನ ಭಾಗ.

ಇಲ್ಲಿಯೇ ಗಮನಿಸಬೇಕು. ಇಂಥ ಸಾಧ್ಯತೆಗಳನ್ನು ಪರಂಪರೆಯಲ್ಲಿ ಮಿತವಾದನ ಗಳಿಂದಲೇ (ಉದಾ – ಮದ್ದಳೆಯ ಗುಂಪು) ಸಾಕಾರಗೊಳಿಸುವುದನ್ನು ಅಲ್ಲಗಳೆಯದೆ ಭಿನ್ನ ಸೃಷ್ಟಿಗೆ ಭಿನ್ನ ಬಳಕೆ ಅಗತ್ಯ ಎಂದಷ್ಟೆ ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಸಂಭಾಷಣೆಯ ಏರಿಳಿತ ಹಿಮ್ಮೇಳದ ಬಡಿತವನ್ನು ಬಯಸದ ಸಂದರ್ಭಗಳೆಷ್ಟೋ ಇರುತ್ತವೆ. ಅಂಥ ಸಂವೇದನಾ ಸಂದರ್ಭಗಳಲ್ಲಿ ವಾದನ ಮಾರಕವಾಗುತ್ತದೆ. ಅದೇ ರೀತಿ ಚಲನೆ ಬಯಸುವ ಹಿನ್ನೆಲೆ ವಾದನದಲ್ಲಿಯೂ ವೈವಿಧ್ಯತೆ ಸಾಧ್ಯ. ಬೇಡ ರಂಗಕ್ಕೆ ಸುತ್ತು ಬರುವುದಕ್ಕೆ ಒಂದೇ ನಾದ ನುಡಿತ, ಮೃಗ ಹಾರಿ ಹಾರಿ ಸುತ್ತು ಬರುವುದಕ್ಕೆ ಒಂದೇ ನುಡಿತವಾದರೆ ಸೃಷ್ಟಿ ಹೇಗೆ ಸಾಧ್ಯ? ವಾದನವೇ ಇಲ್ಲದೆ ಪ್ರಾಣಭಯದ ಪ್ರಾಣಿ ಮೌನದಿಂದ ಗಿರಿಕಿ ಹೊಡೆಯುವುದನ್ನು ವಾದನ ಪ್ರತಿನಿಧಿಸಲಾರದು. ಅಥವಾ ಎಂಥ ವಾದನ ವೇದನೆಗೆ ಪೂರಕ ಎಂಬ ಅರ್ಥವಂತಿಕೆ ಇಲ್ಲಿ ಅಗತ್ಯ.

ಭಿನ್ನ ನಾದ ತರಂಗಗಳ ಸಮನ್ವಯತೆ ಹಿಮ್ಮೇಳದ ಸೃಜನತೆಗೆ ತೀರ ಅಗತ್ಯ – ನನ್ನ ಬಳಿ ಈಗ ಕವಿ ಶ್ರೀ ಅಂಶುಮಾಲಿ ಅವರು ತುಳುವಿಗೆ ಅನುವಾದಿಸಿದ ಹಿರಿಯ ಕವಿ ದಿ। ಸೇಡಿಯಾಪು ಕೃಷ್ಣ ಭಟ್ಟರ 'ಶಬರಿ' ಕೃತಿ ಇದೆ. ಬಹಳ ಹೃದ್ಯವಾದ ಈ ಕೃತಿಯನ್ನು ಎಲ್ಲಿಯೂ ರಂಗಕ್ಕೆ ಬಾರದೆ ಮೊದಲ ಬಾರಿಗೆ (1980) ಒಂದು ರಂಗ ಶೋಧವಾಗಿ ನೃತ್ಯ ರೂಪಕವಾಗಿಸಿ ರೂಪಕ ಸಂಗೀತಕ್ಕೆ ಒಡ್ಡಿದ ನನಗೆ ಈ ತುಳು ಕೃತಿಯನ್ನು ಅದೇ ಸಿದ್ಧ ನಡೆಯಲ್ಲಿ ಪ್ರಸ್ತುತ ಪಡಿಸಲು ಮನಸು ಒಪ್ಪುತ್ತಿಲ್ಲ. ಕಾರಣ ಆ ಸರ್ವ ಪ್ರಥಮ ಪ್ರಯತ್ನಕ್ಕೆ ತುಂಬ ಪ್ರಭಾವಶಾಲಿ ಸಂಗೀತವನ್ನು ಸಾಧ್ಯಗೊಳಿಸಿದ ಪ್ರತಿಭಾವಂತರಾದ ಕವಿ ಗುರುರಾಜ ಮಾರ್ಪಳ್ಳಿ ಮತ್ತು ಭಾವಗಾಯಕ ಚಂದ್ರಶೇಖರ ಕೆದ್ಲಾಯರ ಗಮಕ ಭಿನ್ನವಾಗಿ ಈ ತುಳು 'ಶಬರಿ'ಗೆ ಕೊಡಬಹುದಾದ ಎತ್ತರಕ್ಕೆ ಖಂಡಿತಕ್ಕೂ ಒಗ್ಗಲಾರದು. ನನ್ನೀ ಉದಾಹರಣೆಯನ್ನು ಎತ್ತಿಕೊಳ್ಳಲು ಕಾರಣ – ನಿರ್ದೇಶನದ ಹಾದಿಯಲ್ಲಿ ಸೂಕ್ತ ಹಿಮ್ಮೇಳದ ಅಗತ್ಯವನ್ನು ತಿಳಿಸುವುದಕ್ಕಲ್ಲದೆ ಬೇರೇನಿಲ್ಲ. ಈಗ ಅವರೆ ತುಳುವಿಗೊಪ್ಪುವ

ಭಿನ್ನ ಸಂಗೀತ ನೀಡಬಲ್ಲರು. ಮಿತ್ರ ಮಾರ್ಪಳ್ಳಿ ತನ್ನೆಲ್ಲ ಸಂಗೀತದ ಕೆಲಸಗಳಲ್ಲಿ ಅದನ್ನು ಸಾಧಿಸಿದ್ದಾರೆ. ಮಿತ್ರ ಕೆದ್ಲಾಯರು ಸಾಹಿತ್ಯ ಸಂವಹನದಲ್ಲಿ ಸಿದ್ಧಹಸ್ತರು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಲೆಕ್ಕವಿಲ್ಲದಷ್ಟು ರೂಪಕಕ್ಕೆ ಒದಗಬಹುದಾದ ಕೃತಿಗಳಿವೆ. ಅವುಗಳೊಳಗೆ ಒಂದು ಸಂಗೀತ ಪ್ರಪಂಚವಿದೆ. ಮದ್ದಳೆ, ಚೆಂಡೆ, ತಂಬರೆ, ಪಂಚವಾದ್ಯ, ಡೋಲಕ್ಕು, ಎಡಕ್ಕು, ಸೂರ್ಯವಾದ್ಯ – ಹೀಗೆ ಅಸಂಖ್ಯ ವಾದನಗಳ ಸಾಲು ಸಾಲೇ ಇದೆ. ವಿವಿಧ ಕಂಠ ಸಾಂದ್ರತೆಯ ಹಾಡುಗಾರರಿದ್ದಾರೆ. ಸಿದ್ಧ ನಡೆಯಿಂದ ಪಲಾಯನ ಮಾಡದೆ ಈ ಎಲ್ಲ ಸಂಪತ್ತನ್ನು ಒಂದು ದಿವ್ಯ ಕನಸಿನಂತೆ ಬಳಸಿದರೆ ಸೃಜನ ಅನ್ವಯದ ನಾದ ತರಂಗಗಳು ಬಗೆಬಗೆಯ ನೃತ್ಯ ರೂಪಕಗಳನ್ನು ಸೃಷ್ಟಿಸಲು ಸಾಧ್ಯ. ಭಾವನೆಯ ಬಲಿಯಾಗದೆ ಸಂಗೀತದ ಅಸ್ತಿತ್ವ ರಂಗದಲ್ಲಿ ಮರುಹುಟ್ಟು ಪಡೆದರೆ ಮಾತ್ರ ಇದು ಸಾಧ್ಯ. ಕವಿ ಪು.ತಿ.ನ ಅವರ 'ಹರಿಣಾಭಿಸರಣ'ದ ಪ್ರಾರಂಭದ ಸಾಲನ್ನೆ ಗಮನಿಸಿ – 'ತೆರೆಮಕ್ಕಳೆಳೆದಾಟಕ್ಕೀಡಾಗಿ ಲಂಬಿಸುವ ಗೋದಾವರಿ' ಎಂದೆಲ್ಲ ಸೀತೆಯ ಸಮ್ಮುಖದ ನದಿಯ ವರ್ಣನೆ, ತೆರೆ ಮಕ್ಕಳು, ಲಂಬಿಸುವುದು ಮತ್ತು ಮುಂದೆ ಅಪಹರಣಕ್ಕೆ ಒಳಗಾಗುವ ಹೆಣ್ಣಿನ (ನದಿಗೆ ಸಮಾನಳಾದ) ದೀರ್ಘ ಬವಣೆ ಇತ್ಯಾದಿ ಧ್ವನಿಯನ್ನು ರಂಗಚಿತ್ರಣವಾಗಿಸಲು ಸಿದ್ಧನಡೆಗಿಂತ ಭಿನ್ನವಾದ ಸ್ವರಮೇಳ ಮತ್ತು ವಾದನ ಸಾಂಗತ್ಯ ಬೇಕೇ ಬೇಕು. ಹಿಮ್ಮೇಳದ ಸೃಜನತೆ ಅಡಗಿರುವುದೇ ಇಂಥ ಸೂಕ್ಷ್ಮಗಳಲ್ಲಿ. ನೃತ್ಯ ರೂಪಕದ ಜೀವವಿರುವುದೇ ಇಂಥ ಸೂಕ್ಷ್ಮಗಳ ಸತ್ತ್ವದಲ್ಲಿ. ಹೀಗೆ ಕನಸು ಕಾಣುವ ನಿರ್ದೇಶಕ, ಹಿಮ್ಮೇಳ ಮತ್ತು ರಂಗದ ಮೇಲಿರುವ ಕಲಾವಿದರ ಮನೋಭಾವಗಳನ್ನು ಒಂದೆ ದೇಹದಂತೆ ಆ ಜೀವವನ್ನು ಆವಾಹಿಸಿಕೊಳ್ಳುವುದರಲ್ಲಿ.



# ಯಕ್ಷಗಾನ ಸಂಸ್ಕೃತ ಪ್ರಸಂಗಗಳು

**ಡಾ. ಡಿ. ಸದಾಶಿವ ಭಟ್ಟ**
ಲೇಖಕ, ಕಲಾವಿದ, ಸಂಘಟಕ
ಪಳ್ಳು, ನಿಡ್ಪಳ್ಳಿ, ಪುತ್ತೂರು ತಾಲೂಕು

ಕಲೆಗೆ ಭಾಷಾಮಾಧ್ಯಮ ತೊಡಕಾಗಬಾರದು, ಯಾವ ಭಾಷೆಯಲ್ಲಿ ಬೇಕಾದರೂ ಪ್ರಯೋಗಿಸಬಹುದು ಎಂದು ಕೆಲವು ವಿದ್ವಾಂಸರ ಅಭಿಮತ. ಕಲೆ ಯಾವ ಭಾಷೆಯಲ್ಲಿ ಹುಟ್ಟಿ ಬೆಳೆದು ಬಂದಿದೆಯೋ ಅದೇ ಭಾಷೆ ಅದಕ್ಕೆ ಯುಕ್ತ. ಅನ್ಯ ಭಾಷೆಗಳಲ್ಲ. ಯಕ್ಷಗಾನ ಭಾಷೆ ಕನ್ನಡ ಎಂದು ಇನ್ನು ಕೆಲವು ಪಂಡಿತರ ಅಭಿಪ್ರಾಯ. ಕೆಲವರಿಗೆ ಹೊಸತನ್ನು ನೋಡುವ ಕುತೂಹಲ. ಕೆಲವರಿಗೆ ಹಳತಿನಲ್ಲೇ ಆದರ. ಇನ್ನು ಕೆಲವರಿಗೆ ಹಳತು ಹೊಸತರ ಸಂಕರ ಮುದ ನೀಡುತ್ತದೆ. "ಲೋಕೋ ಭಿನ್ನ ರುಚಿಃ" ಒಬ್ಬರಿಗೆ ಪಥ್ಯವಾದುದು, ಮತ್ತೊಬ್ಬರಿಗೆ ಅಪಥ್ಯವಾಗಬಹುದು.

ಯಕ್ಷಗಾನವು ಒಂದು ಕಲೆ. ಇದರ ಭಾಷೆ ಶುದ್ಧ ಕನ್ನಡ. ಇದರಲ್ಲಿ ಅನುಮಾನವಿಲ್ಲ. ಕನ್ನಡದಷ್ಟು ಇತರ ಭಾಷೆಗಳು ಇದಕ್ಕೆ ಒಗ್ಗುವುದಿಲ್ಲವೆನ್ನುವುದೂ ಸತ್ಯ. ಆದರೆ ಪ್ರಯೋಗ ಮಾಡಬಾರದೆಂದು ಹೇಳುವುದು ಸರಿಯಲ್ಲ. ಇದನ್ನು ಬೇರೆ ಭಾಷೆಗಳಲ್ಲಿ ಪ್ರಯೋಗಿಸಿದಾಗ ಜನರಿಗೆ ಅಷ್ಟು ಹಿಡಿಸುವುದಿಲ್ಲ. ಕ್ರಮೇಣ ಜನ ಅದಕ್ಕೆ ಒಗ್ಗಿಕೊಳ್ಳುತ್ತಾರೆ. ಪ್ರಯೋಗ ಸಾಧುವಾದರೆ, ಫಲಪ್ರದವಾದರೆ ಉಳಿಯುತ್ತದೆ, ಇಲ್ಲದೇ ಹೋದರೆ ಬಿದ್ದು ಹೋಗುತ್ತದೆ. ಪ್ರಯೋಗವೇ ದೂಷ್ಯವೆನ್ನುವುದು ಆಭಾಸಕರ.

ಯಕ್ಷಗಾನವು ಇಂದು ಬೇರೆ ಬೇರೆ ಭಾಷೆಗಳಲ್ಲಿ ಪ್ರಯೋಗವಾಗಿರುವುದನ್ನು, ಆಗುತ್ತಿರುವುದನ್ನು ಕಾಣುತ್ತಿದ್ದೇವೆ. ಬಯಲಾಟವಾಗಲಿ, ತಾಳಮದ್ದಳೆಯಾಗಲಿ, ಇಲ್ಲಿ ಹಲವಾರು ಬದಲಾವಣೆಗಳಾಗಿವೆ. ಬದಲಾವಣೆಗಳು ಮೂಲನೆಲೆಯ ಆಧಾರದ ಮೇಲೆ ಆಗಬೇಕು. ಮೂಲಕಲೆಗೆ ಅಪಚಾರವಾಗ ಬಾರದು. ಕಲೆಯನ್ನು ಸೃಷ್ಟಿಸಿದವನು ಮನುಷ್ಯ. ಕಲೆ ಮನುಷ್ಯನನ್ನು ಸೃಷ್ಟಿಸಿಲ್ಲ. ಹಾಗಾಗಿ

ಮಾನವನ ಅಭಿರುಚಿಗನುಗುಣವಾಗಿ ಕಲೆ ಅಲ್ಪಸ್ವಲ್ಪ ವ್ಯತ್ಯಾಸವಾದರೆ ತಪ್ಪೇನು ಎನ್ನುವ ವಾದವೂ ಇದೆ.

ಇಂದು ಯಕ್ಷಗಾನ, ತುಳು, ಮಲೆಯಾಳ, ಸಂಸ್ಕೃತ, ಹಿಂದಿ, ಇಂಗ್ಲಿಷ್ ಮುಂತಾದ ಭಾಷೆಗಳಲ್ಲಿ ಪ್ರಯೋಗವಾಗಿದೆ. ಇದು ಎಷ್ಟು ಸಾರ್ಥಕವಾಗಿದೆ? ಯಾಕೆ ಪ್ರಯೋಗವಾಗಿದೆ? ಏನು ಪ್ರಯೋಜನ ಸಿಕ್ಕಿದೆ? ಯಾಕೆ ಬೇಕಿದು? ಕೇವಲ 'ಅಹಂ' ಪ್ರದರ್ಶನಕ್ಕೆ ಎಂದು ಕೆಲವರ ಅನಿಸಿಕೆ, ಅದರೆಡೆಯಲ್ಲಿ ಮೊದಲು ಪ್ರಯೋಗ ಮಾಡಿದ್ದು ಯಾರು? ಇದೊಂದು ಚರ್ಚೆ. ತಮ್ಮ ಬೆನ್ನನ್ನು ತಾವೇ ತಟ್ಟಿಕೊಳ್ಳುವವರು ಕೆಲವರು.

ಮುಂದಿರುವುದು ಸಂಸ್ಕೃತ ಯಕ್ಷಗಾನದ ಬಗ್ಗೆ ಮಾತ್ರ. ನಮ್ಮಲ್ಲಿ ಸಂಸ್ಕೃತಭಾಷಾ ವಿದ್ವಾಂಸರ ಸಂಖ್ಯೆ ತೀರಾ ಕಡಿಮೆ. ಶಾಲಾ ಕಾಲೇಜುಗಳಲ್ಲಿ ಐಚ್ಛಿಕವಾಗಿ ಅಲ್ಪಸ್ವಲ್ಪ ಕಲಿತರಾಯಿತು. ಉನ್ನತ ಪದವಿ ಪಡೆಯುವುದರಲ್ಲಿ ಆಸಕ್ತಿ ಬಹಳ ಕಡಿಮೆ. ಹಾಗಾಗಿ ಈ ಸಂಸ್ಕೃತ ಯಕ್ಷಗಾನ ಪ್ರಯೋಗಕ್ಕಾಗಿ ಪ್ರಯೋಗ ಅಷ್ಟೆ. ಯಕ್ಷಗಾನದ ಶ್ರೋತೃಗಳು, ಪ್ರೇಕ್ಷಕರು ಜನ ಸಾಮಾನ್ಯರು. ಹಿಮ್ಮೇಳ ಮುಮ್ಮೇಳಗಳಲ್ಲಿಯೂ ಸಂಸ್ಕೃತ ವಿದ್ವಾಂಸರು ವಿರಳ. ಹೆಚ್ಚು ಕಡಿಮೆ ಆರು ಜನ ವಿದ್ವಾಂಸರು ಇಪ್ಪತ್ತನಾಲ್ಕು ಸಂಸ್ಕೃತ ಯಕ್ಷಗಾನ ಪ್ರಸಂಗಗಳನ್ನು ಬರೆದಂತೆ ಕಂಡು ಬರುತ್ತದೆ. ಎಲ್ಲವೂ ಕಾಲಮಿತಿಯವು. ಇಪ್ಪತ್ತೋ ಮೂವತ್ತೋ ಪಾತ್ರಗಳಿದ್ದು, ಇನ್ನೂರೋ ಇನ್ನೂರೈವತ್ತೋ ಪದ್ಯಗಳಿದ್ದ ಪೂರ್ಣ ಪ್ರಮಾಣದ, "ಶೀವಲೀಲಾ" ಎನ್ನುವ ಪ್ರಸಂಗವೊಂದು ಮಾತ್ರ ಕಂಡುಬರುತ್ತದೆ. (ಈ ಲೇಖಕನದ್ದು)

ಸಂಸ್ಕೃತ ಯಕ್ಷಗಾನವೆಂದಾಗ ಇಲ್ಲಿ ಭಾಷಾಶುದ್ಧಿಗೆ ಹೆಚ್ಚು ಒತ್ತುಕೊಡಬೇಕಾಗುತ್ತದೆ. ಅನ್ಯ ಭಾಷೆಗಳಲ್ಲಿ ಬೇಡ ಎಂದು ಇದರ ಅರ್ಥ ಅಲ್ಲ. ಯಕ್ಷಗಾನವೆಂದೊಡನೆ ಅಲ್ಲಿ ಭಾಷಾ ಶುದ್ಧಿಗೇ ಅಗ್ರಸ್ಥಾನ. ಹಿಂದೊಮ್ಮೆ ನೀರ್ಚಾಲಿನ ಮಹಾಜನ ಸಂಸ್ಕೃತ ಕಾಲೇಜಿನಲ್ಲಿ ಪ್ರಸಿದ್ಧ ಅರ್ಥಧಾರಿಯೊಬ್ಬರು ರಾಮನ ಅರ್ಥ ಹೇಳುತ್ತಿದ್ದರು. ಬಾಯಿ ತಪ್ಪಿನಿಂದ 'ವಿಪಿನದಿಂದ ವಿಪಿನಕ್ಕೆ' ಎನ್ನುವ ಬದಲು 'ವಿಟಪಿಯಿಂದ ವಿಟಪಿಗೆ' ಎಂದು ಹೇಳಿಬಿಟ್ಟರು. ಒಡನೆಯೇ ಶ್ರೋತೃಗಳು ಹೋ, ಹೋ ಎಂದು ಕೈತಟ್ಟಿ, ಮಂಗ, ಮಂಗ ಎಂದು ನಗಾಡಿಯೇ ಬಿಟ್ಟರು. ಮುಂದೆ ಮಹನೀಯರು, ಎಲ್ಲಿ ಅರ್ಥ ಹೇಳಿದರೂ ನೀರ್ಚಾಲಿನಲ್ಲಿ ಹೇಳುವುದಿಲ್ಲವೆಂದು ಪ್ರತಿಜ್ಞೆಯನ್ನೂ ಮಾಡಿದರು. ಹಾಗೆಯೇ ಸುಪ್ರಸಿದ್ಧರೊಬ್ಬರು ಕೌರವನ ಅರ್ಥ ಹೇಳುವಾಗ, ಯುಧಿಷ್ಠಿರನ ರಥ ಭೂಮಿಯಿಂದ ನಾಲ್ಕು ಇಂಚು ಮೇಲೆ ಹೋಗುತ್ತಿತ್ತು ಎಂದರು. ಅಂಗುಲದ ಬದಲಿಗೆ 'ಇಂಚ್' ಶಬ್ದ ಪ್ರಯೋಗ ಮಾಡಿದ್ದರು. ಈ ಶಬ್ದ ಹೊರಬಿದ್ದದ್ದೇ ತಡ, ಕಾಯುತ್ತಾ ಇದ್ದ ಭೀಷ್ಮನ ಅರ್ಥಧಾರಿ, ಕೂಡಲೇ "ನಿನ್ನಲ್ಲಿ ಮಾತಾಡಲು ಹೊಸ ನಿಘಂಟು ನಿರ್ಮಾಣ ಮಾಡಬೇಕಷ್ಟೆ" ಎಂದರು. ಜನ ಕೈ ತಟ್ಟಿ ನಗಾಡಿದರು. ಒಂದೇ ಒಂದು ಅಪಶಬ್ದ ಬಂದರೂ ಶ್ರೋತೃಗಳು ಗಮನಿಸುತ್ತಿದ್ದರು. "ಉಪ್ಪು ಸೇರದ ಪದಾರ್ಥವಿಲ್ಲ, ತಪ್ಪು ಬಾರದ ನಾಲಗೆಯಿಲ್ಲ" ಎನ್ನುವ ಗಾದೆಯಿದ್ದರೂ ಇದು ಲೆಕ್ಕಕ್ಕಿಲ್ಲ. ಭಾಷಾಶುದ್ಧಿ ಇಂದಿಗೂ ಯಕ್ಷಗಾನದಲ್ಲಿ ಉಳಿದು ಕೊಂಡಿರುವುದು ಇದರ ವೈಶಿಷ್ಟ್ಯ. ಹೀಗಿರುವಾಗ ಸಂಸ್ಕೃತದ ಪದ್ಯ ರಚನೆಯಲ್ಲಿ, ಮಾತುಗಾರಿಕೆಯಲ್ಲಿ ಇದು ಬೇಕೇ ಬೇಕು.

ಛಂದಸ್ಸಿನ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳಿವೆ. ಯಕ್ಷಗಾನ ಹಾಡುಗಬ್ಬವಾದ

ಕಾರಣ, ಛಂದೋಬದ್ಧತೆ ಬೇಕೆಂದೇನೂ ಇಲ್ಲ. ಅರ್ಥವತ್ತಾಗಿ, ತಾಳಲಯಬದ್ಧವಾಗಿ ಹಾಡಲು ಬಂದರೆ ಸಾಕು ಎನ್ನುತ್ತಾರೆ ಕೆಲವರು. ಇಂದು ಹೆಚ್ಚಾಗಿ "ಹಿಂದಿ ಯಕ್ಷಗಾನಗಳು ಬೇರೆ ಬೇರೆ ಪ್ರಾಂತಗಳಲ್ಲಿ ಪ್ರದರ್ಶನಗೊಳ್ಳುತ್ತಿರುವುದರಿಂದ, ಹಿಂದಿಯದ್ದೇ ಒಂದು ಉದಾಹರಣೆ ಕೊಡುತ್ತಿದ್ದೇನೆ. ಕೃಷ್ಣ ಸಂಧಾನದಲ್ಲಿ ಬರುವ "ಕೋಮಲಾಂಗಿ ಕೇಳೇ। ಮದಗಜ। ಗಾಮಿನಿ ಗಾಮಿನಿ ಪಾಂಚಲೆ । ಕಾಮುಕ ಕುರು ಭೂಕಾಂತನ ನಿಲಯಕೆ । ಸ್ವಾಮಿಯ ಧರ್ಮಜಸಂಧಿಗೆ ಕಳುಹುವ ॥1॥ ಪದ್ಯವು ಹಿರಿಯ ಹಿಂದಿ ವಿದ್ವಾಂಸರೊಬ್ಬರು ಹಿಂದಿಯಲ್ಲಿ ಬರೆದ ಕೃಷ್ಣ ಸಂಧಾನದ ಭೀಮ ದ್ರೌಪದಿ ಸಂವಾದದಲ್ಲಿ ಹೀಗಿದೆ – "ಕೋಮಲತನುವಾಲೀ। ಸುನಲೇ। ಕಾಮಿನಿ ಪಾಂಚಾಲೀ॥ ಕಾಮುಕ ಕುರುಭೂ ಕಾಂತಕೆ ನಿಲಯಕೊ । ಸ್ವಾಮಿ ಕೊ ಧರ್ಮಜ ಸಂಧಿಕೊಭೇಜೆಗ ॥ ಇದು ಸುರುಟಿ ಏಕತಾಳದಲ್ಲಿದೆ. ಅರ್ಥವತ್ತಾಗಿ ತಾಳಲಯ ಬದ್ಧವಾಗಿ ಹಾಡುವುದಕ್ಕೆ ಯಾವುದೇ ಅಡೆ ತಡೆಯಿಲ್ಲ. ಆಗ್ರಾ ಮೊದಲಾದ ಕಡೆಗಳಲ್ಲಿ ಇದರ ಪ್ರದರ್ಶನಗಳು ನಡೆದಿದ್ದು, ಜನರೂ ಮೆಚ್ಚಿ ಕೊಂಡಿದ್ದರು. ಆದರೆ ಛಂದೋನಿಯಮದ ಪ್ರಕಾರ ಇದರ ಮೊದಲ ಪಾದದಲ್ಲಿ "4+4+ಗುರು । 4 । 4+4+ಗು॥" ಎರಡನೆಯ ಪಾದದಲ್ಲಿ "4+4। 4+4। 4+4। 4+4।" ನಾಲ್ಕು ಮಾತ್ರೆಯ ಎಂಟು ಗಣಗಳಿರಬೇಕು. ಕನ್ನಡದ – "ಕೋಮಲಾಂಗಿ ಕೇಳೇ" ಇಲ್ಲಿ ಗಣವಿನ್ಯಾಸ ಸರಿಯಿಲ್ಲ. ಇದನ್ನು ಹಿಂದಿಯಲ್ಲಿ "ಕೋಮಲತನುವಾಲೀ" ಎಂದು ಸರಿ ಮಾಡಿದ್ದಾರೆ. ಎರಡನೇ ಪಾದದಲ್ಲಿ ಕಾಂತಕೇ।ನಿಲಯಕೋ। ಸ್ವಾಮಿಕೋ। ಭೇಜೇಗಾ। ಹಿಂದೀ ಪ್ರಯೋಗ ಹೀಗಿರಬೇಕು. ಆಗ ನಾಲ್ಕು ಮಾತ್ರಾಗಣದ ಬದಲಿಗೆ, ಐದು, ಆರು ಮಾತ್ರೆಯ ಗಣಗಳು ಬಂದು ಛಂದೋಭಂಗವಾಗುತ್ತದೆ. ಛಂದಸ್ಸನ್ನು ಸರಿ ಮಾಡಿದಾಗ ಭಾಷಾಭಂಗವಾಗುತ್ತದೆ. ಭಾಷಾಭಂಗವಾದರೂ, ಛಂದೋಭಂಗವಾದರೂ, ಈಗಿನ ಕನ್ನಡದ ನವ್ಯ ಕವಿತೆಗಳಂತೆ ಹಾಡುವುದಕ್ಕೆ ಯಾವುದೇ ಬಾಧಕವಿಲ್ಲ. ಆದರೆ "ಛಂದೋಭಂಗಂ ಮಹಾಪಾಪಂ" ಎಂಬ ಮಾತಿದೆ. ಯಾವುದೇ ಭಾಷೆಯಿರಲಿ, ಶಾಸ್ತ್ರ, ನಿಯಮ ಇರುವುದು ಪಾಲಿಸುವುದಕ್ಕೆ. ಭಂಗಿಸುವುದಕ್ಕಲ್ಲ. ಛಂದೋಬದ್ಧತೆ ಯಕ್ಷಗಾನ ಪ್ರಸಂಗಗಳ ಅವಿಭಾಜ್ಯ ಅಂಗ. ಸಂಸ್ಕೃತದ ಬಗ್ಗೆ ಹೇಳಬೇಕಾದ ಅಗತ್ಯವೇ ಇಲ್ಲ. ಯಾಕೆಂದರೆ ಅದು "ಸಂಸ್ಕೃತ".

"ಯಕ್ಷಗಾನ" ಎನ್ನುವುದು ಸಂಸ್ಕೃತ ಶಬ್ದ. ಯಕ್ಷಗಾನದ ಮೂಲ ಭಾಷೆ ಸಂಸ್ಕೃತವೇ? ಪ್ರತ್ಯಕ್ಷಜ್ಞಾನ, ಪರೋಕ್ಷಜ್ಞಾನ ಎರಡೂ ಮುಖ್ಯವೇ. ಜ್ಯೋತಿಷ್ಯದಲ್ಲಿ "ಊಹಾಪೋಹ ಪಟುಃ" ಎನ್ನುವ ಪದವಿದೆ. ಜ್ಯೋತಿಷ್ಯನು ಊಹಾಪೋಹ ಪಟುವಾಗಿರಬೇಕು. ಇಂತಹ ಸಾಮರ್ಥ್ಯವುಳ್ಳವನೇ ಶ್ರೇಷ್ಠ ಜೋಯಿಸನಾಗುತ್ತಾನೆ. ಆದರೆ ಈ ಊಹೆ ಶಾಸ್ತ್ರಾಧಾರದ ಮೇಲೆ ನಡೆಯುತ್ತದೆ. ಇದು ಸರಿಯಾಗಲೂಬಹುದು. ತಪ್ಪಾಗಲೂಬಹುದು. ನಿಶ್ಚಿತವಾಗಿ ಹೇಳುವುದಕ್ಕಾಗುವುದಿಲ್ಲ.

ಯಕ್ಷಗಾನವೆಂದೊಡನೆ ಅಲ್ಲಿ ಪ್ರಾಧಾನ್ಯವಿರುವುದೇ ವೀರರೌದ್ರರಸಗಳಿಗೆ. ಹಿಂದೆ ರಶ್ಯಾದ ಪ್ರಧಾನಿ 'ಬಲ್ಗಾನಿನ್' ಎನ್ನುವವರು, ಈ ಯಕ್ಷಗಾನವನ್ನು ಮೆಚ್ಚಿಕೊಂಡದ್ದೂ ವೀರ, ರೌದ್ರ, ರಸಪ್ರದರ್ಶನಕ್ಕಾಗಿಯೇ. ಕೆಲವು ವರ್ಷಗಳ ಹಿಂದೆ ಕಾಸರಗೋಡಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಿತ್ತು. ಅದರಲ್ಲಿ ಮೈಸೂರು, ಬೆಂಗಳೂರಿನ ನೂರಾರು ವಿದ್ವಾಂಸರು ಭಾಗವಹಿಸಿದ್ದರು. ಇಲ್ಲಿ ಯಕ್ಷಗಾನ ಬಯಲಾಟದ ಪ್ರದರ್ಶನವಿತ್ತು. ಮೊದಲು

– ಪಾರಿಜಾತದ ಶೃಂಗಾರ ರಸಭರಿತ "ಶ್ರೀಕೃಷ್ಣ ಸತ್ಯಭಾಮಾ ಸಂವಾದ" ನಡೆಯುತ್ತಿತ್ತು. ಕೃಷ್ಣ–ಸತ್ಯಭಾಮ ಪಾತ್ರಧಾರಿಗಳು ಇಬ್ಬರೂ ಅತಿ ಪ್ರಸಿದ್ಧರೇ. ಆದರೆ ಇದನ್ನು ನೋಡಿದ ಮೈಸೂರು, ಬೆಂಗಳೂರಿನವರು ಬೊಬ್ಬೆ ಹೊಡೆಯಲು ಆರಂಭಿಸಿದರು. "ಇದು ನಮಗೆ ಬೇಡ, ಇಂಥದ್ದೆಲ್ಲ ನಮ್ಮಲ್ಲಿಯೂ ಇದೆ. ನಮಗೆ ಶುದ್ಧ ಯಕ್ಷಗಾನ ನೋಡಬೇಕು" ಎಂದು ಹೇಳತೊಡಗಿದರು! ಒಡನೆಯೇ ಅದನ್ನು ನಿಲ್ಲಿಸಿ "ಕರ್ಣಾರ್ಜುನ ಕಾಳಗ" ಯಕ್ಷಗಾನ ಆರಂಭವಾಯಿತು. ಮಾಣಂಗಾಯಿ ಕೃಷ್ಣ ಭಟ್ಟರು ಕರ್ಣನ ಪಾತ್ರವನ್ನು ವಹಿಸಿದ್ದರು. ಕರ್ಣನ ಪ್ರವೇಶವೇ ಪ್ರೇಕ್ಷಕರಲ್ಲಿ ರೋಮಾಂಚನವನ್ನುಂಟು ಮಾಡಿತು. ರಂಗಸ್ಥಳದ ನಾಲ್ಕೂ ಕಡೆ ಹಾರಿ, ಕುಣಿದು, ಇಡೀ ರಂಗಸ್ಥಳವನ್ನೇ ತುಂಬುವ ಜಾಣ್ಮೆ, ರಂಗಸ್ಥಳದ ಮಧ್ಯದಿಂದ ಹಿಮ್ಮೊಗವಾಗಿ ನೆಗೆದು ರಥದಲ್ಲಿ ಕುಳಿತುಕೊಳ್ಳುವ ಚಾತುರ್ಯ, ಅವರಿಗೇ ಮೀಸಲು. ಸಭಾಸದರು ನೋಡಿ ದಿಗ್ಭ್ರಾಂತರಾದರು. ಎಲ್ಲರೂ ಮನಸಾರೆ ಮೆಚ್ಚಿಕೊಂಡರು. ಪ್ರದರ್ಶನ ಮುಗಿದೊಡನೆ ಕೆಲವರು ಭಾಷಣವನ್ನೂ ಮಾಡಿದರು. ಅವರು ಮೆಚ್ಚಿಕೊಂಡದ್ದು ಚೆಂಡೆವಾದನ, ವೀರರೌದ್ರರಸ ಪ್ರದರ್ಶನ.

ಪ್ರಹ್ಲಾದ ಚರಿತ್ರೆಯಲ್ಲಿ ಶ್ರೀಮನ್ನಾರಾಯಣನು ಉಗ್ರ ನರಸಿಂಹನಾಗಿ ಹಿರಣ್ಯಕಶಿಪುವನ್ನು ಸಾಯಂಸಂಧ್ಯಾಕಾಲದಲ್ಲಿ ಕೊಲ್ಲುತ್ತಾನೆ. ಈ ಉಗ್ರ ನರಸಿಂಹ ನಲ್ಲಿರುವುದು 'ವೀರರೌದ್ರ'ಗಳು. ಅತ್ಯುಗ್ರನಾದ ನರಸಿಂಹನನ್ನು ಶಾಂತಗೊಳಿಸಲು, ಇಂದ್ರ, ಬ್ರಹ್ಮ, ದೇವಲೋಕದ ಇತರ ಪಂಗಡದವರು ಬಂದು ಸ್ತೋತ್ರ ಮಾಡಿದರು, ಕುಣಿದರು. ಯಾರೂ ಏನು ಮಾಡಿದರೂ, ಮಧ್ಯರಾತ್ರಿ ಕಳೆದರೂ ಶಾಂತನಾಗಲಿಲ್ಲ. ಆಮೇಲೆ ಯಕ್ಷರು ಬಂದು, ಕುಣಿದು ಗಾನ ಮಾಡಿದರಂತೆ. ಈ 'ಯಕ್ಷಗಾನ' ದಿಂದ ತುಷ್ಟಿಗೊಂಡು ಶಾಂತನಾದನಂತೆ. ಯಕ್ಷಗಾನ ವೀರ ರೌದ್ರರಸ ಭರಿತವಾಗಲು ಇದೇ ಕಾರಣ. ಇದರ ಛಂದಸ್ಸು ಅನುಷ್ಟುಪ್. ಯಕ್ಷಗಾನ ಬಯಲಾಟ ಮಧ್ಯರಾತ್ರಿಯ ಮೇಲೆಯೇ 'ರೈಸು'ವುದು ಎನ್ನುವ ಮಾತು ಈಗಲೂ ರೂಢಿಯಲ್ಲಿದೆ. ಇದಕ್ಕೆ ಕಾರಣ ಮೊತ್ತ ಮೊದಲು ಯಕ್ಷಗಾನ ನಡೆದದ್ದು ಮಧ್ಯರಾತ್ರಿಯ ಮೇಲೆಯೇ.

ಕೆಲವು ವರ್ಷಗಳ ಹಿಂದೆ ಎಡನೀರು ಮಠಾಧೀಶರಾದ ಶ್ರೀ ಶ್ರೀ ಕೇಶವಾನಂದ ಸ್ವಾಮೀಜಿಯವರು ಸಂಸ್ಕೃತದ ಅನುಷ್ಟುಪ್ ಶ್ಲೋಕಗಳನ್ನೇ ಯಕ್ಷಗಾನೀಯ ಶೈಲಿಯಲ್ಲಿಯೇ ರಾಗ ತಾಳ ಲಯಬದ್ಧವಾಗಿ ಹಾಡಿ ಪ್ರಸ್ತುತ ಪಡಿಸಿದ, ಸಂಸ್ಕೃತ ಯಕ್ಷಗಾನದ ತಾಳಮದ್ದಳೆಗಳು, ಆಕಾಶವಾಣಿಯಲ್ಲಿ ಪ್ರಸಾರಗೊಂಡಿದ್ದು, ಉತ್ತಮ ಪ್ರತಿಕ್ರಿಯೆಯೊಂದಿಗೆ ಜನಮೆಚ್ಚುಗೆಯನ್ನು ಪಡೆದಿವೆ. ಈ ರೀತಿ ಹಾಡಬಲ್ಲ ಶಕ್ತಿ ಮಾತ್ರಶ್ರೀಗಳಿಗೇ ಮೀಸಲು ಎನ್ನುವುದರಲ್ಲಿ ಅನುಮಾನವಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರ ಇಷ್ಟು– ಯಕ್ಷಗಾನದ ಮೂಲ ಸಂಸ್ಕೃತವೇ ಯಾಕೆ ಆಗಿರಬಾರದು? ಎನ್ನುವುದು. ಸಂಶೋಧನಾಧ್ಯಯನಕ್ಕೆ ಇದು ವಸ್ತುವೆನ್ನುವುದು ಸತ್ಯ.

ಕೆಲವು ಭೂತಕೋಲಗಳಲ್ಲಿ, ಭೂತ ಕಟ್ಟುವವರು, ಸಂಸ್ಕೃತದ 'ಸಪ್ತಶತಿಯನ್ನು, ನಾರಾಯಣೀಯ'ವನ್ನು ಹಾಡುತ್ತಾರೆ. ಹಾಗೆಯೇ ಸೇವಾ ರೂಪದ ಬಯಲಾಟಗಳನ್ನು ಆಡುವಾಗ ಸಂಸ್ಕೃತದ ಯಕ್ಷಗಾನ ಹಾಡುಗಳನ್ನೇ ಹಾಡಿದರೆ ಪಾವಿತ್ರ್ಯ ಹೆಚ್ಚಾಗಬಹುದು. ಫಲಪ್ರದವೂ ಆಗಬಹುದು. ಹರಕೆಯ ಆಟಗಳಲ್ಲಿ ಭಕ್ತಿಗೇ ಪ್ರಾಧಾನ್ಯ. ಭಾಗವತರು

ಮನಸ್ಸು ಮಾಡಿ ಶ್ರಮ ವಹಿಸಬೇಕು. ಪ್ರಾಯೋಗಿಕವಾಗಿ ಕೇವಲ ಅರ್ಧ ಘಂಟೆ ಹಾಡಿದರೂ ಸಾಕು.

ಪ್ರಯೋಗ ದೃಷ್ಟಿಯಿಂದ ಸಂಸ್ಕೃತ ಪ್ರಸಂಗಗಳ ಬಗ್ಗೆ ವಿಚಾರ ಮಾಡಬೇಕಾದುದು ಬಹಳ ಮುಖ್ಯ. 1993ರಲ್ಲಿ "ಕಂಸವಧಃ ಮತ್ತು ಶಿವಚಂದ್ರಂ" ಎರಡು ಧ್ವನಿಸುರುಳಿಗಳು (ಲೇಖಕನದ್ದು) ಪ್ರಕಟಗೊಂಡುವು. ಸಂಸ್ಕೃತ ಯಕ್ಷಗಾನ ಮಾಡುವವರಿಗೆ ಇವು ಮಾದರಿಯಾಗಬಹುದು. ಹಾಗೆಯೇ ಇದೇ ಲೇಖಕನ 'ಸತ್ಯಸೇನ ವಧಃ', (1982) ಊರ್ಮಿಲಾ (1987) ಎನ್ನುವ ಎರಡು ಸಾರ್ಥಸಂಸ್ಕೃತ ಯಕ್ಷಗಾನ ಪ್ರಸಂಗಗಳು ಪ್ರಕಟವಾಗಿವೆ. ಸತ್ಯಸೇನ ವಧದಲ್ಲಿ ಮೂರು ಪಾತ್ರಗಳಿದ್ದು ಪ್ರಯೋಗಕಾಲ ಅರ್ಧ ಗಂಟೆ. ಊರ್ಮಿಲಾದಲ್ಲಿ ಐದು ಪಾತ್ರಗಳಿದ್ದು ಪ್ರಯೋಗ ಕಾಲ ಮುಕ್ಕಾಲು ಗಂಟೆ ಮಾತ್ರ. ಇಂತಹ ಯಕ್ಷಗಾನಗಳೇ ಇಂದು ಹೆಚ್ಚು ಉಪಯುಕ್ತವಾಗಿವೆ. ಸಂಸ್ಕೃತಾಭ್ಯಾಸಿಗಳಾದ ಮಕ್ಕಳಲ್ಲಿ ಯಕ್ಷಗಾನಾಭಿರುಚಿಯನ್ನು ಹೆಚ್ಚಿಸಲು ಇವು ಸಹಕಾರಿಗಳಾಗಿವೆ. ಅರ್ಧಘಂಟೆ, ಮುಕ್ಕಾಲು ಘಂಟೆಯ ಯಕ್ಷಗಾನಗಳಿಗೆ, ಕೇಳುಗರೂ, ಮಾಡುವವರೂ ಮಾಡಿಸುವವರೂ ಸಿಗುತ್ತಾರೆ. ಸತ್ಯಸೇನ ವಧ ಮತ್ತು ಊರ್ಮಿಲಾ ಸಂಸ್ಕೃತ ಯಕ್ಷಗಾನಗಳು ಬೇರೆ ಬೇರೆ ಕಡೆಗಳಲ್ಲಿ ನಡೆದ ಪ್ರದರ್ಶನಗಳ ಮೂಲಕ ಜನಮೆಚ್ಚಿಕೆ ಪಡೆದಿರುವುದೇ ಇದಕ್ಕೆ ಸಾಕ್ಷಿ. 'ಸತ್ಯಸೇನ ವಧಃ' ಮಕ್ಕಳ ಯಕ್ಷಗಾನ ತಾಳಮದ್ದಳೆ ಧಾರವಾಡದ ಆಕಾಶವಾಣಿಯಲ್ಲಿ ಬಿತ್ತರಗೊಂಡಿದೆ. ಹಿರಿಯ ಭಾಗವತರಾದ ಶ್ರೀ ವಿದ್ವಾನ್ ಗಣಪತಿ ಭಟ್ಟರು ಸೊಗಸಾಗಿ ಹಾಡಿದ್ದಾರೆ.

ಸಂಸ್ಕೃತ ಯಕ್ಷಗಾನ ಪ್ರಸಂಗ ಸಾಹಿತ್ಯ ರಚನೆಯಿಂದ ಯಕ್ಷಗಾನ ಸಾಹಿತ್ಯ ಭಂಡಾರ ಬೆಳೆಯುವುದರಲ್ಲಿ ಸಂಶಯವಿಲ್ಲ. ಆದರೆ ಮೂಲ ಆಶಯಗಳಿಗೆ ಚ್ಯುತಿ ಬಾರದ ಹಾಗೆ ಎಚ್ಚರವಿರಬೇಕಾದುದು ಮುಖ್ಯ.



# ಯಕ್ಷಗಾನದ ಜಾಗತೀಕರಣ

**ಡಾ. ಬಿ. ಪ್ರಭಾಕರ ಶಿಶಿಲ**
**ವಿಶ್ರಾಂತ ಪ್ರಾಚಾರ್ಯ, ಲೇಖಕ**
'ಕಾವ್ಯ'
ಕಾಂತಮಂಗಲ, ಅಂಚೆ : ಅಜ್ಜಾವರ
ಸುಳ್ಯ, ದಕ್ಷಿಣಕನ್ನಡ – 574 246

ಯಕ್ಷಗಾನವು ಜಾಗತೀಕರಣದಿಂದ ತೊಂದರೆಗೆ ಒಳಗಾಗಿದೆ ಎನ್ನುವ ಮಾತು ಕೆಲವು ವರ್ಷಗಳಿಂದ ಕೇಳಿಬರುತ್ತಿದೆ. ಯಕ್ಷಗಾನವನ್ನು ಜಾಗತೀಕರಣಗೊಳಿಸುವುದು ಈ ಸಮಸ್ಯೆಗೆ ಪರಿಹಾರ. ಯಕ್ಷಗಾನದ ಜಾಗತೀಕರಣವೆಂದರೆ ಯಕ್ಷಗಾನವನ್ನು ಜಗತ್ತಿನಾದ್ಯಂತ ಪಸರಿಸುವುದು ಎಂದರ್ಥ. ಇದೇನು ಸುಲಭದ ಮಾತಲ್ಲ. ಆದರೆ ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇರುತ್ತದೆ.

ಯಕ್ಷಗಾನದ ಜಾಗತೀಕರಣಕ್ಕೆ ಅದನ್ನೊಂದು ಪ್ರಾಡಕ್ಟ್ ಆಗಿ ಪರಿವರ್ತಿಸಬೇಕು. ಆದರೆ ಸಾಂಪ್ರದಾಯಿಕ ಕಲೆಯೊಂದನ್ನು ಪ್ರಾಡಕ್ಟಾಗಿ ಪರಿವರ್ತಿಸುವುದೇ?

**ಸಜೀವ ಪ್ರದರ್ಶನ**

ಯಾಕಾಗಬಾರದು? ಮಹರ್ಷಿ ಮಹೇಶ ಯೋಗಿಗಳ ಅತೀಂದ್ರಿಯ ಧ್ಯಾನ, ರವಿಶಂಕರರ ಸುದರ್ಶನ ಕ್ರಿಯಾ ಯೋಗ, ಬಾಬಾ ರಾಮದೇವರ ಯೋಗ ವಿಶ್ವ ಮಾರುಕಟ್ಟೆಯಲ್ಲಿ ಎಂದೋ ಪ್ರೊಡಕ್ಟುಗಳಾಗಿ ಹೋಗಿವೆ. ಅದಕ್ಕೂ ಮೊದಲೇ ಭಾರತದ ಯೋಗ, ಧ್ಯಾನ, ಪ್ರಾಣಾಯಾಮ, ರೇಖಿಗಳು ವಿಶ್ವ ಮಾರುಕಟ್ಟೆಯಲ್ಲಿ ಸ್ಥಾನ ಕಂಡುಕೊಂಡಿವೆ. ಅಂದ ಮೇಲೆ ಯಕ್ಷಗಾನ ಜಾಗತೀಕರಣಗೊಳ್ಳಲು ಏನು ಅಡ್ಡಿ? ಅದಕ್ಕೆ ಯಕ್ಷಗಾನವನ್ನು ಒಂದು ಪ್ರಾಡಕ್ಟಾಗಿ ಮಾಡಿಕೊಳ್ಳಬೇಕಾಗುತ್ತದೆ.

ಯಕ್ಷಗಾನವನ್ನು ಒಂದು ಪ್ರಾಡಕ್ಟಾಗಿ ಎರಡು ರೀತಿಗಳಲ್ಲಿ ಮಾಡಬಹುದು. ಮೊದಲನೆಯದು ಸಜೀವ ಪ್ರದರ್ಶನ (live

show) ಎರಡನೆಯದು ದಾಖಲೀಕೃತ ಪ್ರದರ್ಶನ (recorded show).

**ಸಜೀವ ಪ್ರದರ್ಶನ**

ತಿಟ್ಟು ಭೇದವಿಲ್ಲದೆ ಯಕ್ಷಗಾನದ ಅತ್ಯುತ್ತಮ ಕಲಾವಿದರನ್ನು ಆಯ್ದು ಎರಡು ಮೂರು ಗಂಟೆಗಳ ಕಥಾಪ್ರಸಂಗಗಳನ್ನು ರಂಗಕ್ಕೆ ತರಬೇಕು. ಅಂಥ ಪ್ರಸಂಗಗಳಲ್ಲಿ ನೃತ್ಯ ಮತ್ತು ಅಭಿನಯಕ್ಕೆ ಹೆಚ್ಚು ಮಹತ್ವವಿರಬೇಕು. ಕತೆಯ ಓಟಕ್ಕೆ ಬೇಕಾದಷ್ಟೇ ಮಾತು ಮತ್ತು ಕಿರು ಸಂಭಾಷಣೆಗಳಿರಬೇಕು. ಅಂತಹ ತಂಡಗಳು ಸಿದ್ಧಗೊಳ್ಳಬೇಕು. ಅಗತ್ಯ ಬಿದ್ದಾಗ, ಅಗತ್ಯ ಬಿದ್ದಲ್ಲಿ ಪ್ರದರ್ಶನ ನೀಡಲು ಆ ತಂಡಗಳಿಗೆ ಸಾಧ್ಯವಾಗಬೇಕು. ಅಂಥ ಪ್ರದರ್ಶನಗಳಿಗೆ ಮುನ್ನ, ಹಿಂದೆ ಕಥಾನುಸಾರ ಇದ್ದಂತೆ, ಕನ್ನಡ / ಇಂಗ್ಲಿಷ್ / ಹಿಂದಿಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಕಥಾಸಾರಾಂಶ ಹೇಳಬೇಕು. ಪ್ರದರ್ಶನದ ಬಳಿಕ ಕಲಾವಿದರೊಡನೆ ಪ್ರೇಕ್ಷಕರಿಗೆ ಮುಕ್ತ ಸಂವಾದಕ್ಕೆ ಆಸ್ಪದವಿರಬೇಕು. ಇದಕ್ಕೆ ಯಕ್ಷಗಾನ ಅಕಾಡೆಮಿ ಮುಂದಾಗಬೇಕು. ಕರಾವಳಿಯ ಸಂಸದರ ಮತ್ತು ವಿಧಾನಸಭಾ ಸದಸ್ಯರುಗಳ ಬೆಂಬಲ ದೊಡನೆ ಯಕ್ಷಗಾನ ಅಕಾಡೆಮಿ ಕಾಲಮಿತಿಯ, ಪೂರ್ವ ನಿರ್ದೇಶಿತ ಯಕ್ಷಗಾನ ಸಜೀವ ಪ್ರದರ್ಶನಗಳನ್ನು ಮಾಡಬೇಕು.

**ದಾಖಲೀಕೃತ ಪ್ರದರ್ಶನ**

ಸಜೀವ ಪ್ರದರ್ಶನವನ್ನು ಸಿ.ಡಿ. ರೂಪಕ್ಕಿಳಿಸುವುದು ದಾಖಲೀಕೃತ ಪ್ರದರ್ಶನ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಯಕ್ಷಗಾನಕ್ಕೊಂದು ವೆಬ್‌ಸೈಟ್ ಆರಂಭಿಸಿ ಅದರಲ್ಲಿ ಸಿಡಿಗಳ ಬಗ್ಗೆ ಮಾಹಿತಿ ನೀಡಬೇಕು. ಸಿ.ಡಿ.ಗಳನ್ನು ವಿಶ್ವ ಮಾರುಕಟ್ಟೆಗೆ ಬಿಡುಗಡೆ ಮಾಡಬೇಕು. ಸಿ.ಡಿ.ಗಳಲ್ಲಿನ ಕನ್ನಡ ಸಂಭಾಷಣೆಯನ್ನು ಇಂಗ್ಲಿಷಿಗೆ ಡಬ್ಬ್ ಮಾಡಬೇಕು. ಕಾಲಕ್ರಮೇಣ ಅಂತಹ ಸಿ.ಡಿ.ಗಳನ್ನು ವಿಶ್ವದ ಪ್ರಮುಖ ಭಾಷೆಗಳಾದ ಚೈನೀಸ್, ಹಿಂದಿ, ಫ್ರೆಂಚ್, ಸ್ಪಾನಿಷ್, ಜರ್ಮನ್, ರಶಿಯನ್ ಮತ್ತು ಜಪಾನೀಸ್ ಭಾಷೆಗಳಿಗೆ ಡಬ್ಬ್ ಮಾಡಿದರೆ ಅವುಗಳಿಗೆ ವಿಶ್ವದಾದ್ಯಂತ ಮಾರುಕಟ್ಟೆ ನಿರ್ಮಾಣವಾಗುತ್ತದೆ. ಇದು ಸ್ವಲ್ಪ ಸಮಯವನ್ನು ಬೇಡುವ ಕಾರ್ಯ. ಆದರೆ ಅಸಾಧ್ಯವಾದುದೇನಲ್ಲ.

ಇದುವೇ ಯಕ್ಷಗಾನದ ಜಾಗತೀಕರಣ. ಇದಕ್ಕೆ ಸ್ವಲ್ಪ ಬಂಡವಾಳದ ಅಗತ್ಯವಿದೆ. ಸಮರ್ಥ ಕಲಾವಿದರನ್ನು ರೂಪಿಸಲು ಒಂದು ಸಾಂಸ್ಥಿಕ ರಚನೆಯೂ ಬೇಕಾಗುತ್ತದೆ.

**ಸಾಂಸ್ಥಿಕ ರಚನೆ**

ಲಭ್ಯವಿರುವ ಯಕ್ಷಗಾನದ ಅತ್ಯುತ್ತಮ ಸರ್ವಾಂಗೀಣ ಕಲಾವಿದರನ್ನು ಶಿಕ್ಷಕರನ್ನಾಗಿ ಮಾಡಿ ಕೇರಳದ ಕಲಾಮಂಡಲಂ ಮಾದರಿಯಲ್ಲಿ ಕರ್ನಾಟಕದ ಯಕ್ಷಕಲಾ ಮಂಡಲ ಸಂಸ್ಥೆಯನ್ನು ಅಥವಾ ಯಕ್ಷಗಾನ ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕು. ಅವರು ಸರಳ ಬಹುಮತದ ಆಧಾರದಲ್ಲಿ ಯಕ್ಷಗಾನ ಸಂವಿಧಾನವೊಂದನ್ನು ರೂಪಿಸಬೇಕು. ಆ ಬಳಿಕ ಒಂದು ಗಂಟೆ, ಎರಡು ಗಂಟೆ ಮತ್ತು ಮೂರು ಗಂಟೆ ಅವಧಿಯ ಯಕ್ಷಪ್ರಸಂಗಗಳನ್ನು ರೂಪಿಸಿ ಕಲಾವಿದರನ್ನು ಆಯ್ಕೆ ಮಾಡಿ ಬೇಕೆಂದಾಗ ಸಜೀವ ಪ್ರದರ್ಶನಕ್ಕೆ ಸನ್ನದ್ಧ

ಸ್ಥಿತಿಯಲ್ಲಿರಿಸಬೇಕು. ಅಂತಹ ಪ್ರಸಂಗಗಳ ದಾಖಲೀಕೃತ ಸಿ.ಡಿ.ಗಳು ಸಿದ್ಧವಾಗಬೇಕು. ಈ ಕಾರ್ಯದಲ್ಲಿ ಕನ್ನಡ ಸಂಸ್ಕೃತಿ ಇಲಾಖೆ ಮತ್ತು ಯಕ್ಷಗಾನ ಅಕಾಡೆಮಿಯು ಯಕ್ಷಕಲಾ ಮಂಡಲ (ಯಕ್ಷಗಾನ ವಿಶ್ವವಿದ್ಯಾಲಯ)ದೊಡನೆ ಕೈಜೋಡಿಸಬೇಕು.

**ಬಂಡವಾಳ ಕ್ರೋಢೀಕರಣ**

ಯಕ್ಷಗಾನದ ಜಾಗತೀಕರಣಕ್ಕೆ ಬೇಕಾಗುವ ಬಂಡವಾಳವನ್ನು ದಾನಿಗಳಿಂದ ಮತ್ತು ಯಕ್ಷಗಾನ ಮೇಳಗಳನ್ನು ಹೊಂದಿರುವ ದೇವಾಲಯಗಳಿಂದ ಸಂಗ್ರಹಿಸಬೇಕು. ಭಾರತದ ಬೃಹತ್ ಉದ್ಯಮಿಗಳು ಕಲೆ-ಸಾಹಿತ್ಯ-ಸಾಮಾಜಿಕ ಸೇವೆಗೆಂದೇ ಫೌಂಡೇಶನ್‌ಗಳನ್ನು ಸ್ಥಾಪಿಸಿವೆ. ಅಂತಹ ಫೌಂಡೇಶನ್‌ಗಳ ನೆರವು ಪಡಕೊಳ್ಳಬೇಕು. ಕರ್ನಾಟಕ ಸರಕಾರದ ಮುಜರಾಯಿ ಇಲಾಖೆಯಲ್ಲಿ ಸಾಕಷ್ಟು ಹಣವಿದೆ. ಯಕ್ಷಗಾನದ ಉಳಿವಿಗಾಗಿ ಒಂದಷ್ಟು ಹಣ ವಿನಿಯೋಗಿಸಿದರೆ ನಿಜಕ್ಕೂ ಅದು ಸಾರ್ಥಕ ಪುಣ್ಯ ಕಾರ್ಯವಾಗಿ ಮುಜರಾಯಿ ಇಲಾಖೆಗೆ ಒಳ್ಳೆಯ ಹೆಸರು ಬರುತ್ತದೆ. ಅದರ ಅಸ್ತಿತ್ವಕ್ಕೆ ಒಂದು ಸಾಮಾಜಿಕ ಬದ್ಧತೆಯ ಸ್ವರೂಪವೂ ದಕ್ಕುತ್ತದೆ.

ಯಕ್ಷಗಾನದ ಗುಣಮಟ್ಟ ಹೆಚ್ಚಿಸಿ, ಅದನ್ನು ಸೇವಾಕ್ಷೇತ್ರದ (service sector) ಉತ್ಪನ್ನವಾಗಿಸಿ (product) ಜಗತ್ತಿನ ಎಲ್ಲಾ ದೇಶಗಳಿಂದ ಅದಕ್ಕೆ ಬೇಡಿಕೆ ಬರುವ ಹಾಗೆ ಮಾಡಲು ಸಾಧ್ಯವಿದೆ. ಇದಕ್ಕೆ ಶಿಕ್ಷಣ ಇಲಾಖೆ, ಆರ್ಥಿಕ ಇಲಾಖೆ, ಮುಜರಾಯಿ ಇಲಾಖೆ, ಪ್ರವಾಸೋದ್ಯಮ ಇಲಾಖೆ, ಕನ್ನಡ-ಸಂಸ್ಕೃತಿ ಇಲಾಖೆ ಮತ್ತು ಯಕ್ಷಗಾನ ಅಕಾಡೆಮಿ ಒಟ್ಟಾಗಿ ಮುತುವರ್ಜಿ ವಹಿಸಬೇಕಿದೆ. ಕರಾವಳಿಯ ಸಂಸದರುಗಳಿಗೆ ಮತ್ತು ವಿಧಾನಸಭಾ ಸದಸ್ಯರುಗಳಿಗೆ ಯಕ್ಷಗಾನದ ಮಹತ್ವದ ಅರಿವಾಗಬೇಕಿದೆ. ಯಕ್ಷಗಾನದ ಜಾಗತೀಕರಣಕ್ಕೆ ಬೇಕಾಗಿರುವುದು ಸಂಸ್ಕೃತಿಯ ಮೇಲಣ ಪ್ರೀತಿ, ಪ್ರಾಮಾಣಿಕತೆ, ಬದ್ಧತೆ ಮತ್ತು ಒಂದಿಷ್ಟು ದುಡಿಮೆ ಮಾತ್ರ.



# ರಸ

**ಶ್ರೀಕೃಷ್ಣ ಭಟ್, ಸುಣ್ಣಂಗುಳಿ**
**ಭಾಗವತ, ಪ್ರಾಧ್ಯಾಪಕ**
ಎಕ್ಸ್‌ಪರ್ಟ್ ಕಾಲೇಜು, ಮಂಗಳೂರು

ಸಾಮಾನ್ಯವಾಗಿ ಲೋಕರೂಢಿಯಲ್ಲಿ ಸಾರ, ಸತ್ತ್ವ, ದ್ರವ ಎಂಬರ್ಥದಲ್ಲಿ ರಸ ಎಂಬ ಪದ ಬಳಕೆಯಾಗುತ್ತದೆ. ರಸ ಎಂಬುದನ್ನು ಭಾವ ಎಂಬುದಕ್ಕೆ ಸಂವಾದಿಯಾದ ಪದವೆಂದು ಅನೇಕರು ತಪ್ಪಾಗಿ ಭಾವಿಸಿದಂತಿದೆ. ಅದೇ ಕಾರಣಕ್ಕೆ ದುಃಖರಸ, ಶೋಕರಸ ಎಂಬ ತಪ್ಪು ಪ್ರಯೋಗವನ್ನು ಮಾಡುತ್ತಾರೆ. ಮೀಮಾಂಸೆಯು ಹೇಳುವ ನವರಸಗಳಲ್ಲಿ ದುಃಖ, ಶೋಕಗಳೆಂಬ ರಸಗಳಿಲ್ಲ. ಶಬ್ದಕೋಶವು ರಸ ಎಂಬ ಪದಕ್ಕೆ ತಿರುಳು, ಸಾರ, ಭಾವಪರಿಪಾಕ ಎಂಬಿತ್ಯಾದಿ ಅರ್ಥಗಳನ್ನು ನೀಡುತ್ತದೆ. ಸಾಹಿತ್ಯ–ಕಲಾಕ್ಷೇತ್ರಗಳಲ್ಲಿ ರಸವೆಂಬ ಪರಿಕಲ್ಪನೆಯು ಭಾವಕ್ಕೆ ಸಂಬಂಧಿಯೇ ಹೊರತು ಭಾವವೇ ರಸವಲ್ಲ. ಭಾವ ಎಂಬರ್ಥದಲ್ಲೇ ಕನ್ನಡದ ಆದಿಕವಿ ಪಂಪನು, ತನ್ನ ಪಂಪಭಾರತದ ಗದಾಯುದ್ಧ ಪ್ರಸಂಗದ ಪೂರ್ವದಲ್ಲಿನ ದುರ್ಯೋಧನನ ಸ್ಥಿತಿಯನ್ನು ಬಣ್ಣಿಸುತ್ತ ,

ವ॥ ಎಂದು ಪೆರ್ಚಿದ ಶೋಕರಸಮಂ ಕೋಪರಸದ ಮೇಲಿಕ್ಕಿ ಭೀಷ್ಮಂ ಶರಶಯನತಳವಿಗತನಾಗಿರ್ದಲ್ಲಿವರ ಮೆಂತಾನುಮೊಡಗೊಂಡು ಬಂದಾಗಳ್– (ತ್ರಯೋದಶಾಶ್ವಾಸ, ವಿಕ್ರಮಾರ್ಜುನ ವಿಜಯಮ್) ಎಂದೂ,

ಅದನ್ನೇ ರನ್ನನು,

"ಎಂದು ಶೋಕರಸಮಂ ಕ್ರೋಧರಸದ ಮೇಲಿಕ್ಕಿ..." (ಪಂಚಮಾಶ್ವಾಸ, ಸಾಹಸಭೀಮ ವಿಜಯಮ್) ಎಂದೂ ಪ್ರಯೋಗಿಸಿದ್ದಾನೆ. ಇಲ್ಲಿ ರಸ ಎಂಬ ಪದ ಬಳಕೆಯಾದುದು ಭಾವ ಎಂಬರ್ಥದಲ್ಲಿ. ಆದರೆ ವಸ್ತುತಃ ರಸ ಎಂದರೆ ಭಾವವಲ್ಲ, ಅದಕ್ಕಿಂತ ಭಿನ್ನವಾದುದು.

ರಸವೇ ಕಾವ್ಯದ ಜೀವವೆಂದು ಪ್ರಾಚೀನ ಕವಿಗಳು,

ಮೀಮಾಂಸಕರು ಒಪ್ಪಿಕೊಂಡಿದ್ದಾರೆ. ಇದು ಕಲೆಗಳಿಗೂ ಅನ್ವಯವಾಗುವ ಸಂಗತಿ. ರಸ ಎಂದರೇನೆಂದು ಅರಸುತ್ತ ಹೋದಾಗ ಮೊದಲು ನೆನಪಿಗೆ ಬರುವುದು ಭರತನ ರಸಸೂತ್ರ, ಪ್ರಾಚೀನ ಶಾಸ್ತ್ರಗ್ರಂಥವಾದ ಆತನ ನಾಟ್ಯಶಾಸ್ತ್ರದಲ್ಲಿ ಆತ ನೀಡಿದ ರಸಸೂತ್ರ– "ವಿಭಾವಾನುಭಾವ ವ್ಯಭಿಚಾರೀ ಸಂಯೋಗಾದ್ರಸನಿಷ್ಪತ್ತಿಃ" ಎಂಬುದಾಗಿ. ಅಂದರೆ ವಿಭಾವ, ಅನುಭಾವ, ವ್ಯಭಿಚಾರಿ(ಸಂಚಾರಿ) ಭಾವಗಳ ಸಂಯೋಗದಿಂದ ರಸವು ನಿಷ್ಪನ್ನಗೊಳ್ಳುತ್ತದೆ.

ಈ ರಸಸೂತ್ರವು ಕಾವ್ಯಕ್ಕಿಂತ ಅಧಿಕವಾಗಿ ರಂಗಪ್ರಕಾರಕ್ಕೆ ಅಂದರೆ ಪ್ರದರ್ಶನ ಕಲೆಗಳಿಗೆ ಒಪ್ಪುತ್ತದೆ. ಇಲ್ಲಿ ವಿಭಾವೆಂಬುದಕ್ಕೆ, "ವಿಭಾವಃ ಕಥ್ಯತೇ ತತ್ರ ರಸೋತ್ಪಾದನ ಕಾರಣಮ್" (ರಸೋತ್ಪಾದನೆಗೆ ಕಾರಣವಾಗುವ ಪರಿಕರಗಳು ವಿಭಾವಗಳು) –ಎಂದು ವಿವರಣೆ ಕೊಡುತ್ತಾನೆ. ಇನ್ನೂ ಸ್ಪಷ್ಟಪಡಿಸುವುದಾದರೆ, ಲೋಕಾನುಭವದಲ್ಲಿನ ಮೂಲಕ್ಕೆ ಪ್ರತೀಕವಾಗಿ ರಂಗದಲ್ಲಿ ಬಳಕೆಯಾಗುವ ಪ್ರತಿಮೆ. ಅಂದರೆ, ರಂಗಸ್ಥಳದಲ್ಲಿರುವ ರಾಮನು ಹಿಂದೆ ಇದ್ದ ರಾಮನಿಗೆ ವಿಭಾವ. ವೇದಿಕೆಯಲ್ಲಿ ಬಳಕೆಯಾಗುವ ಸಿಂಹಾಸನ, ಉಯ್ಯಾಲೆ, ಇವೆಲ್ಲ ಪ್ರತಿಕೃತಿ ವಿಭಾವಗಳು. ಪ್ರವೇಶದ್ವಾರವಾಗಿ ಹಿಡಿದ ಪರದೆ ಸಾಂಕೇತಿಕ ವಿಭಾವ. ಯಕ್ಷಗಾನದ ಒಂದೇ ರಂಗಸ್ಥಳವು –ಅರಮನೆ, ಅರಣ್ಯ, ಅನ್ತಃಪುರ, ಯುದ್ಧಭೂಮಿ ಎಲ್ಲವೂ ಆಗುತ್ತದೆ ಇದು ಕಾಲ್ಪನಿಕ ವಿಭಾವ. ಈ ರೀತಿ ಕಲಾರೂಪವಾಗಿ ಪ್ರಕಟವಾಗುವುದನ್ನೆಲ್ಲ ವಿಭಾವವೆಂದು ಕರೆಯಲಾಗುತ್ತದೆ.

ಇಲ್ಲಿ ಬರುವ ಅನುಭಾವ ಎಂದರೆ, "ಕಾರ್ಯಭೂತೋನುಭಾವಃಸ್ಯಾತ್ ಕಟಾಕ್ಷಾದಿಃ ಶರೀರಜಃ" (ಕಟಾಕ್ಷವೇ ಮೊದಲಾದ ಶರೀರಜನ್ಯಕಾರ್ಯಭೂತವಾದ ಭಾವ). ರಂಗದಲ್ಲಿರುವ ಕಲಾವಿದನ ಮುಖದಲ್ಲಿ ಭಾವ ವ್ಯಕ್ತವಾಗುವ ಲಕ್ಷಣಗಳೇ ಅನುಭಾವಗಳು (ಅಧ್ಯಾತ್ಮದ ಅನುಭಾವವಲ್ಲ). ಉದಾ: ಶೋಕವೆಂಬ ಭಾವಕ್ಕೆ ಮುದುಡಿದ ಮುಖ, ಕಣ್ಣೀರು, ಗದ್ಗದಗೊಳ್ಳುವಿಕೆ, – ಇವೆಲ್ಲ ಅನುಭಾವಗಳು. ಈ ಅನುಭಾವಗಳು ಪ್ರೇಕ್ಷಕರಿಗೆ ಕೂಡಲೆ ಭಾವವನ್ನು ಸ್ಪಷ್ಟಪಡಿಸುತ್ತವೆ. ಹೀಗೆ– ರಂಗದಲ್ಲಿ ಭಾವಪ್ರಕಟಣೆಗೆ ಬಳಕೆಯಾಗುವ ಭಾಷೆಯೇ ಅನುಭಾವ.

ವ್ಯಭಿಚಾರೀ ಭಾವ (ಅಥವಾ ಸಂಚಾರೀ ಭಾವ) ಎಂದರೆ ಮುಖ್ಯಭಾವವನ್ನು ಪ್ರಕಟಿಸುವಾಗ ಅವುಗಳ ಮಧ್ಯೆ ಬಂದು ಹೋಗುವ ಭಾವಗಳು – ಇವು ಒಮ್ಮೆಯಷ್ಟೆ ಕಾಣಿಸಿಕೊಂಡು ಮತ್ತೆ ಇಲ್ಲವಾಗುತ್ತವೆ. (ಭರತನು– ನಿರ್ವೇದ, ಗ್ಲಾನಿ, ಶಂಕೆ, ಅಸೂಯೆ, ಮದ, ಶ್ರಮ, ಆಲಸ್ಯ, ದೈನ್ಯ, ಚಿಂತೆ, ಮೋಹ, ಸ್ಮೃತಿ, ಧೃತಿ, ವ್ರೀಡಾ(ನಾಚಿಕೆ) ಇವೇ ಮೊದಲಾದ ಮೂವತ್ತಮೂರು ಸಂಚಾರೀ ಭಾವಗಳನ್ನು ಹೆಸರಿಸಿದ್ದಾನೆ.)

ರಂಗವನ್ನೇರಿದಕಲಾವಿದ/ಪಾತ್ರಧಾರಿಯ ಅಭಿವ್ಯಕ್ತಿಯು ಸಾರ್ಥಕತೆಯನ್ನು ಪಡೆಯುವುದು ವಿಭಾವ ಮತ್ತು ( ಸ್ಥಾಯೀ + ಸಂಚಾರೀ) ಭಾವಗಳ ಸಂಯೋಗದಿಂದ. ಪಾತ್ರಕ್ಕೆ ಒಪ್ಪುವ ಶರೀರ, ಸ್ವರ, ರೂಪಗಳು ರಸಕ್ಕೆ ವಿಭಾವಗಳಾದರೆ; ಮುಖಚರ್ಯೆ, ಮಾತಿನ ಶೈಲಿ – ಇವೆಲ್ಲ ಅನುಭಾವಗಳು. ಇವುಗಳೊಂದಿಗೆ ಆ ಸನ್ನಿವೇಶಕ್ಕೊಪ್ಪುವ ಸಂಚಾರೀ ಭಾವಗಳು ಸೇರಿದಾಗ ರಸ ಹುಟ್ಟಿಕೊಳ್ಳುತ್ತದೆ. ಈ ಮೂರು ಅಂಶಗಳಲ್ಲಿ ಒಂದು ಊನವಾದರೂ(ಅನೌಚಿತ್ಯದಿಂದ ಕೂಡಿದ್ದರೂ) ರಸಭಂಗ ಉಂಟಾಗುತ್ತದೆ.

ಆಸ್ವಾದ್ಯವಾಗುವುದರಿಂದ ರಸ. ಅದು ರಂಗದಲ್ಲಿ ನಡೆಯುವ ಕ್ರಿಯೆಯ ಪರಿಣಾಮವಾಗಿ ಸಹೃದಯೀ ಪ್ರೇಕ್ಷಕನ ಅಂತರಂಗದಲ್ಲಿ ಹುಟ್ಟಿಕೊಳ್ಳುವ ಅನುಭವ. ನಾಟ್ಯಾದಿಗಳಿಂದ ರಸವು ಹೇಗೆ ಹುಟ್ಟಿಕೊಳ್ಳುತ್ತದೆ ಎಂದರೆ,

"ಯಥಾ ಬಹುದ್ರವ್ಯಯುಕ್ತೈರ್ವ್ಯಂಜನೈರ್ಬಹುಭಿರ್ಯುತಮ್।
ಆಸ್ವಾದಯನ್ತಿ ಭುಂಜಾನಾ ಭಕ್ತೇ ಭಕ್ತವಿದೋ ಜನಾಃ॥
ಭಾವಾಭಿನಯ ಸಂಬದ್ಧಾನ್ ಸ್ಥಾಯಿಭಾವಾಂಸ್ತಥಾ ಬುಧಾಃ।
ಆಸ್ವಾದಯನ್ತಿ ಮನಸಾ ತಸ್ಮಾನ್ನಾಟ್ಯರಸಾಃ ಸ್ಮೃತಾಃ॥" ನಾಟ್ಯಶಾಸ್ತ್ರ

ಹೇಗೆ ಊಟದ ರುಚಿಯನ್ನು ಬಲ್ಲ ಜನರು ಬಹುವಿಧ ದ್ರವ್ಯಗಳು ಮತ್ತು ಬಹುವಿಧ ವ್ಯಂಜನಗಳಿಂದ ಕೂಡಿದ ಅನ್ನವನ್ನು ಉಣ್ಣುತ್ತ ಆಸ್ವಾದಿಸುತ್ತಾರೋ ಹಾಗೆಯೆ ವಿದ್ವಾಂಸರು ನಾನಾ ಭಾವಗಳು ಮತ್ತು ಅಭಿನಯಗಳಿಂದ ಕೂಡಿದ ಸ್ಥಾಯಿ ಭಾವಗಳನ್ನು ಮನಸ್ಸಿನಿಂದಾಸ್ವಾದಿಸುತ್ತಾರೆ. ಆದ್ದರಿಂದಲೇ ಅವುಗಳಿಗೆ ನಾಟ್ಯರಸಗಳೆಂದು ಹೆಸರು.

ರಂಗದಲ್ಲಿನ ಪರಿಕರ, ಕ್ರಿಯೆ ಎಷ್ಟು ಸಮರ್ಥವಾಗಿದ್ದರೂ ರಸಾನುಭವವನ್ನು ಹೊಂದುವುದಕ್ಕೆ ಪ್ರೇಕ್ಷಕನಿಗೆ ಒಂದು ಬಗೆಯ ಸಂಸ್ಕಾರ ಬೇಕು. ಅದನ್ನು ಸಹೃದಯತೆ ಎನ್ನುತ್ತಾರೆ. ಸಹೃದಯನದು ಕವಿಹೃದಯಕ್ಕೆ ಸಂವಾದಿಯಾದ ಹೃದಯ. 'ರಸಜ್ಞತಾ ಏವ ಸಹೃದಯತ್ವಂ' (ಧ್ವನ್ಯಾಲೋಕ) ಇಂತಹ ಪ್ರೇಕ್ಷಕನು ಅಂತರಂಗದಲ್ಲಿ ಹೊಂದಬಹುದಾದ ಅನುಭವವೇ ರಸ. 'ರಸೋವೈ ಸಃ' (ಸ ರಸಃ ವೈ = ಅದು ರಸವಷ್ಟೆ).

ಭರತನು, ತನ್ನ ನಾಟ್ಯಶಾಸ್ತ್ರದಲ್ಲಿ ರಸಗಳನ್ನು ಎಂಟಾಗಿ ವರ್ಗೀಕರಿಸುತ್ತಾನೆ. ಅವುಗಳೆಂದರೆ,

ಶೃಂಗಾರಹಾಸ್ಯ ಕರುಣಾ ರೌದ್ರವೀರಭಯಾನಕಾಃ।
ಬೀಭತ್ಸಾದ್ಭುತಸಂಜ್ಞೌ ಚೇತ್ಯಷ್ಟೌ ನಾಟ್ಯೇ ರಸಾಃ ಸ್ಮೃತಾಃ॥ (ನಾಟ್ಯಶಾಸ್ತ್ರ, 6–15)

–ಶೃಂಗಾರ, ಹಾಸ್ಯ, ಕರುಣಾ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಇವು ರಸಗಳು. ಇಲ್ಲಿ ಶಾಂತ ರಸವನ್ನು ಪ್ರಸ್ತಾಪಿಸಲಿಲ್ಲ. ಶಾಂತರಸವನ್ನು ಉದ್ಭಟನೆಂಬ ಮೀಮಾಂಸಕನು ತನ್ನ ಕಾವ್ಯಾಲಂಕಾರ ಸಾರಸಂಗ್ರಹದಲ್ಲಿ ಹೇಳಿದ್ದಾನೆ. ಶಾಂತ ರಸಕ್ಕೆ ಸಮ್ಯಗ್ ಜ್ಞಾನವು ಸ್ಥಾಯೀಭಾವ. ರುದ್ರಟನೆಂಬ ಮೀಮಾಂಸಕನು ಸಂಚಾರೀ ಭಾವಗಳಿಗೂ ಪರಿಪೋಷವುಂಟಾದಾಗ, ಅವೂ ರಸಗಳಾಗುತ್ತವೆ– ಎನ್ನುತ್ತಾನೆ.

ರಸಾನುಭೂತಿಯು ಸಹೃದಯನ ಮೇಲೆ ಅವಲಂಬಿತವಾದುದು. ಸಹೃದಯನು ತನ್ನ ಸಂಸ್ಕಾರಕ್ಕೆ ತಕ್ಕಂತೆ ಈ ಅನುಭವವನ್ನು ಹೊಂದುತ್ತಾನೆ. ಒಬ್ಬನಿಗೆ ಒಂದು ರಸಾನುಭವವನ್ನಿತ್ತ ವಿಚಾರ ಇನ್ನೊಬ್ಬಾತನಿಗೂ ಅದನ್ನೇ ಈಯುತ್ತದೆ ಎನ್ನಲಸಾಧ್ಯ. ಅಲ್ಲದೆ, ಸ್ಥಾಯಿಯಾಗಿ ಅಂತರಂಗದಲ್ಲಿ ಬಹುಕಾಲ ಉಳಿಯಲಾರದ ಬೀಭತ್ಸ, ಅದ್ಭುತ, ಶಾಂತ ರಸಗಳ ಅಭಿವ್ಯಕ್ತಿಯನ್ನೀಯುವುದು ಕಾವ್ಯದಲ್ಲಾಗಲಿ, ರಂಗದಲ್ಲಾಗಲಿ ಕಷ್ಟ ಸಾಧ್ಯ. ಒಂದೊಮ್ಮೆ ಸಾಧ್ಯವಾದರೂ ಸಂಚಾರೀ ಭಾವಗಳಂತೆ ಮಿಂಚಿ ಮರೆಯಾಗತಕ್ಕವು. ಆದರೆ ಈ ವರ್ಗಕ್ಕೆ ಸೇರದ ಭಕ್ತಿ ಮತ್ತು ವಾತ್ಸಲ್ಯಗಳು ಹೆಚ್ಚು ಸ್ಥಾಯಿಯಾಗಿ ಉಳಿಯುವಂತಹವು. ಇದರಿಂದಲೇ ಕೆಲವು ಮುಖ್ಯ ಮತ್ತೆ ಕೆಲವು ಗೌಣ ರಸಗಳಾಗಿ ಉಳಿದವು.

ಪರಾಮರ್ಶನ :


1. ಭಾರತೀಯಕಾವ್ಯಮೀಮಾಂಸೆ ತೀ.ನಂ.ಶ್ರೀಕಂಠಯ್ಯ
2. ಪ್ರತಾಪರುದ್ರೀಯ : ಸಂಪಾದನೆ ಮತ್ತು ಅನುವಾದ– ಡಾ.ಎಚ್.ತಿಪ್ಪೇರುದ್ರಸ್ವಾಮಿ.
3. Natyashastra of Bharathamuni, with the commentary -AbhinavaBharathi by Abhinavaguptha
4. ಭರತಮುನಿಯ ನಾಟ್ಯಶಾಸ್ತ್ರ ಅನುವಾದ– ಆದ್ಯರಂಗಾಚಾರ್ಯ.
5. ಕಾವ್ಯಾರ್ಥ ಚಿಂತನ – ಪ್ರೊ.ಜಿ.ಎಸ್.ಶಿವರುದ್ರಪ್ಪ.
6. ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ– ಡಾ.ಕೆ.ಕೃಷ್ಣಮೂರ್ತಿ.
7. ರಸೋಲ್ಲಾಸ ಡಾ.ಕೆ.ಕೃಷ್ಣಮೂರ್ತಿ
8. ಅಭಿನವಗುಪ್ತ ಜಿ.ಟಿ.ದೇಶಪಾಂಡೆ
9. ಭಾರತೀಯ ಸಂವೇದನೆ– ಸಂ.ಪಾದೇಕಲ್ಲು ವಿಷ್ಣು ಭಟ್ಟ
10. ಧನಂಜಯನ ದಶರೂಪಕ– ಸಂ ಮತ್ತು ಅನು, ಕೆ.ಎ.ಸುಬ್ಬಣ್ಣ




# ಯಕ್ಷಗಾನ ಹಿಮ್ಮೇಳ ಅಧ್ಯಯನಸೂಚಿ

**ಡಾ. ಪಾದೇಕಲ್ಲು ವಿಷ್ಣು ಭಟ್ಟ**
ಲೇಖಕ, ಸಂಶೋಧಕ, ಪ್ರಾಂಶುಪಾಲ
'ಧಾತ್ರಿ'
ಅಂಚೆ : ಆತ್ರಾಡಿ
ಉಡುಪಿ ತಾಲೂಕು –576107

ಯಕ್ಷಗಾನಕ್ಕೆ ಸಂಬಂಧಪಟ್ಟ ಗ್ರಂಥಸೂಚಿಯನ್ನು ಪ್ರಸ್ತುತ ಲೇಖಕನು ಈ ಹಿಂದೆ ಸಿದ್ಧಪಡಿಸಿದ್ದು, ಅದು ಮುದ್ರಿತವಾಗಿರುತ್ತದೆ. (ಪ್ರಕಾಶಕರು–ಯಕ್ಷಗಾನ ಕೇಂದ್ರ, ಹಯಗ್ರೀವನಗರ, ಉಡುಪಿ–576102; 2006) ಆ ಸೂಚಿಯ ಒಂದು ಭಾಗವಾಗಿ ಯಕ್ಷಗಾನದ ಬಗೆಗೆ ಆವರೆಗೆ ಬಂದ ಎಲ್ಲ ಕೃತಿಗಳ ಕಿಂಚಿತ್ಪರಿಚಯವನ್ನು ಸೂಚಿಸಿ ಪುಸ್ತಕಸೂಚಿಯೊಂದನ್ನು ಸಿದ್ಧಪಡಿಸಿ ಅದರಲ್ಲಿ ನೀಡಲಾಗಿದೆ. ಯಕ್ಷಗಾನದ ಸಾಮಾನ್ಯ ಪರಿಚಯ, ವಿಮರ್ಶೆ, ವಿಶ್ಲೇಷಣೆ, ಸಂಶೋಧನೆ, ಅಭಿನಂದನಗ್ರಂಥ, ಜೀವನ ಚರಿತ್ರೆ, ಆತ್ಮಕಥೆ –ಇತ್ಯಾದಿ ವಿಷಯಕವಾದ ಪುಸ್ತಕಗಳ ವಿವರಗಳೊಡನೆ ಹಿಮ್ಮೇಳದ ಬಗೆಗೆ ಬಂದ ಪುಸ್ತಕಗಳ ವಿವರಗಳೂ ಅಲ್ಲಿ ಸೇರಿವೆ. ಆ ಗ್ರಂಥಸೂಚಿಯ ಪ್ರಕಟಣಾನಂತರ ಹಿಮ್ಮೇಳದ ಬಗೆಗೆ ಇನ್ನೂ ಕೆಲವು ಪುಸ್ತಕಗಳು ಬಂದಿವೆ. ಇವೆಲ್ಲ ಮಾಹಿತಿಗಳನ್ನು ಸೇರಿಸಿ ಪುಸ್ತಕಪರಿಚಯಕ್ಕೆ ಒಂದಿಷ್ಟು ಹೆಚ್ಚು ಒತ್ತುಕೊಟ್ಟು ಪ್ರಸ್ತುತ ಸೂಚಿಯನ್ನು ಸಿದ್ಧಪಡಿಸಲಾಗಿದೆ.

ಈ ಸೂಚಿಯು ಹಿಮ್ಮೇಳಕ್ಕೆ ಸಂಬಂಧಿಸಿದುದೆಂಬುದರಿಂದ ಹಿಮ್ಮೇಳದ ತಾಂತ್ರಿಕ ವಿವರಗಳನ್ನುಳ್ಳ ಪುಸ್ತಕಗಳ ಪರಿಚಯ ದೊಂದಿಗೆ ಹಿಮ್ಮೇಳ ಕಲಾವಿದರ ಆತ್ಮಕಥೆ, ಜೀವನಚರಿತ್ರೆ ಮತ್ತು ಅಭಿನಂದನ–ಸಂಸ್ಮರಣಗ್ರಂಥಗಳ ವಿವರಗಳನ್ನೂ ಇಲ್ಲಿ ನೀಡಲಾಗಿದೆ. ಯಕ್ಷಗಾನಕ್ಷೇತ್ರದಲ್ಲಿ ತಾಳಮದ್ದಳೆ ಮತ್ತು ಅರ್ಥಗಾರಿಕೆಗೆ ಸಂಬಂಧಿಸಿದಂತೆ ತುಂಬ ಪುಸ್ತಕಗಳೂ ಲೇಖನಗಳೂ ಹೊರಬಂದಿವೆ. (ಪ್ರಸ್ತುತ ಲೇಖಕನು ತಾಳಮದ್ದಳೆಗೆ

ಸಂಬಂಧಿಸಿದಂತಹ ಗ್ರಂಥಗಳ ವಿವರಣಾತ್ಮಕ ಸೂಚಿಯೊಂದನ್ನು ಈಗಾಗಲೇ ರಚಿಸಿದ್ದು ಅದು ವಾಚಿಕ ಎಂಬ ಗ್ರಂಥದಲ್ಲಿ ಪ್ರಕಟಗೊಂಡಿದೆ. ಸಂಪಾದಕರು: ಡಾ. ಪಾದೇಕಲ್ಲು ವಿಷ್ಣು ಭಟ್ಟ ಮತ್ತು ಡಾ. ಎಂ. ಪ್ರಭಾಕರ ಜೋಶಿ, ಪ್ರಕಾಶಕರು, ಯಕ್ಷಗಾನ ಕಲಾರಂಗ, ಉಡುಪಿ –576101; 2009). ಯಕ್ಷಗಾನದ ಬಣ್ಣಗಾರಿಕೆಯು ರಂಗಸ್ಥಳಕ್ಕಿಂತ ಹಿಂಭಾಗದಲ್ಲಿ ನಡೆಯುವಂತಹದು. ಈ ಬಣ್ಣಗಾರಿಕೆಗೆ ಅದರದ್ದೇ ಆದ ನಿಯಮಗಳು ಮತ್ತು ಪರಂಪರೆಯಿದೆ. ಈ ಬಗೆಗೆ ಕೆಲವು ಪುಸ್ತಕಗಳೂ ಹಲವಾರು ಲೇಖನಗಳೂ ಬಂದಿವೆ. ರಂಗದ ಹಿಂದೆ ಹಿಮ್ಮೇಳವಿದ್ದಂತೆಯೇ ರಂಗದ ಮೇಲಿನ ಪ್ರದರ್ಶನಕ್ಕೆ ತಯಾರಿಯಾಗಿರುವ ಆಹಾರ್ಯವಿಭಾಗವೂ ರಂಗದ ಹಿಂದಿರುತ್ತದೆ. ಆದರೆ ಬಣ್ಣಗಾರಿಕೆಯೆಂಬುದು ನಿಜವಾಗಿ ಮುಮ್ಮೇಳಕ್ಕೇ ಸಂಬಂಧಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಪುಸ್ತಕ ಮತ್ತು ಲೇಖನಗಳನ್ನು ಈ ಸೂಚಿಯಿಂದ ಹೊರಗಿರಿಸಲಾಗಿದೆ. ಪ್ರಸ್ತುತ ಸೂಚಿಯಲ್ಲಿರುವ ಪುಸ್ತಕಗಳನ್ನು ಮತ್ತು ಅನಂತರ ನೀಡಲಾದ ಹಿಮ್ಮೇಳಕ್ಕೆ ಸಂಬಂಧಿಸಿದ ಲೇಖನಗಳನ್ನು ಒಟ್ಟು ಸೇರಿಸಿದರೆ ಯಕ್ಷಗಾನ ಹಿಮ್ಮೇಳದ ಬಗೆಗೆ ಇದುವರೆಗೆ ಬಂದ ಎಲ್ಲ ಬರವಣಿಗೆಗಳು ಒಟ್ಟಾದಂತಾಗಬೇಕು ಎಂಬುದು ಈ ಸೂಚಿಯ ಸಿದ್ಧತೆಯ ಹಿಂದಿನ ದೃಷ್ಟಿಯಾಗಿದೆ.

**ಗಾನಕೋಗಿಲೆ**

ಗೌರವ ಸಂಪಾದಕರು : ಏರ್ಯ ಲಕ್ಷ್ಮೀನಾರಾಯಣ ಆಳ್ವ

ಸಂಪಾದಕರು : ಡಾ. ಎಂ. ಪ್ರಭಾಕರ ಜೋಷಿ; ಪ್ರೊ. ಎನ್. ನಾರಾಯಣ ಭಟ್; ಪ್ರೊ. ರಾಜಮಣಿ ರಾಮಕುಂಜ

ಪ್ರಕಾಶಕರು : ದಾಮೋದರ ಮಂಡೆಚ್ಚ ಸ್ಮಾರಕ ಸಮಿತಿ, ಜೋಡುಮಾರ್ಗ, ಬಂಟ್ವಾಳ

ಪ್ರ. ಮು. 1987; ಪುಟಗಳು– 14+166

11–11–1985ರಂದು ಮುಂಬಯಿಯಲ್ಲಿ ಯಕ್ಷಗಾನ ಸಮ್ಮೇಳನ ನಡೆಯುವ ಸಂದರ್ಭದಲ್ಲಿಯೇ ದಿವಂಗತರಾದ ಭಾಗವತ ದಾಮೋದರ ಮಂಡೆಚ್ಚರ ಸಂಸ್ಮರಣಗ್ರಂಥ ಗಾನಕೋಗಿಲೆ. ಯಕ್ಷಗಾನಕ್ಷೇತ್ರಕ್ಕೆ ಮಂಡೆಚ್ಚರ ಕೊಡುಗೆಯನ್ನೂ ಅವರ ಜೊತೆಗಿನ ಯಕ್ಷಗಾನಕ್ಷೇತ್ರದ ಅನುಭವ ಮತ್ತು ಸ್ಮರಣೆಗಳನ್ನೂ ನಿರೂಪಿಸುವ 14 ಲೇಖನಗಳು ಗ್ರಂಥದ ಮೊದಲ ಭಾಗವಾದ ವ್ಯಕ್ತಿ ಎಂಬುದರಲ್ಲಿದೆ. ಎರಡನೆಯ ಭಾಗವಾದ ಕಲೆ ಎಂಬುದರಲ್ಲಿ 12 ಲೇಖನಗಳಿವೆ. ಈ ವಿಭಾಗದಲ್ಲಿ ಯಕ್ಷಗಾನದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿದ್ದು, ಕುಕ್ಕಿಲ ಕೃಷ್ಣ ಭಟ್ಟ, ಸೇಡಿಯಾಪು ಕೃಷ್ಣ ಭಟ್ಟ, ಪ್ರೊ. ಎಂ. ರಾಜಗೋಪಾಲಾಚಾರ್ಯ, ಮಂದಾರ ಕೇಶವ ಭಟ್ಟ, ವೆಂಕಟರಾಜ ಪುಣಿಂಚತ್ತಾಯ ಮೊದಲಾದ ಹಿರಿಯರು ಇಲ್ಲಿಯ ಲೇಖಕರೊಳಗೆ ಸೇರಿದ್ದಾರೆ.

**ಗುರುಭ್ಯೋ ನಮಃ**

(ಉಡುಪಿ ಯಕ್ಷಗಾನ ಕೇಂದ್ರದ ಗುರುಗಳ ಬಗೆಗಿನ ಲೇಖನಸಮುಚ್ಚಯ)

ಸಂಪಾದಕರು : ಎಚ್. ಶ್ರೀಧರ ಹಂದೆ

ಪ್ರಕಾಶಕರು : ಯಕ್ಷಗಾನ ಕೇಂದ್ರ, ಎಂ. ಜಿ. ಎಂ. ಕಾಲೇಜು, ಉಡುಪಿ

ಪ್ರ. ಮು. 2006; ಪುಟಗಳು–8+111

ಉಡುಪಿಯ ಯಕ್ಷಗಾನ ಕೇಂದ್ರದಲ್ಲಿ ದುಡಿದು ನಿವೃತ್ತರಾದ ಮತ್ತು ಪ್ರಸ್ತುತ ಗುರುಗಳಾಗಿರುವ ಹಿರಿಯರ ಬಗೆಗಿನ 28 ಲೇಖನಗಳ ಸಂಕಲನವಿದು. ಇಲ್ಲಿಯ ಮುಖ್ಯಗುರುಗಳಲ್ಲಿ ಹೆಚ್ಚಿನವರು ಹಿಮ್ಮೇಳಕ್ಕೆ ಸಂಬಂಧಿಸಿದವರೆಂಬುದು ಗಮನಾರ್ಹ. ವಿವಿಧ ಮಹನೀಯರು ಬರೆದ ಲೇಖನಗಳನ್ನು ಪುಸ್ತಕರೂಪದಲ್ಲಿ ಸಂಕಲಿಸಿದ ಎಚ್. ಶ್ರೀಧರ ಹಂದೆಯವರೂ ಇದರೊಳಗಿನ ಕೆಲವು ಲೇಖನಗಳನ್ನು ಬರೆದಿದ್ದಾರೆ. ಹಿಮ್ಮೇಳದ ಹಿರಿಯರಾದ ಹಿರಿಯಡಕ ಗೋಪಾಲರಾವ್, ಗೋರ್ಪಾಡಿ ವಿಟ್ಠಲ ಪಾಟೀಲ್, ನೀಲಾವರ ಲಕ್ಷ್ಮೀನಾರಾಯಣಯ್ಯ, ಜಾನುವಾರುಕಟ್ಟೆ ಗೋಪಾಲಕೃಷ್ಣ ಕಾಮತ್, ಕೋಟ ಮಹಾಬಲ ಕಾರಂತ, ನೀಲಾವರ ರಾಮಕೃಷ್ಣಯ್ಯ ಮೊದಲಾದವರ ಬಗೆಗಿನ ಲೇಖನಗಳು ಇಲ್ಲಿ ಸೇರಿವೆ. ಯಕ್ಷಗಾನದ ಇತಿಹಾಸರಚನೆಯ ಸಂದರ್ಭದಲ್ಲಿ ಬೇಕಾಗುವ ಹಲವು ಮಾಹಿತಿಗಳು ಇದರಲ್ಲಿವೆ.

**ಚಿನ್ನದ ತಾಳ**

(ಭಾಗವತ ಗೋರ್ಪಾಡಿ ವಿಟ್ಠಲ ಪಾಟೀಲರ ನೆನಪಿನ ಸಂಚಯ)

ನಿರೂಪಣೆ : ಡಾ. ಕೆ. ಎಮ್. ರಾಘವ ನಂಬಿಯಾರ್

ಪ್ರಕಾಶಕರು : ಭಾಗವತ ಗೋರ್ಪಾಡಿ ವಿಟ್ಠಲ ಪಾಟೀಲ್ ಅಭಿಮಾನಿ ಬಳಗ, ಬ್ರಹ್ಮಾವರ, ಉಡುಪಿ ಜಿಲ್ಲೆ

ಪ್ರ. ಮು. 2005; ಪುಟಗಳು–12+211

ಈ ಕೃತಿಯಲ್ಲಿ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಯಕ್ಷಗಾನಭಾಗವತ ಗೋರ್ಪಾಡಿ ವಿಟ್ಠಲ ಪಾಟೀಲರ ನೆನಪಿನಲ್ಲಿರುವ ಯಕ್ಷಗಾನಸಂಬಂಧಿ ಅನುಭವಗಳನ್ನು ದಾಖಲಿಸಲಾಗಿದೆ. ಎರಡನೆಯ ಭಾಗವಾದ ರಂಗಮಾಹಿತಿಯಲ್ಲಿ ಭಾಗವತಿಕೆಗೆ ಬೇಕಾದ ವಿವಿಧ ವಿಷಯಗಳನ್ನು ಅವಶ್ಯವಿದ್ದಲ್ಲಿ ತಾಳಪ್ರಸ್ತಾರ ಇತ್ಯಾದಿಗಳನ್ನು ಹಾಕಿ ಕೊಡಲಾಗಿದೆ. ಯಕ್ಷಗಾನ ಆಟಗಳ ವಿವಿಧ ಸಂದರ್ಭದಲ್ಲಿ ಬಳಸಲಾಗುವ ತುಂಡುಪದಗಳು ಮತ್ತು ಒಡ್ಡೋಲಗಕ್ರಮಗಳು, ವಿಶಿಷ್ಟವಾದ ಕೆಲವು ನಡೆಗಳು ಮತ್ತು ಅವುಗಳ ಪದಗಳು ಇಲ್ಲಿ ಅಪೂರ್ವ ಮಾಹಿತಿಗಳಾಗಿ ಸೇರಿವೆ. ವ್ಯಕ್ತಿ ವಿಶೇಷತೆ ಎಂಬ ಭಾಗದಲ್ಲಿ ವಿಟ್ಠಲ ಪಾಟೀಲರ ಬಗೆಗಿನ ಲೇಖನಗಳಿವೆ. ಕೊನೆಯ ಭಾಗದಲ್ಲಿ ವಿಟ್ಠಲ ಪಾಟೀಲರು ಬರೆದ ಪುಷ್ಕರವಿಜಯ, ಕಾಮಾಕ್ಷೀಪರಿಣಯ ಎಂಬ ಪ್ರಸಂಗಗಳಿವೆ.

**ಚೆಂಡೆ ಮದ್ದಳೆಗಳ ನಡುವೆ**

ಲೇಖಕರು : ಬಿ. ಗೋಪಾಲಕೃಷ್ಣ ಕುರುಪ್

ಪ್ರಕಾಶಕರು : ಕಾಂತಾವರ ಕನ್ನಡ ಸಂಘ, ಕಾಂತಾವರ

ಪ್ರ. ಮು.2004 ; ಪುಟಗಳು –13+138

ಮದ್ದಳೆಗಾರ ಬಿ. ಗೋಪಾಲಕೃಷ್ಣ ಕುರುಪ್ ಅವರ ಆತ್ಮಚರಿತ್ರರೂಪದ ಪುಸ್ತಕವಿದು. ವಿವಿಧ ಭಾಗಗಳಲ್ಲಿ ಅವರ ನೆನಪುಗಳು ಹರಡಿಕೊಂಡಿದ್ದು ಅವರ ಯಕ್ಷಗಾನಕ್ಷೇತ್ರದ

ಒಟ್ಟು ಸಾಧನೆ ಚೆನ್ನಾಗಿ ತಿಳಿಯುವಂತಿದೆ. ಅನುಬಂಧದಲ್ಲಿ ಹಿಮ್ಮೇಳಕ್ಕೆ ಸಂಬಂಧಿಸಿದ ಕೆಲವು ಪದ್ಯಗಳ ಸ್ವರಪ್ರಸ್ತಾರ ಮತ್ತು ಕುರುಪ್ ಅವರಿಗೆ ಸಂಬಂಧಿಸಿದ ಭಾವಚಿತ್ರಗಳ ಸಂಗ್ರಹವಿದೆ. ಸಹಸ್ಪಂದನ ಎಂಬ ಭಾಗದಲ್ಲಿ ಹಲವರು ಹಿರಿಯರು ಅವರ ಕೃತಿಗಳ ಬಗೆಗೆ ಬರೆದ ಪತ್ರಗಳ ಸಂಗ್ರಹವಿದೆ.

**ಚೆಂಡೆಯ ಮೆಲುನುಡಿ**

(ನೆಡ್ಲೆ ನರಸಿಂಹ ಭಟ್ಟರ ಆತ್ಮಕಥನ )

ನಿರೂಪಣೆ : ಸರ್ಪಂಗಳ ಈಶ್ವರ ಭಟ್ಟ

ಪ್ರಕಾಶಕರು : ನೆಡ್ಲೆ ನರಸಿಂಹ ಭಟ್ಟ, ಯಕ್ಷಗಾನ ಪ್ರತಿಷ್ಠಾನ ಯೆಯ್ಯಾಡಿ, ಮಂಗಳೂರು

ಪ್ರಮು. 2003 ; ಪುಟಗಳು –10+73

ತೆಂಕುತಿಟ್ಟಿನ ಚೆಂಡೆ–ಮದ್ದಳೆವಾದಕರಲ್ಲಿ ಹಿರಿಯ ಗುರುವಿನ ಸ್ಥಾನದಲ್ಲಿ ಪರಿಗಣಿತರಾಗುವ ನೆಡ್ಲೆ ನರಸಿಂಹ ಭಟ್ಟರ ಜೀವನದ ಕೊನೆಗಾಲದಲ್ಲಿ ಸಂಗ್ರಹಿಸಲಾದ ನೆನಪುಗಳ ಸಂಕಲನವಿದು. ಕಲಾವಿದರ ಮತ್ತು ವಿಶೇಷಸಾಧನೆ ಮಾಡಿದವರ ನೆನಪಿನಶಕ್ತಿ ಚೆನ್ನಾಗಿರುವಾಗಲೇ ಅವರ ಅನುಭವಗಳನ್ನು ದಾಖಲಿಸಿಕೊಳ್ಳಬೇಕು. ನೆಡ್ಲೆಯವರಿಗೆ ಪ್ರಾಯ ಮೀರಿ ಹೋದಾಗ ಅವರ ಅನುಭವಗಳನ್ನು ದಾಖಲಿಸುವ ಕೆಲಸ ಮಾಡಲಾಯಿತು. ಆದುದರಿಂದ ಪುಸ್ತಕದ ಗಾತ್ರ ಸಣ್ಣದಾಗಿದೆ. ಆಸಕ್ತರಿಗೆ ಅವರ ಹಲವು ಅನುಭವಗಳು ಕೈತಪ್ಪಿ ಹೋಗುವಂತಾಗಿದೆ. ಆದರೂ ಇಲ್ಲಿ ದಾಖಲಾಗಿರುವ ಅನುಭವಗಳು ಯಕ್ಷಗಾನ ರಂಗಕಲೆಯ ಇತಿಹಾಸದ ದೃಷ್ಟಿಯಿಂದ ಬಹಳ ಮುಖ್ಯವಾಗಿವೆ. ಚೆಂಡೆಮದ್ದಳೆಗಾರರೆಂದು ಪ್ರಸಿದ್ಧರಾದರೂ ಹಿಮ್ಮೇಳದ ಸಮಗ್ರಪರಿಣತಿ ಇರುವ ನೆಡ್ಲೆಯವರ ಪ್ರತಿಯೊಂದು ಮಾತಿಗೆ ಆಳವಾದ ಅನುಭವದ ಹಿನ್ನೆಲೆಯಿರುವುದನ್ನು ಪುಸ್ತಕದಲ್ಲಿ ಸರಿಯಾಗಿ ಗಮನಿಸುವಂತಿದೆ. ಆ ಹಿರಿಯರ ನಯ–ವಿನಯಪೂರ್ವಕವಾದ ನಡತೆಗೆ ಇಲ್ಲಿ ಸಾಕಷ್ಟು ಉದಾಹರಣೆಗಳಿವೆ.

**ತಿತ್ತಿತ್ತೈ : ಯಕ್ಷಗಾನ ತಾಳ ಸಂಬಂಧಿ ಅಧ್ಯಯನ**

ಲೇಖಕರು : ಶ್ರೀ ಬಿ. ಗೋಪಾಲಕೃಷ್ಣ ಕುರುಪ್

ಪ್ರಕಾಶಕರು : ಕಾಂತಾವರ ಕನ್ನಡ ಸಂಘ, ಕಾಂತಾವರ

ಪ್ರ. ಮು. 2008; ಪುಟಗಳು –36+68

ಈ ಪುಸ್ತಕವನ್ನು ಬರೆದ ಗೋಪಾಲಕೃಷ್ಣ ಕುರುಪ್ ಅವರು ಹಿರಿಯ ಬಲಿಪ ನಾರಾಯಣ ಭಾಗವತ, ಅಗರಿ ಶ್ರೀನಿವಾಸ ಭಾಗವತ, ಕುದುರೆಕೋಡ್ಲು ರಾಮಭಟ್ಟ, ನೆಡ್ಲೆ ನರಸಿಂಹ ಭಟ್ಟ, ನಾರಂಪಾಡಿ ಸುಬ್ಬಯ್ಯ ಶೆಟ್ಟಿ ಮೊದಲಾದವರಲ್ಲಿ ಯಕ್ಷಗಾನ ಹಿಮ್ಮೇಳದ ಸರ್ವಾಂಗಗಳನ್ನೂ ಅಧ್ಯಯನಮಾಡಿ ಹಿಮ್ಮೇಳಕ್ಕೆ ಸಂಬಂಧಿಸಿದ ಹಲವು ಪುಸ್ತಕಗಳನ್ನು ಬರೆದವರು. ತಿತ್ತಿತ್ತೈ ತಾಳವು ಒಂದು ವಿಶಿಷ್ಟವಾದ ತಾಳವಿಧಾನವಾಗಿದ್ದು ಅದರ ಎಲ್ಲ ವಿವರಗಳನ್ನು ಈ ಪುಸ್ತಕದಲ್ಲಿ ಅಕ್ಷರಪ್ರಸ್ತಾರಸಹಿತ ನೀಡಲಾಗಿದೆ. ಇದರಲ್ಲಿರುವ ವಿವರಗಳನ್ನು ಕಿರಿಯ ಬಲಿಪ ನಾರಾಯಣ ಭಾಗವತರು ಅನುಮೋದಿಸಿ ಮೊದಲ ಮಾತುಗಳನ್ನು ಬರೆದಿದ್ದಾರೆ.

**ತೆಂಕುತಿಟ್ಟು : ಪ್ರಾಥಮಿಕ ಯಕ್ಷಗಾನ ಪಾಠಗಳು**

ಲೇಖಕರು : ಶ್ರೀ ಬಿ. ಗೋಪಾಲಕೃಷ್ಣ ಕುರುಪ್

ಪ್ರಕಾಶಕರು : ಲಲಿತಕಲಾ ತರಬೇತಿ ಕೇಂದ್ರ, ಧರ್ಮಸ್ಥಳ –574216

ಪ್ರ. ಮು. 1989; ಪುಟಗಳು –12+80

ಯಕ್ಷಗಾನದ ವಿದ್ಯಾರ್ಥಿಗಳಿಗಾಗಿ ಸಿದ್ಧಪಡಿಸಿದ ಪಠ್ಯಪುಸ್ತಕವಿದು. ಪೂರ್ವರಂಗದ ವಿವರಗಳನ್ನು ನೀಡಲಾಗಿದೆ. ತಾಳಗಳ ವಿವರ, ಮದ್ದಳೆಯ ಬಾಯಿತಾಳಗಳ ವಿವರಗಳನ್ನು ಕೊಡಲಾಗಿದೆ. ಮುಖ್ಯವಾಗಿ ಹಿಮ್ಮೇಳದ ಪ್ರಾಥಮಿಕ ಪಾಠಗಳನ್ನೇ ಇಲ್ಲಿ ನೀಡಲಾಗಿದೆ ಯೆನ್ನಬಹುದು.

**ನಾದಶಂಕರ**

(ಪದ್ಯಾಣ ಶಂಕರನಾರಾಯಣ ಭಟ್– ಅಭಿನಂದನ ಗ್ರಂಥ)

ಸಂಪಾದಕರು : ಉಜಿರೆ ಎನ್. ಅಶೋಕ ಭಟ್

ಪ್ರಕಾಶಕರು : ಕುರಿಯ ವಿಠಲ ಶಾಸ್ತ್ರಿ ಯಕ್ಷಗಾನ ಪ್ರತಿಷ್ಠಾನ (ರಿ), ಉಜಿರೆ, ಚಿನ್ಮಯ, ಅಜಿತನಗರ, ಉಜಿರೆ– 574240 ದ. ಕ.

ಪ್ರ. ಮು. 2010; ಪುಟಗಳು–14+268

ತೆಂಕುತಿಟ್ಟಿನ ಚೆಂಡೆ ಮದ್ದಳೆ ವಾದನಗಳ ಕ್ಷೇತ್ರದಲ್ಲಿ ಪ್ರಸಿದ್ಧ ಕಲಾವಿದರಾದ ಪದ್ಯಾಣ ಶಂಕರನಾರಾಯಣ ಭಟ್ಟರಿಗೆ ಸಮರ್ಪಿಸಲಾದ ಈ ಅಭಿನಂದನಗ್ರಂಥದಲ್ಲಿ ಅವರ ಬಂಧುಗಳು, ಪರಿಚಿತರು, ಅಭಿಮಾನಿಗಳು, ಹಿರಿಯರು ಬರೆದ ಲೇಖನಗಳಿವೆ. ಅವುಗಳಲ್ಲಿ ಅವರ ಸಾಧನೆ ಮತ್ತು ಸಿದ್ಧಿಗಳ ಸಂಪೂರ್ಣ ಚಿತ್ರಣವಿದೆ. ಪುಸ್ತಕದೊಳಗಿರುವ ಭಾವಚಿತ್ರಗಳು ಯಕ್ಷಗಾನಕ್ಷೇತ್ರದಲ್ಲಿ ಅವರ ಸಾಧನೆಗಳನ್ನು ಎತ್ತಿ ತೋರಿಸುವಂತಿವೆ. ಕೊನೆಯಲ್ಲಿ ಪುಟ್ಟದಾದ ಸಂದರ್ಶನಲೇಖನ ಅವರ ಒಳಗನ್ನು ತೆರೆದು ತೋರಿಸುತ್ತದೆ.

**ನೂತನ ಯಕ್ಷಗಾನ ಸಭಾಲಕ್ಷಣ ಮತ್ತು ಪ್ರಸಂಗ ಪೀಠಿಕೆ**

(ಯಕ್ಷಗಾನ ಬಯಲಾಟ ಮಾರ್ಗದರ್ಶಿ)

ಲೇಖಕರು : ಶ್ರೀ ಯಂ. ಡಿ. ಪಾಲ್ ಜಾಧವ್, ಮುಂಡೋಡು

ಪ್ರಕಾಶಕರು : ಶ್ರೀ ಮೂಕಾಂಬಿಕಾ ಪ್ರಕಾಶನ ಮುಂಡೋಡು, ಅಂಚೆ : ಉಳ್ಳೋಡಿ– 670321

ಪ್ರ. ಮು. 1989; ಪುಟಗಳು –96

ಇದು ಯಕ್ಷಗಾನದ ಪೂರ್ವರಂಗದ ಅಭ್ಯಾಸಕ್ಕಾಗಿ ಸಿದ್ಧಪಡಿಸಿದ ಪಠ್ಯಪುಸ್ತಕ. ಮುಖ್ಯವಾಗಿ ತೆಂಕುತಿಟ್ಟಿನ ಕ್ರಮಗಳನ್ನು ಆಧರಿಸಿ ವಿವರಣೆಗಳನ್ನು ನೀಡಲಾಗಿದೆ. ತೆಂಕುತಿಟ್ಟಿನ ಬಾಯಿತಾಳಗಳ ಅಥವಾ ನುಡಿಕಾರಗಳ ವಿವರಗಳು ಇದರಲ್ಲಿವೆ. ಪಾರ್ತಿಸುಬ್ಬ ನದೆಂದು ಪ್ರಸಿದ್ಧವಾಗಿರುವ ಯಕ್ಷಗಾನ ಸಭಾಲಕ್ಷಣವು ಈಗಾಗಲೇ ಚಾಲ್ತಿಯಲ್ಲಿರುವುದ ರಿಂದ ಅದನ್ನು ಅಷ್ಟಿಷ್ಟು ತಿದ್ದುಪಡಿ ಮಾಡಿಕೊಂಡು ರಚಿಸಲಾದ ಈ ಕೃತಿಯನ್ನು ನೂತನ ಯಕ್ಷಗಾನ ಸಭಾಲಕ್ಷಣವೆಂದು ಹೆಸರಿಸಲಾಗಿದೆ.

**ನೆಬ್ಬೂರಿನ ನಿನಾದ**

(ನೆಬ್ಬೂರು ನಾರಾಯಣ ಭಾಗವತರ ಆತ್ಮಕಥನ)

ಸಂಪಾದನೆ-ನಿರೂಪಣೆ : ಡಾ ಜಿ. ಎಸ್. ಭಟ್ಟ

ಪ್ರಕಾಶಕರು : ಶ್ರೀ ನೆಬ್ಬೂರರ ಷಷ್ಟ್ಯಬ್ಧ ಅಭಿನಂದನಾ ಸಮಿತಿ, ಸಿರ್ಸಿ-581401

ಪ್ರ. ಮು. 2007; ಪುಟಗಳು -24+135

ಪ್ರಸಿದ್ಧರಾದ ಬಡಗುತಿಟ್ಟಿನ ಹಿರಿಯ ಭಾಗವತರಲ್ಲಿ ನೆಬ್ಬೂರು ನಾರಾಯಣ ಭಾಗವತರು ಗಮನಾರ್ಹರು. ಪ್ರಸಿದ್ಧರಾದ ಹಿರಿಯ ವೇಷಧಾರಿಗಳೊಡನೆ ಹಲವಾರು ವರ್ಷಗಳ ಮೇಳದ ತಿರುಗಾಟದ ಅನುಭವವನ್ನುಳ್ಳವರು. ಬಡತನದ ಹಿನ್ನೆಲೆಯಲ್ಲಿ ಹುಟ್ಟಿ ಸ್ವಪರಿಶ್ರಮದಿಂದ ಮೇಲೆಬಂದವರು. ಇಡಗುಂಜಿ ಮೇಳದಲ್ಲಿ ಅವರು ಭಾಗವತರಾಗಿದ್ದ ಸಮಯವೆಂಬುದು ಮೇಳದ ಮತ್ತು ಯಕ್ಷಗಾನ ಕಲೆಯ ಉಚ್ಛ್ರಾಯ ಕಾಲವೆಂದೇ ಹೇಳಬೇಕು. ಬಡಗುತಿಟ್ಟಿನ ಯಕ್ಷಗಾನದ ಹೊಸಕಾಲದ ಇತಿಹಾಸದ ಮುಖ್ಯ ಘಟ್ಟದಲ್ಲಿ ನೆಬ್ಬೂರು ನಾರಾಯಣ ಭಾಗವತರು ಸಕ್ರಿಯವಾಗಿದ್ದುದರಿಂದ ಇಲ್ಲಿ ಹೇಳಲಾದ ಘಟನೆಗಳಿಗೆ ಮತ್ತು ನೀಡಲಾದ ಮಾಹಿತಿಗಳಿಗೆ ಅಧಿಕೃತತೆಯಿದೆ. ಕೆರೆಮನೆ ಶಿವರಾಮ ಹೆಗಡೆಯವರ ಆತ್ಮಕಥನವನ್ನು ದಾಖಲಿಸಿದ ಡಾ. ಜಿ. ಎಸ್. ಭಟ್ಟರು ಈ ಆತ್ಮಕಥನದ ನಿರೂಪಣೆಯನ್ನು ಬಹಳ ಸೊಗಸಾದ ರೀತಿಯಲ್ಲಿ ನಿರ್ವಹಿಸಿದ್ದಾರೆ.

**ಬಲ್ಲಿರೇನೈ ಭಾಗವತರ**

(ಶ್ರೀ ಕೃಷ್ಣ ಭಾಗವತ ಬಾಳೆಹದ್ದ ಅಭಿನಂದನ ಗ್ರಂಥ)

ಪ್ರಧಾನ ಸಂಪಾದಕರು : ಶ್ರೀ ಜಿ. ಟಿ. ಭಟ್ಟ, ಬೊಮ್ಮನಹಳ್ಳಿ

ಪ್ರಕಾಶಕರು: ಶ್ರೀ ಕೃಷ್ಣ ಭಾಗವತ ಬಾಳೆಹದ್ದ ಸಂಮಾನ ಸಮಿತಿ

ಶ್ರೀ ರಾಜೇಶ್ವರಿ ಯಕ್ಷಗಾನ ಸಂಸ್ಥೆ (ರಿ), ಮಂಚಿಕೇರಿ

ಯಲ್ಲಾಪುರ -581347(ಉತ್ತರ ಕನ್ನಡ)

ಪ್ರ. ಮು. 2005; ಪುಟಗಳು-12+196

ಉತ್ತರಕನ್ನಡದಲ್ಲಿ ಶ್ರೀ ಬಾಳೆಹದ್ದ ಕೃಷ್ಣ ಭಾಗವತರು ಯಕ್ಷಗಾನಕ್ಷೇತ್ರದಲ್ಲಿ ತುಂಬ ದುಡಿದವರು. ಇವರ ಅಭಿನಂದನಗ್ರಂಥದಲ್ಲಿ ಹಲವಾರು ಲೇಖನಗಳು ಇವರ ಬಗೆಗಿನ ವಿಷಯಗಳನ್ನು ನಿರೂಪಿಸಿದರೆ ಒಂದು ದೊಡ್ಡ ಲೇಖನವು ಆ ಭಾಗವತರು ಪರಿಶೋಧಿಸಿದ ಕೆಲವು ಯಕ್ಷಗಾನ ರಾಗಗಳನ್ನು ಗುರುತಿಸಿ ವಿವರಿಸಿದೆ. 76 ರಾಗಗಳ ವಿವರಗಳನ್ನು ಈ ಲೇಖನದಲ್ಲಿ ನೀಡಲಾಗಿದೆ. ಪುಸ್ತಕದಲ್ಲಿ ನೀಡಲಾದ ಭಾವಚಿತ್ರಗಳು ಭಾಗವತರ ಸಾಧನೆಗಳನ್ನು ತಿಳಿಯಲು ಸಹಕಾರಿಯಾಗಿವೆ.

**ಭಾಗವತ ನಾರಣಪ್ಪ ಉಪ್ಪೂರ**

ಲೇಖಕರು : ಪ್ರೊ. ಶ್ರೀಧರ ಉಪ್ಪೂರ

ಪ್ರಕಾಶಕರು : ದಿಗಂತ ಸಾಹಿತ್ಯ, ಮಂಗಳೂರು

ಪ್ರ. ಮು. 1998; ಪುಟಗಳು -44

ನಾರಣಪ್ಪ ಉಪ್ಪೂರರು ಉಡುಪಿ ತಾಲೂಕಿನ ಬೇರೆ ಬೇರೆ ಮೇಳಗಳಲ್ಲಿ ಸುಮಾರು 1937ರಿಂದ 1984ರವರೆಗೆ ಹಲವಾರು ವರ್ಷಗಳ ತಿರುಗಾಟದ ಅನುಭವವುಳ್ಳವರು. ಉತ್ತಮ ರಂಗನಿರ್ದೇಶಕರಾಗಿ ಅವರು ಪ್ರಸಿದ್ಧರು. ಉಪ್ಪೂರರ ಶೈಲಿಯೆಂದೇ ಪ್ರಸಿದ್ಧವಾದ ಯಕ್ಷಗಾನ ಭಾಗವತಿಕೆಯ ಕ್ರಮಕ್ಕೆ ಕಾರಣವಾದವರು. ಉಪ್ಪೂರರ ಸುಪುತ್ರರಾದ ಪ್ರೊ. ಶ್ರೀಧರ ಉಪ್ಪೂರರು ರಚಿಸಿದ ಈ ಪುಟ್ಟ ಪುಸ್ತಕದಲ್ಲಿ ಭಾಗವತ ನಾರಣಪ್ಪ ಉಪ್ಪೂರರ ಜೀವನ-ಸಾಧನೆಗಳ ಮುಖ್ಯಪರಿಚಯ ದೊರಕುತ್ತದೆ.

**ಮದ್ದಳೆಯ ಮಾಯಾಲೋಕ**

(ಹಿರಿಯಡಕ ಗೋಪಾಲರಾಯರ ನೆನಪುಗಳು)

ನಿರೂಪಣೆ : ಡಾ. ಕೆ.ಎಮ್. ರಾಘವ ನಂಬಿಯಾರ್

ಪ್ರಕಾಶಕರು : ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ,

ಎಂ. ಜಿ. ಎಂ ಕಾಲೇಜು ಆವರಣ, ಉಡುಪಿ– 576102

ಪ್ರ. ಮು. 1997; ಪುಟಗಳು–16+204

ಬಡಗುತಿಟ್ಟಿನ ಯಕ್ಷಗಾನಕ್ಷೇತ್ರದಲ್ಲಿ ಮದ್ದಳೆಗಾರರಾಗಿ ಪ್ರಸಿದ್ಧರಾಗಿರುವ ಹಿರಿಯಡಕ ಗೋಪಾಲರಾಯರು ಶತಮಾನವನ್ನು ಸಮೀಪಿಸುತ್ತಿರುವ ಅನುಭವಸಂಪನ್ನರು. ಡಾ. ಕೆ.ಎಮ್. ರಾಘವ ನಂಬಿಯಾರರು ಹಲವಾರು ಸಂದರ್ಶನ, ಟಿಪ್ಪಣಿ ಮತ್ತು ದಾಖಲಾತಿಗಳ ಮೂಲಕ ಗೋಪಾಲರಾಯರ ಅನುಭವಗಳನ್ನು ಒಟ್ಟುಸೇರಿಸಿ ಸಣ್ಣ ಸಣ್ಣ ನೆನಪಿನ ಘಟಕಗಳನ್ನು ನಿರೂಪಿಸಿ ಈ ಆತ್ಮಕಥನರೂಪದ ಪುಸ್ತಕವನ್ನು ರಚಿಸಿದ್ದಾರೆ. ಬಡಗುತಿಟ್ಟಿನ ಯಕ್ಷಗಾನದಲ್ಲಿ ಏರುಮದ್ದಳೆ ಎಂಬ ಒಂದು ವಿಶಿಷ್ಟಸ್ವರೂಪದ ಮದ್ದಳೆಯನ್ನು ಇಂದು ಎಲ್ಲೆಡೆಯಲ್ಲೂ ಕಾಣುತ್ತಿದ್ದೇವೆ. ಆದರೆ ಇದರ ಸೃಷ್ಟಿಕರ್ತರು ಗೋಪಾಲರಾಯರೆಂದು ಹಲವರಿಗೆ ತಿಳಿದಿಲ್ಲ ಆ ಮಾಹಿತಿ ಇದರಲ್ಲಿದೆ. ಯಕ್ಷಗಾನಕ್ಷೇತ್ರದಲ್ಲಿ ಆಸಕ್ತಿವಹಿಸಿದ, ದುಡಿದ, ಪ್ರೋತ್ಸಾಹಿಸಿದ ಮತ್ತು ಕಲಾವಿದರಾಗಿ ಸಾಧನೆ ಮಾಡಿದ ಹಲವಾರು ವ್ಯಕ್ತಿಗಳ ಸಾಂದರ್ಭಿಕಚಿತ್ರಣ ಈ ಪುಸ್ತಕದಲ್ಲಿದೆ. ಕಳೆದುಹೋದ ಕಾಲದ ಯಕ್ಷಗಾನದ ಸ್ವರೂಪವನ್ನು ಈ ಪುಸ್ತಕವು ಸೊಗಸಾಗಿ ದಾಖಲಿಸಿದೆ.

**ಮಂದಾರ**

(ರಸಋಷಿ ದಾಮೋದರ ಮಂಡೆಚ್ಚರ ಸಂಸ್ಮರಣ ಗ್ರಂಥ)

ಪ್ರಧಾನ ಸಂಪಾದಕರು : ಎಚ್. ಬಿ. ಎಲ್. ರಾವ್, ಮುಂಬಯಿ

ಸಹಸಂಪಾದಕರು : ಪೆರ್ಲ ಕೃಷ್ಣ ಭಟ್; ಡಾ. ಶ್ರೀನಿವಾಸ ಹಾವನೂರು.

ಪ್ರಕಾಶಕರು :ಪದವೀಧರ ಯಕ್ಷಗಾನ ಸಮಿತಿ (ರಿ.), ಮುಂಬಯಿ

ಪ್ರ. ಮು. 1996; ಪುಟಗಳು–14+183

ಮುಂಬಯಿಯಲ್ಲಿ ಪದವೀಧರ ಯಕ್ಷಗಾನ ಸಮಿತಿಯು ಹಲವಾರು ಯಕ್ಷಗಾನ ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿದ್ದು ಅವುಗಳ ಉಪನ್ಯಾಸಗಳನ್ನು ಒಟ್ಟಾಗಿ ಮುದ್ರಿಸಿ ಪ್ರಕಟಿಸುವ ಕ್ರಮವನ್ನಿರಿಸಿಕೊಂಡಿದೆ. 1985ರಲ್ಲಿ ಎರಡನೆಯ ಯಕ್ಷಗಾನಸಾಹಿತ್ಯ

ಸಮ್ಮೇಳನವು ನಡೆದು ಅದರಲ್ಲಿ ಭಾಗವಹಿಸಿದ್ದ ಹಿರಿಯ ಭಾಗವತ ದಾಮೋದರ ಮಂಡೆಚ್ಚರು ಸಮ್ಮೇಳನಸಂದರ್ಭದಲ್ಲಿಯೇ ದಿವಂಗತರಾದರು. ಸಮ್ಮೇಳನದ ಉಪನ್ಯಾಸ ಗಳ ದಾಖಲಾತಿಯುಳ್ಳ ಪುಸ್ತಕವು ದಾಮೋದರ ಮಂಡೆಚ್ಚರ ಸಂಸ್ಮರಣ ಲೇಖನಗಳನ್ನೂ ಹೊಂದಿಕೊಂಡು ಸಂಸ್ಮರಣಗ್ರಂಥವಾಗಿ ಹೊರಬಂತು. ಮಂದಾರ ಎಂಬುದು ರಸಋಷಿ ದಾಮೋದರ ಮಂಡೆಚ್ಚ ಎಂಬುದರ ಸಂಕ್ಷಿಪ್ತರೂಪ. ಇಲ್ಲಿರುವ ಮೂರು ಪದಗಳ ಮೊದಲ ಅಕ್ಷರಗಳನ್ನು ಎತ್ತಿಕೊಂಡು ಬಲದಿಂದ ಎಡಕ್ಕೆ ಓದಿದರೆ ಮಂದಾರ ಕಂಡು ಬರುತ್ತದೆ. ಈ ಪುಸ್ತಕದ ಮೊದಲ ಭಾಗದಲ್ಲಿ ಮಂಡೆಚ್ಚರ ಸ್ಮರಣೆಯಿದೆ.

**ಯಕ್ಷಕೋಗಿಲೆ**

(ಯಕ್ಷಗಾನ ಭಾಗವತ ದಾಸರಬೈಲು ಚನಿಯ ನಾಯ್ಕರ ನೆನಪಿನಲ್ಲಿ)

ಲೇಖಕರು : ನಾ. ಕಾರಂತ, ಪೆರಾಜೆ

ಪ್ರಕಾಶಕರು : ಯಕ್ಷಸೌರಭ, ಪುತ್ತೂರು, ಭಟ್ ಬಿಲ್ಡಿಂಗ್, ಏಳ್ಮುಡಿ, ಪುತ್ತೂರು 574201

ಪ್ರ. ಮು. 2004; ಪುಟಗಳು –10+100

ಸುಳ್ಯಪರಿಸರದಲ್ಲಿ ಹವ್ಯಾಸಿಕಲಾವಿದರಾಗಿಯೂ ವೃತ್ತಿಕಲಾವಿದರಾಗಿಯೂ ಪುರಾಣವಾಚನಕಾರರಾಗಿಯೂ ಭಾಗವತಿಕೆ ಮತ್ತು ಮದ್ದಳೆಗಾರಿಕೆಯ ಗುರುವಾಗಿಯೂ ಉತ್ತಮಕೃಷಿಕರಾಗಿಯೂ ಬಾಳಿಬದುಕಿದ ಭಾಗವತ ದಾಸರಬೈಲು ಚನಿಯ ನಾಯ್ಕರ ಬಗೆಗೆ ಅವರ ಹಲವಾರು ಒಡನಾಡಿಗಳು ಮತ್ತು ಪರಿಚಿತರು ಬರೆದ ಲೇಖನಗಳ ಒಂದು ಸಂಕಲನ ಯಕ್ಷಕೋಗಿಲೆ. ಯಾವುದರಲ್ಲಿಯೂ ತಾವಾಗಿ ಮುಂದೆ ಹೋಗದೆ ನಯ–ವಿನಯಗಳ ಸಾಕಾರಮೂರ್ತಿಯಾಗಿ ಹೆಸರು ಪಡೆದ ಚನಿಯ ನಾಯ್ಕರ ಹಲವು ಮುಖಗಳನ್ನು ಇಲ್ಲಿಯ ಲೇಖನಗಳು ತೆರೆದಿರಿಸಿವೆ. ಭಾಗವತರ ಮರಣವಾಗಿ ಕೆಲವು ವರ್ಷಗಳು ಕಳೆದ ಮೇಲೆ ಈ ಲೇಖನಸಂಕಲನ ಹೊರಬಂದಿದ್ದು ಅವರ ಕೊಡುಗೆಗಳ ಮತ್ತು ವ್ಯಕ್ತಿತ್ವದ ಸ್ಪಷ್ಟಚಿತ್ರಣ ಇಲ್ಲಿ ದೊರಕುತ್ತದೆ.

**ಯಕ್ಷಗಾನ ಅಧ್ಯಯನ**

ಲೇಖಕರು : ಭಾಗವತ ಎಮ್. ನಾರ್ಣಪ್ಪ ಉಪ್ಪೂರ

ಪ್ರಕಾಶಕರು : ಹಂಗಾರಕಟ್ಟೆ ಯಕ್ಷಗಾನ ಕಲಾ ಕೇಂದ್ರ (ರಿ.)

ಕೋಟ, ಅಂಚೆ ಐರೋಡಿ, ದ. ಕ.

ಪ್ರ. ಮು. 1978; ಪುಟಗಳು –26+190

ಬಡಗುತಿಟ್ಟಿನ ಪ್ರಸಿದ್ಧ ಭಾಗವತರಾದ ನಾರ್ಣಪ್ಪ ಉಪ್ಪೂರರು ತಮ್ಮ ಪರಿಸರದ ಬಡಗುತಿಟ್ಟಿನ ಸಾಂಪ್ರದಾಯಿಕ ಯಕ್ಷಗಾನದ ಹಿಮ್ಮೇಳದ ಪಠ್ಯಪುಸ್ತಕವನ್ನು ಈ ಹೆಸರಿನಲ್ಲಿ ರಚಿಸಿದ್ದಾರೆ. ಯಕ್ಷಗಾನದ ತಾಳಗಳು, ಗಣಪತಿ ಪೂಜೆ, ರಂಗಸ್ಥಳದ ಪೂರ್ವರಂಗದ ಪದ್ಯಗಳು, ಸ್ತ್ರೀವೇಷ ಕುಣಿತ, ಪೀಠಿಕೆ, ವಿವಿಧ ವೇಷಗಳ ಒಡ್ಡೋಲಗಗಳು ಇತ್ಯಾದಿ ವಿವರಗಳನ್ನು ನೀಡಲಾಗಿದೆ. ಬಡಗುತಿಟ್ಟಿನ ಹಿಮ್ಮೇಳದ ಅಧ್ಯಯನ ಮಾಡುವವರಿಗೆ

ಇದು ಮುಖ್ಯವಾದ ಪಠ್ಯಗ್ರಂಥವಾಗಿದೆ.

**ಯಕ್ಷಗಾನ ಕಲಾತಪಸ್ವಿ**

(ಬಲಿಪ ನಾರಾಯಣ ಭಾಗವತರ ಸಂಸ್ಮರಣಗ್ರಂಥ)

ಸಂಪಾದಕರು : ವಿದ್ವಾನ್ ಕಯ್ಯಾರ ಕಿಞ್ಞಣ್ಣ ರೈ, ಎಂ.ಎ.; ಕೃ. ಭ. ಪೆರ್ಲ, ವಿದ್ವಾನ್

ಪ್ರಕಾಶಕರು : ಯು. ಎಲ್.ರಾವ್, ಪ್ರಿನ್ಸಿಪಾಲ್

ಸ್ಟಾಫ್ ಟ್ರೈನಿಂಗ್ ಕಾಲೇಜ್ ಸಿಂಡಿಕೇಟ್ ಬ್ಯಾಂಕ್, ಲಿಮಿಟೆಡ್, ಉಡುಪಿ, ದಕ್ಷಿಣಕನ್ನಡ

ಪ್ರ. ಮು. 1968; ಪುಟಗಳು – 224

ತೆಂಕುತಿಟ್ಟಿನ ಪ್ರಸಿದ್ಧ ಭಾಗವತರಾಗಿದ್ದ ಹಿರಿಯ ಬಲಿಪ ನಾರಾಯಣ ಭಾಗವತರ ಸಂಸ್ಮರಣಗ್ರಂಥವಿದು. ಇದರ ಮೊದಲನೆಯ ಭಾಗದಲ್ಲಿ ಬಲಿಪರ ಜೀವನದ ಬಗೆಗಿನ ವಿವರಗಳಿವೆ. ಅದನ್ನು ಪೆರ್ಲ ಕೃಷ್ಣ ಭಟ್ಟರು ನಿರೂಪಿಸಿರುತ್ತಾರೆ. ಎರಡನೆಯ ಭಾಗದಲ್ಲಿ ಬಲಿಪರನ್ನು ಸಂಸ್ಮರಣೆ ಮಾಡುವ ಇಪ್ಪತ್ತೆರಡು ಲೇಖನಗಳಿವೆ. ಮೂರನೆಯ ಭಾಗದಲ್ಲಿ ಯಕ್ಷಗಾನಕ್ಕೆ ಸಂಬಂಧಿಸಿದ ಹತ್ತು ಅಧ್ಯಯನಪೂರ್ಣ ಲೇಖನಗಳಿವೆ. ಮುಂದೆ ಪ್ರಕಟಗೊಂಡ ಹಲವಾರು ಸಂಸ್ಮರಣಗ್ರಂಥ ಮತ್ತು ಅಭಿನಂದನಗ್ರಂಥಗಳಿಗೆ ವಿಶಿಷ್ಟವಾದ ಮಾದರಿಯಾಗಿ ಈ ಪುಸ್ತಕವು ಹೊರಬಂದುದನ್ನು ಗಮನಿಸಬಹುದು. ತೆಂಕುತಿಟ್ಟಿನ ಯಕ್ಷಗಾನ ಹೊಸರೂಪವನ್ನು ಪಡೆಯುವಲ್ಲಿ ಬಲಿಪರ ಕೊಡುಗೆ ಬಹಳವಿದೆ. ಆ ದೃಷ್ಟಿಯಿಂದ ಪರಿವರ್ತನೆಯ ಕಾಲದ ದಾಖಲೆಗಳು ಇಲ್ಲಿ ದೊರಕುತ್ತದೆ.

**ಯಕ್ಷಗಾನ ಕೈಪಿಡಿ**

(ಯಕ್ಷಗಾನ ಕಲೆಯ ಅಂಗಾಂಗಗಳ ಪರಿಚಯಾತ್ಮಕ)

ಲೇಖಕರು : ಕೃಷ್ಣ ಭಂಡಾರಿ, ಸ್ವರ್ಣವಲ್ಲಿ, ಸೋಂದಾ

ಪ್ರಕಾಶಕರು :ವೆಂಕಟ್ರಮಣ ಪರಮಯ್ಯ ಹೆಗಡೆ, ವಾಜಗದ್ದೆ

ಪ್ರ. ಮು. 1956; ಪುಟಗಳು –22+132

ಯಕ್ಷಗಾನ ಸಭಾಲಕ್ಷಣಕ್ಕೆ ಸಮಾನವಾದ ಒಂದು ಪುಸ್ತಕವಿದು. ಉತ್ತರ ಕನ್ನಡದ ಯಕ್ಷಗಾನದ ಬಗೆಗೆ ಉತ್ತಮ ಅಧ್ಯಯನವುಳ್ಳ ಲೇಖಕರು ಮೊದಲಿಗೆ ನಾದಲಕ್ಷಣ, ಸ್ವರೋತ್ಪತ್ತಿ, ರಾಗೋತ್ಪತ್ತಿ, ರಾಗವಿಸ್ತಾರ, ನಾಟ್ಯೋತ್ಪತ್ತಿ, ನಾಟ್ಯಭೇದ, ತಾಳನಾಮಗಳು, ಶ್ರುತಿಲಕ್ಷಣ, ಸಭಾಲಕ್ಷಣ, ನಾಟ್ಯಕ್ರಮ ಮುಂತಾದ ವಿವರಗಳನ್ನು ನಾಟ್ಯಶಾಸ್ತ್ರಗ್ರಂಥಗಳ ಆಧಾರದಿಂದ ಶ್ಲೋಕಾನುವಾದಸಹಿತವಾಗಿ ನೀಡಿದ್ದಾರೆ. ಸರ್ಪತಾಳಗಳ ಕೋಷ್ಟಕಗಳನ್ನೂ ಪೂರ್ವರಂಗದ ಪದ್ಯಗಳನ್ನೂ ವೇಷ ಹೊರಡಿಸುವ ಕ್ರಮಗಳನ್ನೂ ಮಂಗಳಾಚರಣೆಯ ಪದ್ಧತಿಗಳನ್ನೂ ವಿವರವಾಗಿ ನೀಡಿದ್ದಾರೆ. ಸಮಕಾಲೀನ ಯಕ್ಷಗಾನದ ಪದ್ಧತಿಯಿಂದ ಹಲವು ವಿಷಯಗಳನ್ನು ಗ್ರಹಿಸಿಕೊಂಡು ಯಕ್ಷಗಾನದ ಕೆಲವು ನಿಯಮಗಳನ್ನೂ ಹೇಳಿದ್ದಾರೆ. ಒಟ್ಟಿನಲ್ಲಿ ಯಕ್ಷಗಾನದ ಬಗೆಗೆ ಶಾಸ್ತ್ರೀಯ ನಿರೂಪಣೆಯನ್ನು ಮಾಡಲು ಪ್ರಯತ್ನಿಸಿದ ಪುಸ್ತಕವಿದೆನ್ನಬಹುದು.

**ಯಕ್ಷಗಾನ ಛಂದಸ್ಸು**

ಲೇಖಕರು : ಕ. ಪು. ಸೀತಾರಾಮ ಕೆದಿಲಾಯ

ಪ್ರಕಾಶಕರು : ಕ. ಪು. ಸೀತಾರಾಮ ಕೆದಿಲಾಯ

ಪ್ರ. ಮು. 1964; ಪುಟಗಳು 48

ಯಕ್ಷಗಾನ ಛಂದಸ್ಸಿನ ಬಗೆಗೆ ಬಂದ ಮೊತ್ತಮೊದಲ ಪುಸ್ತಕವಿದು. ಯಕ್ಷಗಾನದ ಛಂದೋಬಂಧಗಳ ಬಗೆಗೆ ಅಲ್ಲಲ್ಲಿ ಕೆಲವು ಉಲ್ಲೇಖಗಳು ಮತ್ತು ಸಾಂದರ್ಭಿಕ ವಿವೇಚನೆಗಳ ಹೊರತು ಹೆಚ್ಚಿನ ವಿವರಗಳು ಬಂದಿರದ ಸಂದರ್ಭದಲ್ಲಿ ಆ ಪದ್ಯಬಂಧಗಳ ಸಾಮಾನ್ಯಸ್ವರೂಪವನ್ನು ತಿಳಿಸಿ ನಿರೂಪಿಸಲು ಮಾಡಿದ ಪ್ರಯತ್ನ ಈ ಪುಸ್ತಕ. ಪದ್ಯಗಳ ಗಣವಿಂಗಡನೆ ಮಾಡಿ ಮಾತ್ರಾಗಣ–ಅಂಶಗಣಗಳನ್ನು ಗುರುತಿಸಿ ವಿವರಿಸಲಾಗಿದೆ. ಛಂದೋಬಂಧಗಳ ಬಗೆಗಿನ ಹೆಚ್ಚಿನ ವಿಶ್ಲೇಷಣೆ ಈ ಪುಸ್ತಕದಲ್ಲಿರುವುದಿಲ್ಲ.

**ಯಕ್ಷಗಾನ ಛಂದಸ್ಸು : ಒಂದು ಅಧ್ಯಯನ**

ಲೇಖಕರು : ಡಾ। ಕಬ್ಬಿನಾಲೆ ವಸಂತ ಭಾರದ್ವಾಜ

ಪ್ರಕಾಶಕರು : ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ

ಎಂ.ಜಿ.ಎಂ. ಕಾಲೇಜು, ಉಡುಪಿ

ಪ್ರ. ಮು. 1998; ಪುಟಗಳು –14+258

1996ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲ್ಪಟ್ಟ ಪಿ.ಎಚ್‌ಡಿ. ನಿಬಂಧದ ಪುಸ್ತಕರೂಪವಿದು. ಕನ್ನಡದಲ್ಲಿ ಬಳಕೆಗೊಂಡ ನಾನಾ ಛಂದೋರೂಪಗಳ ವಿವೇಚನೆಯನ್ನು ಹಲವಾರು ವಿದ್ವಾಂಸರು ಮಾಡಿದ್ದರೂ ಯಕ್ಷಗಾನದ ವಿವಿಧ ಛಂದೋರೂಪಗಳು ವಿಸ್ತೃತವಿವೇಚನೆಗೆ ಒಳಗಾಗದೆ ಉಳಿದಿದ್ದುವು. ಅವನ್ನು ಮೊದಲಬಾರಿಗೆ ವಿವರವಾಗಿ ಅಧ್ಯಯನಕ್ಕೆ ಒಳಪಡಿಸಿದವರು ಡಾ। ಕಬ್ಬಿನಾಲೆ ವಸಂತ ಭಾರದ್ವಾಜರು. ಯಕ್ಷಗಾನ ಛಂದಸ್ಸಿಗೆ ಸಂಬಂಧಪಟ್ಟ ವಿಸ್ತೃತವಿವೇಚನೆಯುಳ್ಳ ಪ್ರಥಮ ಮುದ್ರಿತಕೃತಿ ಇದುವೆ ಆಗಿದೆ. ಈ ಅಧ್ಯಯನದ ಹಿನ್ನೆಲೆಯಿಂದ ದಾಸಸಾಹಿತ್ಯ ಮತ್ತು ಹೊಸಗನ್ನಡ ನವೋದಯಕಾಲದ ವೈವಿಧ್ಯಪೂರ್ಣವಾದ ಛಂದೋಬಂಧಗಳನ್ನು ವಿವರಿಸಲು ಸಾಧ್ಯವಾಗಿದೆ. ಡಾ. ಎನ್. ನಾರಾಯಣ ಶೆಟ್ಟಿಯವರ ಯಕ್ಷಗಾನಛಂದೋಂಬುಧಿ ಪ್ರಕಟಗೊಳ್ಳುವ (2005) ಮೊದಲೇ ಈ ಗ್ರಂಥ ಪ್ರಕಟಗೊಂಡಿದ್ದರೂ ಗ್ರಂಥಕಾರರು ಯಕ್ಷಗಾನಛಂದೋಂಬುಧಿಯ ಹಸ್ತಪ್ರತಿಯನ್ನು ಮತ್ತು ಡಾ. ನಾರಾಯಣ ಶೆಟ್ಟಿಯವರ ಅಭಿಪ್ರಾಯಗಳನ್ನು ಸಾಕಷ್ಟು ಬಳಸಿಕೊಂಡಿದ್ದಾರೆ. ಕನ್ನಡ ಛಂದಸ್ಸಿನ ಅಧ್ಯಯನವನ್ನು ಸಾಕಷ್ಟು ವಿಸ್ತಾರಗೊಳಿಸಿದ ಹಿರಿಮೆ ಈ ಗ್ರಂಥಕ್ಕಿದೆ.

**ಯಕ್ಷಗಾನ ಛಂದೋಗತಿ**

ಲೇಖಕರು : ಡಾ. ಕಬ್ಬಿನಾಲೆ ವಸಂತ ಭಾರದ್ವಾಜ

ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪ್ರ. ಮು. 2000; ಪುಟಗಳು 2+32

ಯಕ್ಷಗಾನಪ್ರಸಂಗಗಳಲ್ಲಿರುವ ಅಕ್ಷರಛಂದೋಬಂಧ, ಮಾತ್ರಾಛಂದೋಬಂಧ ಮತ್ತು ತ್ರಿಮೂರ್ತಿಗಣ ಛಂದೋಬಂಧಗಳ ಸಾಮಾನ್ಯ ಪರಿಚಯವನ್ನು ನಿರೂಪಿಸುವ ಪುಟ್ಟ ಪುಸ್ತಿಕೆಯಿದು. ಕನ್ನಡ ಕಾವ್ಯಗ್ರಂಥಗಳಲ್ಲಿ ಕಂಡುಬಾರದೆ ಯಕ್ಷಗಾನದಲ್ಲಿ ಮಾತ್ರ ಕಂಡು ಬರುವ ಹೆಚ್ಚಿನ ಎಲ್ಲ ಪದ್ಯಲಕ್ಷಣಗಳನ್ನು ಈ ಪುಸ್ತಕದಲ್ಲಿ ನೀಡಲಾಗಿದೆ.

**ಯಕ್ಷಗಾನ ಛಂದೋಂಬುಧಿ**

ಲೇಖಕರು : ಡಾ. ಯನ್. ನಾರಾಯಣ ಶೆಟ್ಟಿ, ಡಿ. ಲಿಟ್

ಪ್ರಕಾಶಕರು:ಯಕ್ಷ ಕಲಾಪ್ರಧ್ಮಾಪನ ಪ್ರಕಾಶನ, ಎಳತ್ತೂರು, ಕಿನ್ನಿಗೋಳಿ –574150

ಪ್ರ. ಮು. 2005; ಪುಟಗಳು –19+475

ಯಕ್ಷಗಾನ ಛಂದಸ್ಸಿನ ಬಗೆಗಿನ ವಿಸ್ತೃತ ವಿವರಗಳುಳ್ಳ ಸೂತ್ರಗ್ರಂಥ; ಹಾಗೆಯೇ ಸಂಶೋಧನಾತ್ಮಕ ಗ್ರಂಥ. ಯಕ್ಷಗಾನ ಛಂದೋಬಂಧಗಳನ್ನು ಲಕ್ಷಣಲಕ್ಷ್ಯ ಸಮವಾಯ ರೂಪದಲ್ಲಿ ನಿರೂಪಿಸಿ ಕಂದಪದ್ಯಗಳಲ್ಲಿ ವೃತ್ತಿಯನ್ನು ಬರೆಯಲಾಗಿದೆ. ಅಲ್ಲಲ್ಲಿ ವಿವರಣೆಗಳನ್ನು ನೀಡಲಾಗಿದೆ. ಪರಿಭಾಷಾನಿಬಿಡವಾದ ಈ ಕೃತಿಯಲ್ಲಿ ಗಣಸ್ತರಪ್ರಕರಣ, ತಾಳಪ್ರಕರಣ, ಛಂದಃಪ್ರಕರಣ, ಪ್ರಸ್ತಾರಪ್ರಕರಣ, ಸೂತ್ರಪ್ರಕರಣ, ನವನೀತಪ್ರಕರಣ, ಸಂಕೀರ್ಣಪ್ರಕರಣ –ಎಂಬ ಏಳು ಪ್ರಕರಣಗಳಿವೆ. ನವನೀತಪ್ರಕರಣದಲ್ಲಿ ಹೊಸತಾದ ಹಲವು ಛಂದೋಬಂಧಗಳನ್ನು ರಚಿಸಿ ಲಕ್ಷಣ ನೀಡಲಾಗಿದೆ. ಛಂದಸ್ಸಿನ ಅಧ್ಯಯನರೂಪದ ಗ್ರಂಥಗಳು ಬೇರೆ ಬಂದಿದ್ದರೂ ಈ ರೀತಿ ಸೂತ್ರರೂಪದಲ್ಲಿ ಸಾಂಪ್ರದಾಯಿಕ–ಶಾಸ್ತ್ರೀಯ ಪದ್ಧತಿಯಲ್ಲಿ ನಿರೂಪಿಸುವ ಗ್ರಂಥಗಳಲ್ಲಿ ಇದೇ ಮೊದಲನೆಯದು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಡಿ. ಲಿಟ್, ಪದವಿ ದೊರಕಿದ ಗ್ರಂಥವಿದಾಗಿದೆ.

**ಯಕ್ಷಗಾನ ಛಂದೋವಿವೇಕ**

ಲೇಖಕರು : ಕ.ಪು. ಸೀತಾರಾಮ ಕೆದಿಲಾಯ

ಪ್ರಕಾಶಕರು : ಭಾರದ್ವಾಜ ಪ್ರಕಾಶನ, ಕದಿರೆ, ಮಂಗಳೂರು

ಪ್ರ. ಮು. 1987; ಪುಟಗಳು –80

ವೃತ್ತಗಳು, ಷಟ್ಪದಿಗಳು, ಮಾತ್ರಾಗಣದ ಬಂಧಗಳು ಮತ್ತು ತ್ರಿಮೂರ್ತಿಗಣ (ಅಂಶಗಣ)ದ ವಿವಿಧ ಬಂಧಗಳನ್ನು ಗಣವಿಂಗಡಣೆಮಾಡಿ ನಿರೂಪಿಸಿದೆ. ತಾಳದ ಪದ್ಯಗಳಿಗೆ ರಾಗತಾಳಗಳ ಹೆಸರುಗಳನ್ನು ಛಂದಸ್ಸಿನ ಹೆಸರಾಗಿ ನೀಡಿದೆ. ಅತೀತಾಕ್ಷರ, ವರಣ, ಅನುಪದ, ಶಿಖಾಪದ, ಮೊದಲಾದ ವಿಶಿಷ್ಟ ಸಂಜ್ಞೆಗಳ ವಿವರ ಮೊದಲಿಗಿದೆ.

**ಯಕ್ಷಗಾನ ತೆಂಕುತಿಟ್ಟಿನ ಚೆಂಡೆವಾದನ ಕ್ರಮ**

ಲೇಖಕರು : ಬಿ. ಗೋಪಾಲಕೃಷ್ಣ ಕುರುಪ್

ಪ್ರಕಾಶಕರು : ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ

ಪ್ರ. ಮು. 1998; ಪುಟಗಳು –98

ತೆಂಕುತಿಟ್ಟಿನ ಚೆಂಡೆವಾದನದ ಪಠ್ಯಪುಸ್ತಕ. ಈ ಪುಸ್ತಕವನ್ನೂ ಮದ್ದಳೆವಾದನ ಕ್ರಮದ

ಬಗೆಗೆ ಗೋಪಾಲಕೃಷ್ಣ ಕುರುಪ್ ಅವರು ಬರೆದ ಪುಸ್ತಕವನ್ನೂ ಒಟ್ಟಿಗಿರಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

**ಯಕ್ಷಗಾನ ತೆಂಕುತಿಟ್ಟಿನ ಮದ್ದಳೆವಾದನ ಕ್ರಮ**

ಲೇಖಕರು : ಬಿ. ಗೋಪಾಲಕೃಷ್ಣ ಕುರುಪ್

ಸಂಪಾದಕ : ಕೆ. ಎಂ. ರಾಘವ ನಂಬಿಯಾರ್

ಪ್ರಕಾಶಕರು : ಯುವಕ ಮಂಡಲ (ರಿ) ಸಾಣೂರು

ಪ್ರ. ಮು. 1995; ಪುಟಗಳು –78

ಮದ್ದಳೆವಾದನದ ಪಠ್ಯಪುಸ್ತಕ. ಪ್ರಾಥಮಿಕ ನಾದಗಳ ಪಾಠದಿಂದ ತೊಡಗಿ ವಿವಿಧ ತಾಳಗಳು, ಮುಕ್ತಾಯಗಳು ಇವುಗಳ ನುಡಿತಗಳು ಮತ್ತು ಅವುಗಳ ಲೆಕ್ಕಾಚಾರಗಳನ್ನು ಕೊಟ್ಟಿದೆ.

**ಯಕ್ಷಗಾನ ಪಾಠಗಳು**

ಲೇಖಕರು : ಭಾಗವತ ನೀಲಾವರ ರಾಮಕೃಷ್ಣಯ್ಯ

ಪ್ರಕಾಶಕರು : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

ಪ್ರ. ಮು. 1978; ಪುಟಗಳು –12+76

ಉಡುಪಿಯ ಯಕ್ಷಗಾನ ಕೇಂದ್ರಕ್ಕಾಗಿ ಸಿದ್ಧಪಡಿಸಿದ ಯಕ್ಷಗಾನದ ಹಿಮ್ಮೇಳದ (ಮತ್ತು ಮುಮ್ಮೇಳದ ಕೂಡಾ) ಪಠ್ಯಪುಸ್ತಕವಿದು. ಉಡುಪಿಯ ಯಕ್ಷಗಾನ ಕೇಂದ್ರದಲ್ಲಿ ಬಡಗುತಿಟ್ಟಿನ ಯಕ್ಷಗಾನದ ಅಧ್ಯಯನವನ್ನು ಮಾಡಿಸಲಾಗುತ್ತದೆ. ಅದಕ್ಕೆ ಸಂಬಂಧಿಸಿದಂತೆ ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ.

**ಯಕ್ಷಗಾನ ಪೂರ್ವರಂಗ ತರಬೇತಿ**

ಲೇಖಕರು : ಸಂ. ಸಬ್ಬಣಕೋಡಿ ರಾಮ ಭಟ್ಟ

ಲೇಖಕರೇ ಪ್ರಕಾಶಕರು

ಪ್ರಮು. 1992 (ದ್ವಿ 1999) ; ಪುಟಗಳು –32

ತೆರೆಪೂಜೆ, ಕೋಡಂಗಿ, ಬಾಲಗೋಪಾಲ, ಮುಖ್ಯ ಸ್ತ್ರೀವೇಷ, ಹಾಸ್ಯಗಾರ, ಪಾಂಡವರ ಒಡ್ಡೋಲಗ, ರಂಗಸ್ಥಳ ಹಾಕುವ ದಿಕ್ಕು, ಪೀಠಿಕೆ ಸ್ತ್ರೀವೇಷ, ಶ್ರೀಕೃಷ್ಣನ ಒಡ್ಡೋಲಗ, ರಾಮಲಕ್ಷ್ಮಣರ ತೆರೆಕುಣಿತ, ಸಪ್ತತಾಳಗಳ ಹೆಜ್ಜೆ, ಸಭಾಕ್ಲಾಸು –ಈ ವಿವರಗಳನ್ನುಳ್ಳ ಪಠ್ಯಪುಸ್ತಕವಿದು.

**ಯಕ್ಷಗಾನ ಬಲ್ಲಿರೇನಯ್ಯಾ?**

ಲೇಖಕರು : ದುಗ್ಗಪ್ಪ ಯು. ಮಲ್ಪೆ

ಪ್ರಕಾಶಕರು : ಪಯಸ್ವಿನಿ, ಮಲ್ಪೆ, ಉಡುಪಿ–576108

ಪ್ರ. ಮು. 2008; ಪುಟಗಳು –8+59

ಯಕ್ಷಗಾನದ ಪ್ರಾಥಮಿಕ ಮಾಹಿತಿಗಳನ್ನು ನೀಡುವ ಪುಸ್ತಕ. ಸಪ್ತತಾಳಗಳ ವಿವರಗಳೊಂದಿಗೆ ಪೀಠಿಕಾ ಸ್ತ್ರೀವೇಷ, ಚಾಲು ಕುಣಿತ, ರಾಜವೇಷದ ಒಡ್ಡೋಲಗ, ಬಣ್ಣದ ವೇಷದ ಒಡ್ಡೋಲಗ, ಕೃಷ್ಣ ಒಡ್ಡೋಲಗ, ಪ್ರಯಾಣದ ಕುಣಿತ ಇವುಗಳ ವಿವರಗಳನ್ನು ಹಿಮ್ಮೇಳಕ್ಕೆ ಸಂಬಂಧಿಸಿದ ಬಾಯಿತಾಳಗಳ ಅಥವಾ ನುಡಿಕಾರಗಳ ನಿರೂಪಣೆಯೊಂದಿಗೆ ಕೊಡಲಾಗಿದೆ. ಇತರ ಕೆಲವು ಮಾಹಿತಿಗಳು ಸೇರಿವೆ.

**ಯಕ್ಷಗಾನ ಭಾಗವತನೊಬ್ಬನ ಅನುಭವಗಳು**

ಲೇಖಕರು : ಶ್ರೀ ಕೋಟ ಶ್ರೀನಿವಾಸ ನಾಯಕ್

ಪ್ರಕಾಶಕರು : ಶ್ರೀ ಕೋಟ ಶ್ರೀನಿವಾಸ ನಾಯಕ್, ಕುಂದಾಪುರ

ಪ್ರ. ಮು. 1977; ಪುಟಗಳು –10+222

ಆತ್ಮಕಥೆಯ ರೀತಿಯ ಬರವಣಿಗೆ ಈ ಕೃತಿಯಲ್ಲಿದೆ. 1971–72ರಲ್ಲಿ ಬರೆದುದು. ಶಿವರಾಮ ಕಾರಂತರ ಮುನ್ನುಡಿ. ಬಡಗುತಿಟ್ಟಿನ ಯಕ್ಷಗಾನ ಹಳೆಯ ಸ್ಥಿತಿಗತಿಗಳನ್ನು ಅನುಭವ ಮಾಡಿಕೊಳ್ಳಬಹುದಾದ ಬರವಣಿಗೆಯಿದು. ಯಕ್ಷಗಾನ ಭಾಗವತರು ತಮ್ಮ ಆತ್ಮಕಥೆಯನ್ನು ತಾವೇ ಹೇಳಿಕೊಂಡುದಿಲ್ಲ; ಇತರರು ನಿರೂಪಣೆ ಮಾಡಿ ಗ್ರಂಥಗಳು ಹೊರಬಂದುದುಂಟು. ಇಲ್ಲಿ ಹಳೆಯ ಭಾಗವತರೊಬ್ಬರು ತಮ್ಮ ಅನುಭವಗಳ ನಿರೂಪಣೆಯನ್ನು ನೇರವಾಗಿ ಮಾಡಿದ್ದಾರೆ. ಮೇಳಗಳ ಸ್ವರೂಪರಚನೆ ಹಿಂದೆ ಹೇಗಿತ್ತೆಂಬುದನ್ನು ಈ ಪುಸ್ತಕದ ಮೂಲಕ ತಿಳಿದುಕೊಳ್ಳಬಹುದು. ಒಂದು ಮೇಳಕ್ಕೆ ಬೇಕಾಗುವ ಸಮಗ್ರ ಸಾಮಾನು ಸಲಕರಣೆಗಳ ಪಟ್ಟಿಯೂ ಇದರಲ್ಲಿದೆ.

**ಯಕ್ಷಗಾನ ಸಂಗೀತ**

ಲೇಖಕರು : ಪ್ರೊ .ಎಮ್. ರಾಜಗೋಪಾಲಾಚಾರ್ಯ

ಪ್ರಕಾಶಕರು : 1. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

ಪ್ರ. ಮು. 1977; ಪುಟಗಳು –10+202

ದ್ವಿ. ಮು. 1995; ಪುಟಗಳು –10+184

ಯಕ್ಷಗಾನ ಸಂಗೀತದ ಸಮಗ್ರ ವಿವೇಚನೆಯುಳ್ಳ ಈ ಗ್ರಂಥವು ಈ ಬಗೆಗಿನ ಮೊತ್ತಮೊದಲ ಆಕರಗ್ರಂಥ. ಯಕ್ಷಗಾನಸಂಗೀತ, ತಾಳಪ್ರಕರಣ, ರಾಗಲಕ್ಷಣಗಳು ಎಂಬ ಮೂರು ಭಾಗಗಳಲ್ಲಿ ಇಲ್ಲಿಯ ನಿರೂಪಣೆಯಿದೆ. ಶಾಸ್ತ್ರೀಯವಾದ ಬರವಣಿಗೆಯ ವಿಧಾನದಲ್ಲಿ ಸಂಗೀತ ವಿವೇಚನೆಯಿದೆ. ಯಕ್ಷಗಾನರಾಗಗಳನ್ನು ಲಕ್ಷಣಬದ್ಧವಾಗಿ ನಿರೂಪಣೆಮಾಡಿ ಈ ಕೃತಿಯಲ್ಲಿ ತೋರಿಸಲಾಗಿದೆ.

**ಯಕ್ಷಗಾನ ಲಕ್ಷಣ**

ಲೇಖಕರು : ಹೊಸ್ತೋಟ ಮಂಜುನಾಥ ಭಟ್ಟ (ಅಪ್ರಕಟಿತ ಕೃತಿ)

ಪುಟಗಳು 282 (ಕೈಬರಹದಲ್ಲಿ)

ಹೊಸ್ತೋಟ ಮಂಜುನಾಥ ಭಟ್ಟರು ಯಕ್ಷಗಾನದ ಎಲ್ಲ ಕ್ರಮಗಳನ್ನು ಬರೆದು

ಸಿದ್ಧಪಡಿಸಿದ ಗ್ರಂಥ ಯಕ್ಷಗಾನಲಕ್ಷಣ. ಯಕ್ಷಗಾನದ ಪಠ್ಯಪುಸ್ತಕದಂತಿರುವ ಈ ಅಪ್ರಕಟಿತ ಕೃತಿಯ ಕುರಿತು ಅಧ್ಯಯನ ಮಾಡಿದ ಡಾ. ಕಬ್ಬಿನಾಲೆ ವಸಂತ ಭಾರದ್ವಾಜರು ಈ ಪುಸ್ತಕದ ಬಗೆಗೆ ಹೇಳಿದ ಮಾತುಗಳು ಹೀಗಿವೆ : ಶ್ರೀಮಾನ್ ಹೊಸ್ತೋಟ ಮಂಜುನಾಥ ಭಾಗವತರ ಯಕ್ಷಗಾನಲಕ್ಷಣ ಯಕ್ಷಗಾನ ಲಯ-ಸ್ವರ-ಸಾಹಿತ್ಯಗಳ ಅಭ್ಯಾಸಕ್ರಮ ವನ್ನೊಳಗೊಂಡ ಒಂದು ವೈದುಷ್ಯಪೂರ್ಣ ಕೃತಿ. ಯಕ್ಷಗಾನದ ತಾಳ-ರಾಗ-ಛಂದಸ್ಸುಗಳ ಕ್ರಮಾಗತ ವಿವೇಚನೆಗಾಗಿ ಇಲ್ಲಿ ಲಯ-ಸ್ವರ-ಸಾಹಿತ್ಯಗಳನ್ನು ವಿಶ್ಲೇಷಿಸಲಾಗಿದೆ. ಲಯಶಬ್ದ ವಿವೇಚನೆಯಿಂದ ತೊಡಗಿ ಲಯಾಭ್ಯಾಸ, ಲಯಸಾಧನೆ, ತಾಳವಿನ್ಯಾಸಗಳು, ಅವುಗಳ ನಡೆ, ಘಾತ, ಮುರಿತ, ಮುಕ್ತಾಯ, ರಾಗಗಳ ಆರೋಹ-ಅವರೋಹ, ಪದ್ಯಬಂಧಗಳ ಮೇಲೆ ಅಕ್ಷರವೃತ್ತ ಮತ್ತು ಜಾನಪದ ಹಾಡುಗಳ ಪ್ರಭಾವ, ಮದ್ದಳೆಯ ನುಡಿಗಟ್ಟು ಮತ್ತು ವಿವಿಧ ಮಟ್ಟಗಳ ಸಂಕಲನ ಎಂದು ಮುಂತಾಗಿ ಸಾಗುವ ಇಲ್ಲಿಯ ವಸ್ತುವಿವೇಚನೆ, ಯಕ್ಷಗಾನಾಭ್ಯಾಸಿಗಳಿಗೆ ಒಂದು ಪಠ್ಯ ಪುಸ್ತಕವೆನಿಸಬಲ್ಲ ಯೋಗ್ಯತೆಯನ್ನು ಪಡೆದಿದೆ. ಯಕ್ಷಗಾನಲಕ್ಷಣ ಒಂದು ರೀತಿಯಿಂದ ಯಕ್ಷಗಾನದ ವಿವಿಧ ಅಂಗೋಪಾಂಗಗಳ ವಿವೇಚನಾ ಕೃತಿ. ಹಾಡು ಹೇಗಿರಬೇಕು? ಮದ್ದಳೆ ನುಡಿಸುವುದು ಹೇಗೆ? ರಾಗ-ತಾಳಗಳ ಮೈತ್ರಿ ಹೇಗೆ? ನೃತ್ಯ-ಅಭಿನಯಗಳು ಸಾಕಾರಗೊಳ್ಳುವುದೆಂತು? ಮುಂತಾದ ಚಿಂತನೆಗಳು ಇಲ್ಲಿ ಮಡುಗಟ್ಟಿವೆ. ಯಕ್ಷಗಾನದ ರಂಗಸ್ಥಳ ಮತ್ತು ತಾಳ ಮದ್ದಳೆಗಳಲ್ಲಿ ಮಾತು ಹೇಗೆ ಬೇರೆ ಬೇರೆಯಾಗಿರಬೇಕು ಎಂಬುದನ್ನೂ ಅವರು ವಿವೇಚಿಸುತ್ತಾರೆ. ರಂಗದಲ್ಲಿ ಪದ್ಯದ ಇಮ್ಮಡಿ ಸಮಯ ಅರ್ಥಹೇಳುವುದಕ್ಕಿದ್ದರೆ, ತಾಳಮದ್ದಳೆಯಲ್ಲಿ ಪದ್ಯದ ನಾಲ್ಕು ಪಟ್ಟು ಅವಧಿ ಬೇಕೆಂಬ ಅದರ ಕಾಲಮಿತಿ ಚಿಂತನೆ ಅಪೇಕ್ಷಣೀಯ. ಮದ್ದಳೆವಾದನ, ಪದ್ಯದ ಮಟ್ಟುಗಳ ಖಾಚಿತ್ಯ ಮುಂತಾದ ವಿಚಾರಗಳನ್ನೊಳಗೊಂಡ ಈ ಕೃತಿ ಯಕ್ಷಗಾನ ವ್ಯವಸಾಯಿಗೆ ಒಂದು ಉತ್ತಮ ಕೈಪಿಡಿಯಾಗಬಲ್ಲುದು.

**ಯಕ್ಷಗಾನ ಸಭಾಲಕ್ಷಣ ಮತ್ತು ಪ್ರಸಂಗಪೀಠಿಕೆ**

ಲೇಖಕರು : ಪಾರ್ತಿಸುಬ್ಬ

ಯಕ್ಷಗಾನದ ರಂಗಪ್ರಯೋಗದ ಪದ್ಧತಿಗಳನ್ನು ತಿಳಿಸುವ ಏಕೈಕ ಆಧಾರಗ್ರಂಥ. ಪಾರ್ತಿಸುಬ್ಬನ ರಚನೆ ಎಂದು ಪ್ರಸಿದ್ಧವಾಗಿದೆ. ಹಲವುಗ್ರಂಥಗಳಿಂದ ವಿಷಯಗಳನ್ನು ತೆಗೆದುಕೊಂಡು ಸಂಕಲಿಸಿ ಈ ಪುಸ್ತಕದಲ್ಲಿ ನೀಡಲಾಗಿದೆ. ಯಕ್ಷಗಾನದ ಎಲ್ಲ ವಿಷಯಗಳ ಬಗೆಗೆ ಇದೊಂದು ಆಧಾರಗ್ರಂಥವಲ್ಲ. ಈ ಗ್ರಂಥವು ಹಲವು ಬಾರಿ ಮುದ್ರಿತವಾಗಿದ್ದು ಬೇರೆ ಬೇರೆ ಸಂದರ್ಭಗಳಲ್ಲಿ ಪರಿಷ್ಕಾರಗೊಂಡಂತೆ ತಿಳಿಯುತ್ತದೆ. ಸಭಾಲಕ್ಷಣ ಎಂಬುದಾಗಿ ಮಾತ್ರ ಪಾರ್ತಿಸುಬ್ಬನ ರಚನೆಗೆ ಹೆಸರಿದ್ದು ಕುಕ್ಕಿಲ ಕೃಷ್ಣ ಭಟ್ಟರು ಸಂಪಾದಿಸಿದ ಪಾರ್ತಿಸುಬ್ಬನ ಯಕ್ಷಗಾನಗಳು ಕೃತಿಯಲ್ಲಿ ಅದೇ ಹೆಸರನ್ನು ಕೊಟ್ಟಿದ್ದಾರೆ. ಉಡುಪಿಯ ಪಾವಂಜೆ ಗುರುರಾಯರ ಪ್ರಕಾಶನದಲ್ಲಿ ಈ ಮೇಲಿನ ಹೆಸರಿನಿಂದ ಪ್ರಕಟಗೊಂಡಿದೆ. ಒಂದು ರೀತಿಯಲ್ಲಿ ಇದನ್ನೊಂದು ಸಂಕಲಿತಗ್ರಂಥವೆಂದರೂ ಸರಿ. ಕೆಲವು ಶಾಸ್ತ್ರೀಯ ಗ್ರಂಥಗಳಿಂದ ಎತ್ತಿಕೊಳ್ಳಲಾದ ಹಲವು ನಿರ್ಣಯ ಶ್ಲೋಕಗಳು ಇದರೊಳಗಿವೆ. ಹಿಮ್ಮೇಳದ ಕೆಲವು ವಿಷಯಗಳು ಇಲ್ಲಿ ಬಂದಿದ್ದರೂ ರಾಗ, ತಾಳ, ನೃತ್ಯವಿಧಾನ ಇತ್ಯಾದಿಗಳ ಶಾಸ್ತ್ರೀಯ

ನಿರೂಪಣೆ ಇದರೊಳಗಿಲ್ಲ.

**ಯಕ್ಷಗಾನ ಸ್ವಬೋಧಿನಿ**

ಲೇಖಕರು : ನೀಲಾವರ ರಾಮಕೃಷ್ಣಯ್ಯ

ಪ್ರಕಾಶಕರು : 1. ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ

ಪ್ರ. ಮು. 1986; ಪುಟಗಳು

2. ಯಕ್ಷಗಾನ ಕೇಂದ್ರ, ಉಡುಪಿ

ದ್ವಿ. ಮು. 2003; ಪುಟಗಳು – 314

3. ಯಕ್ಷಗಾನ ಕೇಂದ್ರ, ಉಡುಪಿ

ತೃ. ಮು. 2013; ಪುಟಗಳು

ಉಡುಪಿಯ ಯಕ್ಷಗಾನ ಕೇಂದ್ರದ ಯಕ್ಷಗಾನ ಅಧ್ಯಯನದ ಪಠ್ಯಗ್ರಂಥ. ಬಡಗುತಿಟ್ಟಿನ ಬಾಯಿತಾಳಗಳ ಸಹಿತವಾಗಿ ಎಂಟು ಅಧ್ಯಾಯಗಳಲ್ಲಿ ಬಡಗುತಿಟ್ಟಿನ ಯಕ್ಷಗಾನದ ಎಲ್ಲ ವಿವರಗಳಿವೆ. ಕೇಂದ್ರದ ಗುರುಗಳಾದ ನೀಲಾವರ ರಾಮಕೃಷ್ಣಯ್ಯನವರು ರಚಿಸಿದ ಮೂಲಕೃತಿಯನ್ನು ಅನಂತರ ಅಲ್ಲಿ ಗುರುಗಳಾದ ನೀಲಾವರ ಲಕ್ಷ್ಮೀನಾರಾಯಣಯ್ಯ ಮತ್ತು ಭಾಗವತ ಗೋರ್ಪಾಡಿ ವಿಠ್ಠಲ ಪಾಟೀಲರು ಸಾಕಷ್ಟು ಪರಿಷ್ಕರಿಸಿದ್ದಾರೆ.

**ಯಕ್ಷವನವಿಹಾರ**

(ಕಡತೋಕಾ ಮಂಜುನಾಥ ಭಾಗವತರ ಆತ್ಮಕಥನ)

ನಿರೂಪಣೆ : ಕಡತೋಕಾ ಗೋಪಾಲಕೃಷ್ಣ ಭಾಗವತ

ಪ್ರಕಾಶಕರು : ಯಕ್ಷರಂಗ, ಹಳದೀಪುರ, ಹೊನ್ನಾವರ, ಉ. ಕ. ಜಿಲ್ಲೆ

ಪ್ರ. ಮು. 2009; ಪುಟಗಳು –12+88

ಬಡಗುತಿಟ್ಟಿನ ಯಕ್ಷಗಾನಾಧ್ಯಯನವನ್ನು ಮಾಡಿ ಅನಂತರ ತೆಂಕುತಿಟ್ಟಿನ ಭಾಗವತಿಕೆಯನ್ನು ಕಲಿತು ಹಲವು ವರ್ಷಗಳ ಕಾಲ ತೆಂಕುತಿಟ್ಟಿನ ಮೇಳಗಳಲ್ಲಿ ತಿರುಗಾಟ ನಡೆಸಿ, ಪ್ರಸಿದ್ಧ ಭಾಗವತರೆಂದು ಹೆಸರು ಪಡೆದ ಕಡತೋಕಾ ಮಂಜುನಾಥ ಭಾಗವತರ ಆತ್ಮಕಥನರೂಪದ ಪುಸ್ತಕವಿದು. ಮುಪ್ಪಿನ ಸಂದರ್ಭದಲ್ಲಿ ನಿರೂಪಿತವಾದುದರಿಂದ ಎಷ್ಟೋ ಅನಭವಗಳು ಇದರಲ್ಲಿ ಕೈತಪ್ಪಿ ಹೋಗಿವೆ ಎನ್ನಬಹುದು. ಆದರೂ ಯಕ್ಷಗಾನವು ಪರಿವರ್ತನೆಗೊಳ್ಳುತ್ತಿದ್ದ ಒಂದು ಕಾಲಘಟ್ಟದ ಇತಿಹಾಸವನ್ನು ಚಿತ್ರಿಸಲು ಇದು ಆಕರಗ್ರಂಥವಾಗಿದೆ.

**ಯಾಜಿ ಭಾಗವತರು**

ಲೇಖಕರು : ಡಾ. ಕೆ. ಎಮ್. ರಾಘವ ನಂಬಿಯಾರ್

ಪ್ರಕಾಶಕರು : ಸುಮುಖ ಪ್ರಕಾಶನ, ಬೆಂಗಳೂರು

ಪ್ರ. ಮು. 2009; ಪುಟಗಳು –14+74

ಬಡಗುತಿಟ್ಟಿನ ಹಳೆಯ ತಲೆಮಾರಿನ ಭಾಗವತರಲ್ಲಿ ಯಾಜಿ ಭಾಗವತರು ಒಬ್ಬರು. ಇಡಗುಂಜಿ, ಮಾವಿನಕೆರೆ ವೆಂಕಟರಮಣ ಯಾಜಿ ಭಾಗವತರು ಇಡಗುಂಜಿ ಮೇಳದ ಭಾಗವತರಾಗಿ ಒಳ್ಳೆಯ ಸಾಧನೆ ಮಾಡಿದವರು. ಕಳೆದುಹೋದ ಕಾಲದ ಯಾಜಿ ಭಾಗವತರ ಬಗೆಗೆ ದೊರಕುವಷ್ಟು ಮಾಹಿತಿಗಳನ್ನು ಸಂಗ್ರಹಿಸಿ ಲೇಖಕರು ಈ ಪುಸ್ತಕವನ್ನು ಸಿದ್ಧಪಡಿಸಿದ್ದಾರೆ. ಕಾಲಪ್ರವಾಹದಲ್ಲಿ ಮರೆಯಾದಂತಾದವರ ನೆನಪನ್ನು ಹೊಸಕಾಲಕ್ಕೆ ಉಳಿಸಿಕೊಟ್ಟವರು ಪ್ರಸ್ತುತ ಲೇಖಕರು. ಇಲ್ಲಿ ಹೇಳಲಾದ ವಿಷಯಗಳು ಇಷ್ಟಾದರೂ ದಾಖಲಾಗದಿದ್ದಲ್ಲಿ ಎಲ್ಲ ವಿಷಯಗಳೂ ಕಾಲಗರ್ಭದಲ್ಲಿ ಅಡಗಿ ಹೋಗುತ್ತಿದ್ದುವು.

**ರಂಗವೈಖರಿ**

(ಶ್ರೀ ಮಾಂಬಾಡಿ ನಾರಾಯಣ ಭಾಗವತರ ಅಭಿನಂದನ ಗ್ರಂಥ)

ಸಂಪಾದಕರು : ಪಾದೆಕಲ್ಲು ನರಸಿಂಹ ಭಟ್ಟ ಮತ್ತು ಪಾದೇಕಲ್ಲು ವಿಷ್ಣು ಭಟ್ಟ

ಪ್ರಕಾಶಕರು : ಮಾಂಬಾಡಿ ನಾರಾಯಣ ಭಾಗವತ

ಅಭಿನಂದನ ಸಮಿತಿ, ಮಿತ್ತನಡ್ಕ, ಕರೋಪಾಡಿ.

ಪ್ರ. ಮು. 1981; ಪುಟಗಳು –14+233

ಶ್ರೀ ಮಾಂಬಾಡಿ ನಾರಾಯಣ ಭಾಗವತರು ತೆಂಕುತಿಟ್ಟಿನ ಹಿರಿಯ ಭಾಗವತರಾಗಿ, ಹಿಮ್ಮೇಳದ ಎಲ್ಲ ವಿಷಯಗಳನ್ನು ಆಮೂಲಾಗ್ರವಾಗಿ ತಿಳಿದ ಯಕ್ಷಗಾನ ಗುರುಗಳಾಗಿ ಪ್ರಸಿದ್ಧರು. ಮೇಳದ ತಿರುಗಾಟ ಕೆಲವೇ ವರ್ಷಗಳದ್ದಾಗಿದ್ದರೂ ತೆಂಕುತಿಟ್ಟು ಯಕ್ಷಗಾನವು ಹೊಸಕಾಲಕ್ಕೆ ಬದಲಾವಣೆಯನ್ನು ಹೊಂದುವ ಸಂಕ್ರಮಣದ ಘಟ್ಟದಲ್ಲಿ ಪರಂಪರೆಯ ಎಲ್ಲ ಮಾಹಿತಿಗಳನ್ನು ಹೊಂದಿದ್ದ ಹಿರಿಯ ಭಾಗವತರಾಗಿದ್ದವರು ಮಾಂಬಾಡಿಯವರು. ಈ ಕೃತಿಯಲ್ಲಿ ಮಾಂಬಾಡಿಯವರ ಬಗೆಗೆ ಕೆಲವು ಲೇಖನಗಳಿದ್ದು ಯಕ್ಷಗಾನ ಕಲೆಯ ಬಗೆಗೆ ಹಲವು ಲೇಖನಗಳಿವೆ. ಭಾಗವತರ ಬಗೆಗೆ ಪ್ರೊ ಟಿ. ಕೇಶವ ಭಟ್ಟರು ಬರೆದ ಲೇಖನವಿದ್ದು ಪ್ರೊ. ಎಂ. ರಾಜಗೋಪಾಲಾಚಾರ್ಯರು ಭಾಗವತರನ್ನು ಸಂದರ್ಶಿಸಿ ಬರೆದ ಲೇಖನವೂ ಇದೆ. ಯಕ್ಷಗಾನ ಮತ್ತು ರಂಗಕಲೆಗಳ ಬಗೆಗೆ ಇದೊಂದು ಪರಾಮರ್ಶನ ಗ್ರಂಥವಾಗಿ ಪರಿಗಣಿಸಲ್ಪಡಬಹುದಾದ ಪುಸ್ತಕವಾಗಿದೆ.

**ಷಷ್ಟ್ಯಬ್ದ**

(ಹೊಸ್ತೋಟ ಮಂಜುನಾಥ ಭಾಗವತರ ಜೀವನ ಕೃತಿ ವಿಮರ್ಶೆ)

ಸಂಪಾದಕರು : ಕೆ.ಜಿ. ನಾರಾಯಣ್

ಪ್ರಕಾಶಕರು : ಸಾಕೇತ ಟ್ರಸ್ಟ್, ಹೆಗ್ಗೋಡು ಮತ್ತು ಯಕ್ಷಶಾಲ್ಮಲೀ, ಸೋಂದ

ಪ್ರ. ಮು.1999; ಪುಟಗಳು 8+122

ಯಕ್ಷಗಾನಕ್ಕಾಗಿ ತಮ್ಮ ಜೀವನವನ್ನು ಪೂರ್ತಿಯಾಗಿ ಸಮರ್ಪಿಸಿಕೊಂಡು ಪ್ರಸಂಗ ರಚನೆ–ಹಿಮ್ಮೇಳ–ಮುಮ್ಮೇಳಗಳಲ್ಲಿ ವಿಶೇಷ ಸಾಧನೆ ಮಾಡಿ ವಿವಿಧ ರೀತಿಯ ಪ್ರಸಂಗಗಳನ್ನು ನಿರ್ದೇಶಿಸಿ, ಯಕ್ಷಗಾನ ಸಂಶೋಧಕರಾಗಿಯೂ ದುಡಿದ ಹೊಸ್ತೋಟ ಮಂಜುನಾಥ ಭಾಗವತರಿಗೆ 60 ವರ್ಷಗಳಾದಾಗ ಪ್ರಕಟಿಸಲಾದ ಗ್ರಂಥ. ಅವರ ಜೀವನ–

ಕೃತಿಗಳ ವಿಮರ್ಶೆಯ ಲೇಖನಗಳಲ್ಲದೆ, ಅನಿಸಿಕೆ–ಆಶಯ ಎಂಬ ದೀರ್ಘಲೇಖನದಲ್ಲಿ ಹೊಸ್ತೋಟದವರ ಆತ್ಮಕಥನವಿದೆ.

**ಸವ್ಯಸಾಚಿ**

(ಭಾಗವತ ತೋನ್ಸೆ ಜಯಂತ ಕುಮಾರ್ ಷಷ್ಠ್ಯಬ್ದ–ಅಭಿನಂದನ)

ಸಂಪಾದಕರು : ಅಂಬಾತನಯ ಮುದ್ರಾಡಿ

ಪ್ರಕಾಶಕರು : ತೋನ್ಸೆ ಜಯಂತ ಕುಮಾರ್ ಅಭಿನಂದನ ಸಮಿತಿ, ಉಡುಪಿ

ಪ್ರ. ಮು.2006; ಪುಟಗಳು 6+192

ಬಡಗುತಿಟ್ಟಿನ ಹವ್ಯಾಸಿ ರಂಗಭೂಮಿಯಲ್ಲಿ ಪ್ರಸಿದ್ಧರಾದ ಭಾಗವತರು ತೋನ್ಸೆ ಜಯಂತ ಕುಮಾರ್ ಅವರ 60ನೆಯ ವರ್ಷದ ಅಭಿನಂದನಗ್ರಂಥವಿದು. ವ್ಯಕ್ತಿಪರಿಚಯ ಮತ್ತು ಅಭಿನಂದನೆಯ ಲೇಖನಗಳಿಗಿಂತ ಯಕ್ಷಗಾನದ ಸುತ್ತಮುತ್ತ ಚಿಂತನೆ ನಡೆಸುವ ಲೇಖನಗಳ ಸಂಖ್ಯೆ ಇಲ್ಲಿ ಹೆಚ್ಚಿರುವುದು ಗಮನಾರ್ಹ.

**ಹಿಮ್ಮೇಳ**

ಲೇಖಕರು : ಡಾ. ಕೆ. ಎಂ. ರಾಘವ ನಂಬಿಯಾರ್

ಪ್ರಕಾಶಕರು : ವತ್ಸಲಾ ರಾಘವನ್, ಪಂಚಮೂಲ, ಕುಂಜಿಬೆಟ್ಟು, ಉಡುಪಿ, 576102

ಪ್ರ. ಮು. 2007; ಪುಟಗಳು –16+534

ಕರಾವಳಿ ಯಕ್ಷಗಾನದ ಹಿಮ್ಮೇಳದ ಒಂದು ಸಮಗ್ರ ಅಧ್ಯಯನಸ್ವರೂಪದ ಗ್ರಂಥವಿದಾಗಿದೆ. ಹಿಮ್ಮೇಳದ ಬಗೆಗೆ ಇಷ್ಟು ವಿಷಯಪರಿಪ್ಲುತವಾದ, ಸರ್ವಾಂಗ ಪರಿಪೂರ್ಣವಾದ ಬೇರೊಂದು ಪುಸ್ತಕ ಬಂದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಡಾ. ಯು. ಪಿ. ಉಪಾಧ್ಯಾಯರ ಮಾರ್ಗದರ್ಶನದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧದ ಮುದ್ರಿತರೂಪವೇ ಈ ಗ್ರಂಥ. ಹಿಮ್ಮೇಳದ ಕುರಿತಾಗಿ ಹಲವಾರು ಲೇಖನಗಳು ಮತ್ತು ಪಠ್ಯಪುಸ್ತಕರೂಪದ ಗ್ರಂಥಗಳು ಮಾತ್ರ ಹೊರಬಂದಿದ್ದುವು. ಈ ಗ್ರಂಥದ ಪ್ರಕಾಶನದ ಮೂಲಕ ಹಿಮ್ಮೇಳವೆಂಬ ಒಂದೇ ವಿಭಾಗವು ಯಕ್ಷಗಾನಕಲೆಯಲ್ಲಿ ಎಷ್ಟೊಂದು ವ್ಯಾಪ್ತಿಯನ್ನು ಹೊಂದಿದೆ ಮತ್ತು ಎಷ್ಟೆಲ್ಲ ವಿಷಯಗಳು ಅದರಲ್ಲಿ ಅಡಕವಾಗಿವೆ ಎಂಬುದನ್ನು ಸ್ಪಷ್ಟಪಡಿಸಿ ತೋರಿಸಿದಂತಾಗಿದೆ. ಯಕ್ಷಗಾನದ ಪ್ರತಿಯೊಂದು ವಿಭಾಗದಲ್ಲಿ ಎಂತಹ ಉನ್ನತ ಸಂಶೋಧನೆಯ ವಸ್ತುವಿಸ್ತಾರವಿದೆಯೆಂದು ಈ ಗ್ರಂಥ ಎತ್ತಿ ತೋರಿಸುತ್ತದೆ. ಹನ್ನೊಂದು ಅಧ್ಯಾಯಗಳಲ್ಲಿ ಪುಸ್ತಕ ವಿಸ್ತರಿಸಿಕೊಂಡಿದ್ದು ಹಿಮ್ಮೇಳದ ಸಾಮಾನ್ಯ ಸ್ವರೂಪನಿರೂಪಣೆಯಿಂದ ತೊಡಗಿ ಸೂಕ್ಷ್ಮ ತಾಂತ್ರಿಕ ವಿವರಗಳವರೆಗೆ ಎಲ್ಲ ವಿಷಯಗಳು ಇಲ್ಲಿ ವಿವೃತವಾಗಿವೆ. ಕರಾವಳಿ ಯಕ್ಷಗಾನದ ಹಿಮ್ಮೇಳ–ಮುಮ್ಮೇಳಗಳ ಸರಿಯಾದ ಪ್ರಾಯೋಗಿಕ ಅನುಭವವುಳ್ಳ ಡಾ. ನಂಬಿಯಾರರು ಸಂಗೀತಶಾಸ್ತ್ರ–ನಾಟ್ಯಶಾಸ್ತ್ರಗಳಿಗೆ ಸಂಬಂಧಿಸಿದ ಪ್ರಾಚೀನಗ್ರಂಥಗಳನ್ನು ಚೆನ್ನಾಗಿ ಅಧ್ಯಯನಮಾಡಿದವರು ಹಿಮ್ಮೇಳದ ಎಲ್ಲ ಉಪಕರಣಗಳ ಬಳಕೆಯನ್ನು ಬಲ್ಲ ಅವರು ಆ ಉಪಕರಣಗಳ ತಯಾರಿ, ನಿರ್ವಹಣೆ ಮತ್ತು ಉಪಯೋಗಿಸುವಿಕೆ ಎಲ್ಲವನ್ನೂ ವಿವರವಾಗಿ ನಿರೂಪಿಸಿದ್ದಾರೆ. ತಾಳಗಳ

ಪ್ರಸ್ತಾರವನ್ನು ವಿವರವಾಗಿ ನೀಡಿದಂತೆಯೇ ರೇಖಾಚಿತ್ರ ಮತ್ತು ಭಾವಚಿತ್ರಗಳನ್ನು ನೀಡುವ ಮೂಲಕ ನೀಡಲಾದ ಮಾಹಿತಿ ಅತ್ಯಂತ ಸಮಗ್ರವೂ ಖಚಿತವೂ ಆಗಿರುವಂತೆ ನೋಡಿಕೊಳ್ಳಲಾಗಿದೆ. ಅತ್ಯಂತ ಶ್ರಮಸಾಧ್ಯವಾದ ಒಂದು ಕಾರ್ಯವನ್ನು ಬಾಲ್ಯದಿಂದಲೇ ಯಕ್ಷಗಾನಾಸಕ್ತಿಯಿದ್ದ ಡಾ. ನಂಬಿಯಾರರು ನಿಷ್ಠೆಯಿಂದ ಮಾಡಿಕೊಟ್ಟಿದ್ದಾರೆ. ಯಕ್ಷಗಾನದ ಮೌಲಿಕ ಪರಾಮರ್ಶನಗ್ರಂಥಗಳಲ್ಲಿ ಇದಕ್ಕೆ ಉನ್ನತಸ್ಥಾನ ದೊರಕಿದೆ.

* * * * * *

ಮೇಲೆ ಸೂಚಿಯಲ್ಲಿ ಕೊಡಲಾದ ಪುಸ್ತಕಗಳೆಲ್ಲವೂ ಹಿಮ್ಮೇಳಕ್ಕೆ ಸಂಬಂಧಿಸಿದವುಗಳು. ಮೇಳಗಳ ಬಗೆಗೆ ಸಮಗ್ರವಾಗಿ ಅಧ್ಯಯನ ಮಾಡಿದ ಕೆಲವು ಗ್ರಂಥಗಳು ಬಂದಿವೆ. ಅವುಗಳಲ್ಲಿ ಮುಮ್ಮೇಳ, ಹಿಮ್ಮೇಳ, ಮೇಳದ ಇತಿಹಾಸ, ಸಾಧನೆ, ವೈಶಿಷ್ಟ್ಯ, ವಿಶಿಷ್ಟ ಕಲಾವಿದರು, ವಿಶಿಷ್ಟಪ್ರಸಂಗಗಳ ರಂಗಪ್ರದರ್ಶನ – ಇವೆಲ್ಲ ವಿಷಯಗಳ ವಿವರಗಳಿವೆ. ಮುದ್ರಿತವಾದ ಆ ಕೆಲವು ಪುಸ್ತಕಗಳ ವಿವರ ಈ ಕೆಳಗಿನಂತಿವೆ:

**ಇಡಗುಂಜಿ ಮೇಳ**
ಲೇಖಕರು : ಡಾ. ರಾಮಕೃಷ್ಣ ಜೋಶಿ
ಪ್ರಕಾಶಕರು : ಚಿಂತನ ಪ್ರಕಾಶನ, ಹಿನಕಲ್, ಮೈಸೂರು
ಪ್ರ. ಮು. 1998; ಪುಟಗಳು –12+223

**ಇಡಗುಂಜಿ ಮೇಳ**
ಲೇಖಕರು : ಡಾ. ರಾಮಕೃಷ್ಣ ಜೋಶಿ
ಪ್ರಕಾಶಕರು : ಪ್ರಸಾರಾಂಗ, ಕನ್ನಡವಿಶ್ವವಿದ್ಯಾಲಯ, ಹಂಪಿ
ಪ್ರ. ಮು. 2000; ಪುಟಗಳು –2+36

**ಕರ್ಕಿ ಹಾಸ್ಯಗಾರ ಮೇಳ: ಸಂಪ್ರದಾಯ ಮತ್ತು ಪ್ರಯೋಗಶೀಲತೆ**
ಲೇಖಕರು : ಡಾ. ನಾರಾಯಣ ಮಧ್ಯಸ್ಥ
ಪ್ರಕಾಶಕರು : ಬಂಡಾರ ಪ್ರಕಾಶನ, ಮಸ್ಕಿ
ಪ್ರ. ಮು. 2008; ಪುಟಗಳು –8+168

**ಕೂಡ್ಲು ಮೇಳ**
ಲೇಖಕರು : ಬಾ. ಸಾಮಗ, ಮಲ್ಪೆ
ಪ್ರಕಾಶಕರು : ತುಳುನಾಡ್ ಪ್ರಗತಿ ಪ್ರಕಾಶನ, ಮಲ್ಪೆ
ಪ್ರ. ಮು. 1980; ಪುಟಗಳು – 20

* * * * * * *

ಯಕ್ಷಗಾನಕ್ಷೇತ್ರಕ್ಕೆ ಸಂಬಂಧಿಸಿದಂತೆ, ವಿವಿಧ ಕಲಾವಿದರ ಅಭಿನಂದನ ಮತ್ತು ಸಂಸ್ಮರಣಗ್ರಂಥಗಳು ಬಂದಿವೆ.; ಯಕ್ಷಗಾನ ವಿಷಯಕವಾದ ಲೇಖನಸಂಕಲನಗಳು ಮತ್ತು ಸ್ಮರಣಸಂಚಿಕೆಗಳು ಬಂದಿವೆ. ಅಭಿನಂದನ–ಸಂಸ್ಮರಣಗ್ರಂಥಗಳಲ್ಲಿ ಕೆಲವರೊಳಗೆ ಆಯಾ ಕಲಾವಿದರಿಗೆ ಸಂಬಂಧಿಸಿ ಅವರ ಆತ್ಮೀಯರು, ಅಭಿಮಾನಿಗಳು ಮತ್ತು ವಿಮರ್ಶಕರು ಬರೆದ ಲೇಖನಗಳು ಮಾತ್ರ ಇವೆ. ಉದಾ : (ನಾದಶಂಕರ–ಪದ್ಯಾಣ ಶಂಕರ ನಾರಾಯಣ ಭಟ್ ಅಭಿನಂದನಗ್ರಂಥ, 2011 ಇತ್ಯಾದಿ.) ಕೆಲವು ಗ್ರಂಥಗಳಲ್ಲಿ ಅಭಿನಂದನೆಗೆ ಸಂಬಂಧಿಸಿದ ಲೇಖನಗಳೊಡನೆ ಯಕ್ಷಗಾನದ ವಿವಿಧವಿಷಯಗಳಿಗೆ ಸಂಬಂಧಿಸಿದ ಪರಿಚಯಾತ್ಮಕ– ವಿಮರ್ಶಾತ್ಮಕ–ಸಂಶೋಧನಾತ್ಮಕ ಲೇಖನಗಳಿವೆ. (ಯಕ್ಷಗಾನ ಮಕರಂದ–ಪೊಳಲಿ ಶಂಕರನಾರಾಯಣ ಶಾಸ್ತ್ರಿ ಸಂಸ್ಮರಣಗ್ರಂಥ –1981; ಸ್ವರ್ಣಕಮಲ–ಅರ್ಕುಳ ಸುಬ್ರಾಯಾಚಾರ್ಯ ಸಂಸ್ಮರಣಗ್ರಂಥ –1988 ಇತ್ಯಾದಿ.) ಅಭಿನಂದನಗ್ರಂಥ ಅಥವಾ ಲೇಖನಸಂಕಲನರೂಪದ ಗ್ರಂಥಗಳಲ್ಲಿ ಹಿಮ್ಮೇಳದ ಬಗೆಗೆ ಬರೆಯಲಾದ ಲೇಖನಗಳನ್ನು ಈ ಕೆಳಗೆ ಆಯ್ದು ಪಟ್ಟಿ ಮಾಡಲಾಗಿದೆ. ಈ ಪಟ್ಟಿ ಅಸಮಗ್ರ ವಾಗಿರುವುದು ಅನಿವಾರ್ಯ. ದಿನಪತ್ರಿಕೆಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಬಂದಿರಬಹುದಾದ ಲೇಖನಗಳನ್ನು ಗಮನಿಸಲು ಸಾಧ್ಯವಾಗಿಲ್ಲ. ಏನಿದ್ದರೂ ಈ ವಿಷಯಕ್ಕೆ ಸಂಬಂಧಿಸಿದ ಅಧ್ಯಯನಸೂಚಿಯನ್ನು ಸಿದ್ಧಪಡಿಸುವಲ್ಲಿ ಇದು ಒಂದು ವಿಶಿಷ್ಟ ಪ್ರಯತ್ನವಾಗಿದೆ.

| ಕ್ರ ಸಂ. | ಲೇಖನ | ಲೇಖಕರ ಹೆಸರು | ಪ್ರಕಟಿತ ಗ್ರಂಥ ಮತ್ತು ವರ್ಷ |
|---|---|---|---|
| 1 | ದುಃಖರಸಕ್ಕೊಪ್ಪುವ ರಾಗಗಳು | ಎ. ರಾಮ ಗಾಣಿಗ | ಯಕ್ಷಗಾನ ವಿವೇಚನೆ 1970 |
| 2 | ಶೃಂಗಾರ–ಹಾಸ್ಯ–ಭಯಾನಕರಸಗಳು | ಎಂ. ನಾರಣಪ್ಪ ಉಪ್ಪೂರ | ಅದೇ ಗ್ರಂಥದಲ್ಲಿ |
| 3 | ವೀರರಸಕ್ಕೆ ತಕ್ಕ ಧಾಟಿ–ರಾಗಗಳು | ಕೆರೆಮನೆ ಮಹಾಬಲ ಹೆಗಡೆ | ಅದೇ ಗ್ರಂಥದಲ್ಲಿ |
| 4 | ಯಕ್ಷಗಾನದಲ್ಲಿ ಹಾಡುಗಾರಿಕೆ | ಕುರಿಯ ವಿಟ್ಠಲ ಶಾಸ್ತ್ರಿ | ರಸಋಷಿ (ದೇರಾಜೆ ಅಭಿನಂದನಗ್ರಂಥ) 1974 (ಲೇಖನ ರಚನೆ–1971) |
| 5 | ಯಕ್ಷಗಾನ ಗಾನವಿಧಾನ | ಶ್ರೀನಿವಾಸ ಉಡುಪ | ಯಕ್ಷಗಾನ ಮಕರಂದ (ಪೊಳಲಿ ಶಾಸ್ತ್ರಿ ಅಭಿನಂದನಗ್ರಂಥ) 1980 |
| 6 | ಯಕ್ಷಗಾನ ಪ್ರಸಂಗಗಳ ಧಾಟಿ | ಪ್ರೊ. ಎಂ. ರಾಜ ಗೋಪಾಲಾಚಾರ್ಯ | ಅದೇ ಗ್ರಂಥದಲ್ಲಿ |
| 7 | ಯಕ್ಷಗಾನದಲ್ಲಿ ಸಂಗೀತಾಂಶಗಳು | ಎ. ಈಶ್ವರಯ್ಯ | ಅದೇ ಗ್ರಂಥದಲ್ಲಿ |
| 8 | ಯಕ್ಷಗಾನದ ಮಟ್ಟುಗಳು | ಹೊಸ್ತೋಟ ಮಂಜುನಾಥ ಭಟ್ಟ | ಅದೇ ಗ್ರಂಥದಲ್ಲಿ |

| | | | |
|---|---|---|---|
| 9 | ಯಕ್ಷಗಾನದಲ್ಲಿ ತಾಳ-ಛಂದಸ್ಸು-ಗಮಕ | ಪ್ರೊ. ಟಿ. ಕೇಶವ ಭಟ್ಟ | ಅದೇ ಗ್ರಂಥದಲ್ಲಿ |
| 10 | ಯಕ್ಷಗಾನ ಛಂದಸ್ಸು | ಕೆ.ಪು. ಸೀತಾರಾಮ ಕೆದಿಲಾಯ | ಅದೇ ಗ್ರಂಥದಲ್ಲಿ |
| 11 | ಪ್ರದರ್ಶನ-ದಿಗ್ದರ್ಶನ : ಕೆಲವು ಸಮಸ್ಯೆಗಳು | ದಾಮೋದರ ಮಂಡೆಚ್ಚ | ಅದೇ ಗ್ರಂಥದಲ್ಲಿ |
| 12 | ಯಕ್ಷಗಾನದ ಭಾಗವತ-ಭಾಗವತಿಕೆ | ಕಡತೋಕ ಮಂಜುನಾಥ ಭಾಗವತ | ಅದೇ ಗ್ರಂಥದಲ್ಲಿ |
| 13 | ಬಯಲಾಟದಲ್ಲಿ ನೃತ್ಯ | ಕೆ. ಗೋವಿಂದ ಭಟ್ಟ | ಅದೇ ಗ್ರಂಥದಲ್ಲಿ |
| 14 | ಬಯಲಾಟದ ಪಂಚಾಂಗ | ಪ್ರೊ. ಗುಂಡ್ಮಿ ಚಂದ್ರಶೇಖರ ಐತಾಳ | ಅದೇ ಗ್ರಂಥದಲ್ಲಿ |
| 17 | ತೆಂಕುತಿಟ್ಟಿನ ಬಯಲಾಟದ ಪೂರ್ವರಂಗ | ಬಲಿಪ ನಾರಾಯಣ ಭಾಗವತ | ಅದೇ ಗ್ರಂಥದಲ್ಲಿ |
| 18 | ತಾಳ ವಿಧಾನ | ಕೆ. ಬಾಬು ರೈ | ಅದೇ ಗ್ರಂಥದಲ್ಲಿ |
| 19 | ತೆಂಕುತಿಟ್ಟಿನ ತಾಳಗಳು ಮತ್ತು ಸಂಪ್ರದಾಯಗಳು | ದಿವಾಣ ಭೀಮ ಭಟ್ಟ | ಅದೇ ಗ್ರಂಥದಲ್ಲಿ |
| 20 | ಪೂರ್ವರಂಗದ ನಾಟ್ಯಾಭ್ಯಾಸದ ತಳಹದಿ | ಕೋಳ್ಯೂರು ರಾಮಚಂದ್ರ ರಾವ್ | ಅದೇ ಗ್ರಂಥದಲ್ಲಿ |
| 21 | ರಂಗಪ್ರವೇಶ | ಅಳಿಕೆ ರಾಮಯ್ಯ ರೈ. | ಅದೇ ಗ್ರಂಥದಲ್ಲಿ |
| 22 | ನಾಟ್ಯಾರಂಭ | ಪಿ. ಶ್ರೀಧರ ಐತಾಳ | ಅದೇ ಗ್ರುಂಥದಲ್ಲಿ |
| 23 | ಬಡಗುತಿಟ್ಟಿನ ತಾಳ ಮತ್ತು ನೃತ್ಯಪದ್ಧತಿ | ಎಂ. ನಾರಣಪ್ಪ ಉಪ್ಪೂರ | ಅದೇ ಗ್ರಂಥದಲ್ಲಿ |
| 24 | ಯಕ್ಷಗಾನರೂಪಕದ ಗಾನಹೆಜ್ಜೆಗೆಜ್ಜೆ | ಡಾ. ಮಾರ್ತಾ ಆಷ್ಟನ್ | ಅದೇ ಗ್ರಂಥದಲ್ಲಿ |
| 25 | ನೃತ್ಯ-ಚಲನೆ : ಒಂದು ಟಿಪ್ಪಣಿ | ಗುರುರಾಜ ಮಾರ್ಪಳ್ಳಿ | ಅದೇ ಗ್ರಂಥದಲ್ಲಿ |
| 26 | ಉತ್ತರಕನ್ನಡದ ಯಕ್ಷಗಾನದ ಸಂಪ್ರದಾಯ ಮತ್ತು ಪೂರ್ವರಂಗ | ಪಿ. ವಿ. ಹಾಸ್ಯಗಾರ | ಅದೇ ಗ್ರಂಥದಲ್ಲಿ |
| 27 | ಯಕ್ಷಗಾನ ನೃತ್ಯಾರಂಭ | ಗೋಪಾಲಕೃಷ್ಣ ಪಿ. ನಾಯಕ | ಅದೇ ಗ್ರಂಥದಲ್ಲಿ |
| 28 | ಮರೆಯಾದ ಉತ್ತರಕನ್ನಡದ ನೃತ್ಯವೈಶಿಷ್ಟ್ಯ | ಗಂಗಾಧರ ಶಾಸ್ತ್ರಿ, ನಾಜಗಾರ | |
| 29 | ಯಕ್ಷಗಾನ ಛಂದಸ್ಸಮೀಕ್ಷೆ | ಕ.ಪು. ಸೀತಾರಾಮ ಕೆದಿಲಾಯ | ರಂಗವೈಖರಿ (ಮಾಂಬಾಡಿ ನಾರಾಯಣ ಭಾಗವತ ಅಭಿನಂದನಗ್ರಂಥ) 1981 |
| 30 | ಯಕ್ಷಗಾನದ ಕೆಲವು ಛಂದೋನಿಯಮಗಳು | ಟಿ. ಆರ್. ಕೆ. ಭಟ್, ತಾಳ್ತಜೆ | |
| 31 | ಯಕ್ಷಗಾನದ ಹಾಡುಗಾರಿಕೆ | ರಾಮಚಂದ್ರ ಉಚ್ಚಿಲ | ಅದೇ ಗ್ರಂಥದಲ್ಲಿ |
| 32 | ಯಕ್ಷಗಾನದ ಭಾಗವತಿಕೆ ಕೆಲವು ಅನಿಸಿಕೆಗಳು | ಮಂದಾರ ಕೇಶವ ಭಟ್ಟ | ಅದೇ ಗ್ರಂಥದಲ್ಲಿ |
| 33 | ಬಯಲಾಟದ ಪೂರ್ವರಂಗದ ವಿಚಾರ | ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟ | ಶ್ರೀಚಕ್ರ (ಪೊಳಲಿ ಶಾಸ್ತ್ರಿ |

| | | | |
|---|---|---|---|
| | | | ಸ್ಮರಣಸಂಚಿಕೆ) –1981 |
| 34 | ಯಕ್ಷಗಾನದಲ್ಲಿ ಶಾಸ್ತ್ರೀಯ ಸಂಗೀತದ ಇತಿಮಿತಿ | ಪೊಳ್ಯ ಲಕ್ಷ್ಮೀನಾರಾಯಣ ಶೆಟ್ಟಿ | ಯಕ್ಷಕರ್ದಮ (ಯಕ್ಷಗಾನ ಸಾಹಿತ್ಯ ಸಮ್ಮೇಳನ–ಲೇಖನಸಂಕಲನ) 1984 |
| 35 | ಬಯಲಾಟದ ಪೂರ್ವರಂಗ –ಸಭಾಲಕ್ಷಣ ಮತ್ತು ಪ್ರಸಂಗಪೀಠಿಕೆ | ಎಚ್. ಸುಬ್ಬಣ್ಣ ಭಟ್ಟ | ಯಕ್ಷಗಾನ ಕಲಾರಂಗ–ದಶಮಾನ ಸಂಚಿಕೆ –1986 |
| 36 | ತಾಳಮದ್ದಳೆಯ ಹಿಮ್ಮೇಳ | ಡಾ. ಎಂ. ಪ್ರಭಾಕರ ಜೋಷಿ | ಸ್ವರ್ಣಕಮಲ (ಅರ್ಕುಳ ಸುಬ್ರಾಯ ಆಚಾರ್ಯ ಸಂಸ್ಮರಣ ಗ್ರಂಥ) 1988 |
| 37 | ಯಕ್ಷಗಾನ ಭಾಗವತಿಕೆಯ ಶೈಲಿ | ಪಿ. ವೆಂಕಟ್ರಾಯ ಐತಾಳ | ಯಕ್ಷಸೌರಭ (ಯಕ್ಷಗಾನ ಸಾಹಿತ್ಯ ಸಮ್ಮೇಳನ –ಲೇಖನ ಸಂಕಲನ)1989 |
| 38 | ಯಕ್ಷಗಾನ ಭಾಗವತ | ವಿ. ಗ. ನಾಯಕ | ಯಕ್ಷರತ್ನ (ಯಕ್ಷಗಾನ ಸಾಹಿತ್ಯ ಸಮ್ಮೇಳನ –ಲೇಖನ ಸಂಕಲನ) 1993 |
| 39 | ಯಕ್ಷಗಾನ ಹಿಮ್ಮೇಳ–ಮುಮ್ಮೇಳಗಳ ಸಾಂಗತ್ಯ | ಎಚ್. ಶ್ರೀಧರ ಹಂದೆ | ಯಕ್ಷಮಿತ್ರ (ದಶಮಾನೋತ್ಸವ ಸ್ಮರಣಸಂಚಿಕೆ, ಸರಳಿಬೆಟ್ಟು) –1993 |
| 40 | ಬಡಗುತಿಟ್ಟು; ಪದ್ಯದ ಎತ್ತುಗಡೆ; ಒಡ್ಡೋಲಗ | ಡಾ.ಎಸ್.ವಿ. ಉದಯ ಕುಮಾರ್ ಶೆಟ್ಟಿ | ಯಕ್ಷಪ್ರಭಾ (ಸ್ಮರಣಸಂಚಿಕೆ, ಅರಾಟೆ) –1994 |
| 41 | ಹಿಮ್ಮೇಳ–ಬಡಗು | ಹೊಸ್ತೋಟ ಮಂಜುನಾಥ ಭಾಗವತ | ಯಕ್ಷಸೌಗಂಧಿಕಾ (ಯಕ್ಷಕಲಾರಂಜಿನಿ ಸ್ಮರಣಸಂಚಿಕೆ) –1995 |
| 42 | ಪಾರ್ತಿಸುಬ್ಬನ ರಾಮಾಯಣದ ಛಂದೋಬಂದಗಳು | ಕ.ಪು. ಸೀತಾರಾಮ ಕೆದಿಲಾಯ | ಯಕ್ಷಸುಧಾ (ಯಕ್ಷಗಾನ ಸಾಹಿತ್ಯ ಸಮ್ಮೇಳನ –ಲೇಖನ ಸಂಕಲನ) 1996 |
| 43 | ಯಕ್ಷಗಾನಸಾಹಿತ್ಯ ಮತ್ತು ಛಂದಸ್ಸು | ಪ್ರೊ. ವಿ. ಜಿ. ನಾಯಕ | ಯಕ್ಷಗಾನ–ಕೆಲವು ಲೇಖನಗಳು –1996 |
| 44 | ಯಕ್ಷಗಾನದಲ್ಲಿ ಸಂಗೀತದ ಅಭಿವ್ಯಕ್ತಿ ಮತ್ತು ತಂತ್ರ | ತುದಿಯಡ್ಕ ವಿಷ್ಣಯ್ಯ | ಅಬ್ಬರತಾಳ (ಲೇಖನ ಸಂಕಲನ) 1997 |
| 45 | ಶಾಸ್ತ್ರೀಯಗಾನದ ಹಳೆ ರೀತಿ | ಡಾ. ಕೆ.ಎಂ. | ವಿಲೋಕನ |

| | | ರಾಘವ ನಂಬಿಯಾರ್ | (ಯಕ್ಷಗಾನ ವಿಮರ್ಶೆಯ ಲೇಖನಗಳ ಸಂಕಲನ) – 1998 |
|---|---|---|---|
| 46 | ತಾಳಲಯಗಳ ಮಡಿಲಲ್ಲಿ | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 47 | ಗೀತದ ಶಿಟ್ಟು–ಮಟ್ಟು | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 48 | ವಾದ್ಯವಾದನಗಳ ಅವತಾರಗಳು | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 49 | ಯಕ್ಷಗಾನ ಹಾಡುಗಾರಿಕೆಯಲ್ಲಿ ಪರಂಪರೆ ಮತ್ತು ಸ್ವಂತಿಕೆ | ಪ್ರೊ. ಶ್ರೀಧರ ಉಪ್ಪೂರ | ಯಕ್ಷಗಾನ ಮತ್ತು ನಾಟಕ (ಲೇಖನ ಸಂಕಲನ) – 1998 |
| 50 | ಯಕ್ಷಗಾನ ರಾಗಗಳು ಮತ್ತು ಕಾಲವಿಭಜನೆ | ಪ್ರೊ. ಶ್ರೀಧರ ಉಪ್ಪೂರ | |
| 51 | ಯಕ್ಷಗಾನ ತಾಳಗಳು ಮತ್ತು ಅವುಗಳ ಛಂದಸ್ಸು | ಪ್ರೊ. ಶ್ರೀಧರ ಉಪ್ಪೂರ | ಅದೇ ಗ್ರಂಥದಲ್ಲಿ |
| 52 | ಹಿಮ್ಮೇಳ ನಡೆದು ಬಂದ ಬಗೆ | ಡಾ. ಕೆ.ಎಂ. ರಾಘವ ನಂಬಿಯಾರ್ | ಸಹಸ್ರಚಂದ್ರ (ಶೇಣಿ ಅಭಿನಂದನ ಗ್ರಂಥ) –1999 |
| 53 | ಆಯ್ದುಳಿಸಿದ ಕಾಯ್ದಿರಿಸಿದ ಕನ್ನಡದ ಅನರ್ಘ್ಯಛಂದೋರತ್ನಗಳು | ಡಾ. ಎನ್. ನಾರಾಯಣ ಶೆಟ್ಟಿ | ಯಕ್ಷದಶಾ (ಯಕ್ಷಲಹರಿ ಸ್ಮರಣ ಸಂಚಿಕೆ, ಕಿನ್ನಿಗೋಳಿ) 2000 |
| 54 | ಯಕ್ಷಗಾನದಲ್ಲಿ ಸಂಗೀತ | ಪ್ರೊ. ಟಿ. ಕೇಶವ ಭಟ್ಟ | ಯಕ್ಷಗಾನ ಕಲಾದರ್ಶನ (ಲೇಖನ ಸಂಕಲನ) – 2002 (ಲೇಖನ –1997) |
| 55 | ಸಮೃದ್ಧವಾದ ಯಕ್ಷಸಾಹಿತ್ಯ ಸ್ಥಾಲೀಪುಲಾಕಗಳು | ಡಾ. ಎನ್. ನಾರಾಯಣ ಶೆಟ್ಟಿ | ಒಡ್ಡೋಲಗ (ಬಂಟರ ಯಕ್ಷಗಾನ ಸ್ಮರಣಸಂಪುಟ) –2002 |
| 56 | ಯಕ್ಷಗಾನ ಹಿಮ್ಮೇಳ ಮುಮ್ಮೇಳ ಸಾಂಗತ್ಯ | ಅಂಬಾತನಯ, ಮುದ್ರಾಡಿ | ಅದೇ ಗ್ರಂಥದಲ್ಲಿ |
| 57 | ತೆಂಕುತಿಟ್ಟಿನಲ್ಲಿ ತಾಳ, ಬಿಡ್ತಿಕೆ, ಮುಕ್ತಾಯ–ಒಂದು ಜಿಜ್ಞಾಸೆ | ಬೊಟ್ಟಿಕೆರೆ ಪುರುಷೋತ್ತಮ ಪೂಂಜ | ಅದೇ ಗ್ರಂಥದಲ್ಲಿ |
| 58 | ಬಡಗುತಿಟ್ಟು: ಪದ್ಯದ ಎತ್ತುಗಡೆ, ಒಡ್ಡೋಲಗ ಮತ್ತು ವೈಶಿಷ್ಟ್ಯಪೂರ್ಣ ಜೋಡಾಟ | ಪ್ರೊ. ಎಸ್. ವಿ. ಉದಯ ಕುಮಾರ್ ಶೆಟ್ಟಿ | ಅದೇ ಗ್ರಂಥದಲ್ಲಿ |
| 59 | ಯಕ್ಷಗಾನದಲ್ಲಿ ಭಾಗವತನಲ್ಲದ ನಿರ್ದೇಶಕ ಬೇಕೆ? | ಡಾ. ಎಚ್.ಎಸ್. ಮೋಹನ್ | ಸಾಕೇತ (ಸ್ಮರಣ ಸಂಚಿಕೆ, ಪುರಪ್ಪೆಮನೆ, ಸಾಗರ) – 2003 |

| | | | |
|---|---|---|---|
| 60 | ಯಕ್ಷಗಾನ ಸಂಗೀತಪದ್ಧತಿ | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಮಣಿಹಾರ (ಯಕ್ಷಗಾನ ಲೇಖನ ಸಂಕಲನ) –2004 |
| 61 | ಯಕ್ಷಗಾನ ಪ್ರಸಂಗರಚನೆಯಲ್ಲಿ ಕೆಲವು ಮಜಲುಗಳು | ತಲೆಂಗಳ ರಾಮಕೃಷ್ಣ ಭಟ್ಟ | ಅದೇ ಗ್ರಂಥದಲ್ಲಿ |
| 62 | ಯಕ್ಷಗಾನ ಸಾಹಿತ್ಯ ಮತ್ತು ಪ್ರಸಂಗರಚನೆ | ಬೊಟ್ಟಿಕೆರೆ ಪುರುಷೋತ್ತಮ ಪೂಂಜ | ಪಾಂಚಜನ್ಯ (ಸ್ವರ್ಣಜಯಂತಿ ಸ್ಮರಣ ಸಂಚಿಕೆ, ಕೈರಂಗಳ) –2004 |
| 63 | ಯಕ್ಷಗಾನ ಪೂರ್ವರಂಗ | ಬಲಿಪ ನಾರಾಯಣ ಭಾಗವತ | ಯಕ್ಷಶಾಂತಲಾ – ಪಾತಾಳ (ಪಾತಾಳ ಅಭಿನಂದನ ಗ್ರಂಥ) – 2005 |
| 64 | ಯಕ್ಷಗಾನದಲ್ಲಿ ಪದ್ಯ ಎತ್ತುಗಡೆ ಒಂದು ಟಿಪ್ಪಣಿ | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಅಂಬುರುಹದಳ (ಲೇಖನಸಂಕಲನ) – 2005 |
| 65 | ಯಕ್ಷಗಾನ ಸಂಗೀತಪದ್ಧತಿ | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಅದೇ ಗ್ರಂಥದಲ್ಲಿ |
| 66 | ಯಕ್ಷಗಾನದ ವಿಶಿಷ್ಟತಾಳಗಳು | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಅದೇ ಗ್ರಂಥದಲ್ಲಿ |
| 67 | ಯಕ್ಷಗಾನದಲ್ಲಿ ಮದನವತಿ ಛಂದಸ್ಸು | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಅದೇ ಗ್ರಂಥದಲ್ಲಿ |
| 68 | ಶ್ರೀ ಕೃಷ್ಣ ಭಾಗವತರು ಪರಿಶೋಧಿಸಿದ ಕೆಲವು ಯಕ್ಷಗಾನ ರಾಗಗಳು | ತಿಮ್ಮಪ್ಪ ಭಾಗವತ;ಜಿ.ಟಿ. ಭಟ್ಟ | ಬಲ್ಲಿರೇನ್ಯೆ ಭಾಗವತರ (ಬಾಳೆಹದ್ದ ಕೃಷ್ಣ ಭಾಗವತ ಅಭಿನಂದನ ಗ್ರಂಥ) –2005 |
| 69 | ಭಾಗವತಿಕೆ ಎಂಬ ಕಲಾಧಾರದ ಸ್ಥಿತಿಗತಿ | ಡಾ. ಎಂ. ಪ್ರಭಾಕರ ಜೋಶಿ | ಸವ್ಯಸಾಚಿ (ತೋನ್ಸೆ ಜಯಂತಕುಮಾರ್ ಅಭಿನಂದನ ಗ್ರಂಥ) –2006 |
| 70 | ಬಡಗುತಿಟ್ಟಿನ ಭಾಗವತಿಕೆ ಶೈಲಿಗಳು | ಡಾ. ಶ್ರೀಧರ ಉಪ್ಪೂರ | ಅದೇ ಗ್ರಂಥದಲ್ಲಿ |
| 71 | ಅಂಶಗತಿ ಮತ್ತು ತಾಳಗತಿ | ಡಾ. ಕಬ್ಬಿನಾಲೆ ವಸಂತ ಭಾರದ್ವಾಜ | ಅದೇ ಗ್ರಂಥದಲ್ಲಿ |
| 72 | ಯಕ್ಷಗಾನ ತಾಳಗಳು | ಗುಂಡ್ಮಿ ಸದಾನಂದ ಐತಾಳ | ಅದೇ ಗ್ರಂಥದಲ್ಲಿ |
| 73 | ಹಿಮ್ಮೇಳ ಮುಮ್ಮೇಳ ವಿಚಾರ | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 74 | ಭಾಗವತರ ಆಟದ ಗುಟ್ಟು | ಡಾ. ಕೆ.ಎಂ. ರಾಘವ ನಂಬಿಯಾರ್ | ಮುಂದಲೆ (ಲೇಖನಸಂಕಲನ) –2008 |
| 75 | ಭಾಗವತಿಕೆಗೆ ಲೈಟ್‌ಮ್ಯೂಸಿಕ್ ಹಂಬಲ | ಡಾ. ಕೆ. ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 76 | ಹಿಮ್ಮೇಳ ಕಂಡ ಪರಿವರ್ತನೆಗಳು | ಡಾ. ಕೆ. ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |

| | | | |
|---|---|---|---|
| 77 | ಯಕ್ಷಗಾನದಲ್ಲಿ (ಹಿಮ್ಮೇಳ–ಮುಮ್ಮೇಳ) ತಾಳ–ಮೇಳ | ಎಂ. ದೇವಾನಂದ ಭಟ್ | ಯಕ್ಷಲೋಕದರ್ಶನ – 2010 |
| 78 | ಗಾನಶಿಲ್ಪದ ರೂಪರೇಖೆ | ಡಾ. ಕೆ.ಎಂ. ರಾಘವ ನಂಬಿಯಾರ್ | ಯಕ್ಷಸೇಚನ (ಲೇಖನ ಸಂಕಲನ) –2010 |
| 79 | ಯಕ್ಷಗಾನ ಛಂದಸ್ಸು | ಎಂ. ವಾಸುದೇವ ಮುಗೆರಾಯ | ಸುವರ್ಣರಶ್ಮಿ (ಸ್ಮರಣಸಂಚಿಕೆ, ಮುಂಡ್ಕೂರು) –2010 |
| 80 | ತರಬೇತಿ– ನಿರ್ದೇಶನ–ನಿರ್ದೇಶಕನ ಹೊಣೆಗಾರಿಕೆ ಮತ್ತು ಪ್ರದರ್ಶನ | ತೋನ್ಸೆ ಜಯಂತಕುಮಾರ್ | ಹೊನ್ನಹೆಜ್ಜೆ (ಸುವರ್ಣೋತ್ಸವ ಸ್ಮರಣ ಸಂಚಿಕೆ, ಅಂಬಲಪಾಡಿ) 2011 |
| 81 | ಯಕ್ಷಗಾನದ ಗೀತ | ಡಾ. ಕೆ.ಎಂ. ರಾಘವ ನಂಬಿಯಾರ್ | ಹಾಡು–ಆಡುಕಾವ್ಯ (ಲೇಖನ ಸಂಕಲನ) – 2011 |
| 82 | ಗಾಯನದಲ್ಲಿ ಛಂದಸ್ಸು–ತಾಳ | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 83 | ಗಾಯನ: ಒಂದು ಪುನರವಲೋಕನ | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 84 | ಯಕ್ಷಗಾನ ಹಿಮ್ಮೇಳ ಪರಿಕರಗಳ ವಿಕಾಸ | ಡಾ. ಕೆ.ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 85 | ಗಾಯನದಲ್ಲಿ ಛಂದಸ್ಸು, ತಾಳ | ಡಾ. ಕೆ.ಎಂ. ರಾಘವ ನಂಬಿಯಾರ್ | ಕುಬಣೂರು ಸ್ಮೃತಿ (ಕುಬಣೂರು ಬಾಲಕೃಷ್ಣ ರಾವ್ ಸಂಸ್ಮರಣ ಗ್ರಂಥ) 2012 |
| 86 | ಯಕ್ಷಗಾನ : ಹಿಮ್ಮೇಳ ಮತ್ತು ಪ್ರಸಂಗಸಾಹಿತ್ಯ | ಪ್ರೊ. ಎಸ್. ವಿ. ಉದಯ ಕುಮಾರ್ ಶೆಟ್ಟಿ | ಯಕ್ಷಮುಡಿ (ಲೇಖನ ಸಂಕಲನ) – 2012 |
| 87 | ಹಿಮ್ಮೇಳ–ಮುಮ್ಮೇಳ ಸಾಂಗತ್ಯ | ಡಾ. ಕೆ.ಎಂ. ರಾಘವ ನಂಬಿಯಾರ್ | ಕುರಿಯಕುಂದಣ (ಕುರಿಯ ವಿಠಲಶಾಸ್ತ್ರಿ ಸಂಸ್ಮರಣಗ್ರಂಥ) 2013 |
| 88 | ಗಜಮುಖದವಗೆ ಗಣಪಗೆ | ಗಣೇಶ ಕೊಲೆಕಾಡಿ | ಅದೇ ಗ್ರಂಥದಲ್ಲಿ |
| 89 | ಯಕ್ಷಗಾನ ಬಯಲಾಟದ ಸಭಾಲಕ್ಷಣ | ಪ್ರೊ. ಅಮೃತ ಸೋಮೇಶ್ವರ | ಯಕ್ಷತರು –2013 |
| 90 | ಹಿಮ್ಮೇಳ– ಅರ್ಥಧಾರಿಗಳ ಹೊಂದಾಣಿಕೆ | ಕಡತೋಕ ಮಂಜುನಾಥ ಭಾಗವತ | ಅನೇಕ (ಲೇಖನ ಸಂಕಲನ) – 2013 (ಲೇಖನ –1992) |
| 91 | ಯಕ್ಷಗಾನ ಸಂಗೀತ | ಎ. ಈಶ್ವರಯ್ಯ | ಯಕ್ಷಕೇದಗೆ (ಲೇಖನ ಸಂಕಲನ) |

| | | | 2013 |
|---|---|---|---|
| 92 | ಭಾಗವತಿಕೆಯ ರೂಪ ಪುನಸ್ಸಂಘಟನೆ | ಡಾ.ಕೆ.ಎಂ. ರಾಘವ ನಂಬಿಯಾರ್ | ನಾದನುಡಿಗಳ ತಿರುಳು (ಲೇಖನ ಸಂಕಲನ- ಅಪ್ರಕಟಿತ) 2014 |
| 93 | ನಿಧಾನಝುಂಪೆ : ಅಗರಿ ಮಾರ್ಗ | ಡಾ. ಕೆ. ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 94 | ಅಗರಿ ಶ್ರೀನಿವಾಸ ಭಾಗವತರ ಹಾಡಿಕೆ ಶೈಲಿ | ಡಾ. ಕೆ. ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |
| 95 | ದಿವಾಣರು ಮತ್ತು ಅಷ್ಟತಾಳ | ಡಾ. ಕೆ. ಎಂ. ರಾಘವ ನಂಬಿಯಾರ್ | ಅದೇ ಗ್ರಂಥದಲ್ಲಿ |

*******



## ಸಂಕ್ಷಿಪ್ತ ಪರಿಚಯ

ದಕ್ಷಿಣಕನ್ನಡ ಜಿಲ್ಲೆ, ಬಂಟ್ವಾಳ ತಾಲೂಕು, ವಿಟ್ಲ ಪಡ್ನೂರು ಗ್ರಾಮದ ಪ್ರಕೃತಿ ಮನೋಹರ ಕೋಡಪದವಿನ ಪುಣ್ಯಭೂಮಿಯಲ್ಲಿ ನೆಲೆಯಾಗಿರುವ ಶ್ರೀ ವೀರಾಂಜನೇಯ ಸ್ವಾಮಿ ನಮ್ಮ ಊರ ಹಾಗೂ ಪರವೂರ ಭಕ್ತರಿಗೆ ಆರಾಧ್ಯ ದೇವರು. ಶ್ರೀ ಸ್ವಾಮಿಗೆ ಲಲಿತ ಕಲಾ ಸೇವೆಗಳಲ್ಲಿ ಒಂದಾದ ಯಕ್ಷಗಾನವೂ ಪ್ರಿಯವಾದುದು. ಊರ ಕೀರ್ತಿಯನ್ನು ಹತ್ತೂರಿಗೆ ಪಸರಿಸಿ ಹುಟ್ಟೂರಿಗೆ ಹೆಸರು ತಂದ ಅನೇಕ ಮಹನೀಯರಲ್ಲಿ ಕೀರ್ತಿಶೇಷರಾದ ಕುಕ್ಕಿಲ ಕೃಷ್ಣ ಭಟ್ಟರು, ದಿವಾಣ ಭೀಮ ಭಟ್ಟರು, ಕರ್ಗಲ್ಲು ಸುಬ್ಬಣ್ಣ ಭಟ್ಟರು, ನೆಡ್ಲೆ ಗುರಿಕಾರ ನರಸಿಂಹ ಭಟ್ಟರು, ಸರವು ಭಾಗವತ ಕೃಷ್ಣ ಭಟ್ಟರು, ಪಂಜಿಗದ್ದೆ ಗೋವಿಂದ ಭಟ್ಟರು, ಸರವು ನಾರಾಯಣ ಭಟ್ಟರು, ದಿವಾಣ ಸುಬ್ರಾಯ ಭಟ್ಟರು... ಹೀಗೆಯೇ ಇನ್ನೂ ಅನೇಕರು ಉಲ್ಲೇಖನೀಯರು.

ಶ್ರೀ ಸ್ವಾಮಿಯ ಹೆಸರಿನಲ್ಲಿ ಒಂದು ಯಕ್ಷಗಾನ ಕಲಾ ಸಂಘವನ್ನು ಕೀರ್ತಿಶೇಷ ಪುಂಡಿಕಾಯಿ ಕೃಷ್ಣ ಭಟ್ಟರು ಅಧ್ಯಕ್ಷರಾಗಿ ಕುಕ್ಕಿಲ ನಾರಾಯಣ ಭಟ್ಟರು ಕಾರ್ಯದರ್ಶಿಯಾಗಿ ಸ್ಥಾಪಿಸಿ ಮುನ್ನಡೆಸುತ್ತಾ ಬಂದರು. ಶ್ರೀ ವೀರಾಂಜನೇಯ ಸ್ವಾಮಿ ಯಕ್ಷಗಾನ ಕಲಾ ಸಂಘ, ಕೋಡಪದವು ಎಂಬ ಹೆಸರಿನಲ್ಲಿ ತನ್ನ ವಿಶಿಷ್ಟವಾದ ಚಟುವಟಿಕೆಗಳಿಂದ ಅಗ್ರಮಾನ್ಯ ಯಕ್ಷಗಾನ ಕಲಾ ಸಂಘವಾಗಿ ಹಲವಾರು ವರ್ಷ ಮೆರೆಯಿತು. ಇದರ ಉತ್ತುಂಗದ ಕೀರ್ತಿಗೆ ಕುಕ್ಕಿಲ ಪರಂಪರೆಯ ಶಾಸ್ತ್ರೀಯತೆಯೂ, ದಿವಾಣರ ವಿದ್ವತ್ಪೂರ್ಣವಾದ ಯಕ್ಷಗಾನ ಶಾಸ್ತ್ರೀಯ ಹಿಮ್ಮೇಳವೂ, ಇದಕ್ಕೊಪ್ಪುವಂತೆ ಕರ್ಗಲ್ಲು ಶೈಲಿಯ ಶಾಸ್ತ್ರೀಯ ಚಿಂತನೆಯ ನಾಟ್ಯ ಪದ್ಧತಿಯೂ ಮೆರುಗನ್ನು ಕೊಟ್ಟಿತು. ಯಕ್ಷಗಾನ ಕಲಾ ಪ್ರಕಾರ ಸೌಂದರ್ಯವನ್ನು ಯಕ್ಷಗಾನ ಕಲಾಲೋಕಕ್ಕೆ ಪರಿಚಯಿಸುವ ನಿಟ್ಟಿನಲ್ಲಿ ಶ್ರೀ ಕುಕ್ಕಿಲ ನಾರಾಯಣ ಭಟ್ಟರ ಶ್ರಮ ಅಪಾರ. ಅನನ್ಯ. ಸುಮಾರು 1980ರಿಂದ 1990ನೇ ವರುಷದ ತನಕ ಕಲಾವಿದರಾಗಿ ರಂಗಪ್ರವೇಶ ಮಾಡಿದವರೆಲ್ಲರೂ ಅನ್ಯ ಕಾರಣಗಳಿಂದ ಬೇರೆ ಬೇರೆ ಸ್ಥಳಗಳಿಗೆ ಉನ್ನತ ವ್ಯಾಸಂಗ, ಉದ್ಯೋಗದ ನಿಮಿತ್ತ ತೆರಳಿದಾಗ ಭಾಗವಹಿಸುವ ಕಲಾವಿದರ ಕೊರತೆಯಿಂದಾಗಿ ಪ್ರದರ್ಶನಗಳನ್ನು ಸೀಮಿತಗೊಳಿಸಲಾಯಿತು. ತದನಂತರ ವಿಶಾಲವಾದ ಯೋಜನೆ–ಯೋಚನೆಗಳನ್ನು ಇಟ್ಟು ಯಕ್ಷಗಾನ

ಕ್ಷೇತ್ರದಲ್ಲಿ ಅಧ್ಯಯನ, ಸಂಶೋಧನೆ, ಶಿಕ್ಷಣ, ಶಾಸ್ತ್ರೀಯ ಪ್ರದರ್ಶನಗಳೇ ಮೊದಲಾದ ಆದರ್ಶಗಳೊಂದಿಗೆ ಶ್ರೀ ಕರ್ಗಲ್ಲು ವಿಶ್ವೇಶ್ವರ ಭಟ್ಟರ ಸಹಕಾರ್ಯದೊಂದಿಗೆ ಶ್ರೀ ಕ್ಷೇತ್ರದ ಮೊಕ್ತೇಸರರಾದ ಮಾಳ ನಿಟಿಲೆ ಮಹಾಬಲೇಶ್ವರ ಭಟ್ಟರ ಮುಂದಾಳುತ್ವದಲ್ಲಿ ಶ್ರೀ ವೀರಾಂಜನೇಯ ಸ್ವಾಮಿ ಪ್ರತಿಷ್ಠಾನ, ಯಕ್ಷಕಲಾ ವಿಶ್ವಸ್ಥ ಮಂಡಳಿ, ಕೋಡಪದವು ಎಂಬ ಸಂಸ್ಥೆಯನ್ನು ಹುಟ್ಟುಹಾಕಿ ಅದನ್ನು ನೋಂದಾಯಿಸಲಾಯಿತು. ಅಧ್ಯಕ್ಷರು ಮತ್ತು ಪ್ರಧಾನ ವಿಶ್ವಸ್ಥರು ಶ್ರೀ ಮಾಳ ನಿಟಿಲೆ ಮಹಾಬಲೇಶ್ವರ ಭಟ್ಟರು. ಪ್ರತಿಷ್ಠಾನದ ಸೂತ್ರಧಾರರಾಗಿ ಶ್ರೀ ಪಿ.ಕೆ. ವೆಂಕಟ್ರಮಣ ಭಟ್, ಆಡಳಿತ ವಿಶ್ವಸ್ಥ ಪೆರುವಡಿ ಸುಬ್ರಹ್ಮಣ್ಯ ಕುಮಾರ್, ವಿಶ್ವಸ್ಥರು ಕರ್ಗಲ್ಲು ವಿಶ್ವೇಶ್ವರ ಭಟ್ಟ, ದಿವಾಣ ಗೋವಿಂದ ಭಟ್ಟ, ಕುಕ್ಕಿಲ ಪುರಂದರ ವಿಠಲ ಅಧಿಕೃತ ವಕ್ತಾರ ಶ್ರೀ ಸಿ.ಎಚ್. ಸುಬ್ರಹ್ಮಣ್ಯ ಭಟ್ಟ ಮತ್ತು ಶ್ರೀ ಕಿನಿಲ ಗೋಪಾಲಕೃಷ್ಣ ಭಟ್ಟ ಇವರೆಲ್ಲ ಕಾರ್ಯನಿರ್ವಹಿಸುತ್ತಿದ್ದಾರೆ. ಶ್ರೀಮದೆಡನೀರು ಮಠಾಧೀಶ ಶ್ರೀ ಶ್ರೀ ಶ್ರೀ ಕೇಶವಾನಂದ ಭಾರತಿ ಶ್ರೀ ಪಾದಂಗಳವರು ತಮ್ಮ ಅಮೃತ ಹಸ್ತದಿಂದ ದೀಪೋಜ್ವಲನಗೊಳಿಸಿ, ಮಂತ್ರಾಕ್ಷತೆಯನ್ನಿತ್ತು, ಅನುಗ್ರಹ ವಾಕ್ಯದೊಂದಿಗೆ ಪ್ರತಿಷ್ಠಾನದ ಕಛೇರಿಯನ್ನು ವಿದ್ಯುಕ್ತವಾಗಿ ಉದ್ಘಾಟಿಸಿದರು.

ಕೋಡಪದವಿಗೆ ವಿಶೇಷ ಹಿರಿಮೆಯನ್ನೂ, ಗರಿಮೆಯನ್ನೂ ತಂದಿತ್ತ ಮಹನೀಯರಾದ ಸಂಗೀತ ಶಾಸ್ತ್ರಜ್ಞ, ವಿಮರ್ಶಕ, ಚಿಂತಕ, ಯಕ್ಷಗಾನ ಶಾಸ್ತ್ರೀಯತೆಯ ಸಂಶೋಧಕ ಕುಕ್ಕಿಲ ಕೃಷ್ಣ ಭಟ್ಟರ ನೆನಪಿನ ಕುಕ್ಕಿಲ ಪ್ರಶಸ್ತಿ, ತೆಂಕುತಿಟ್ಟಿನ ಯಕ್ಷಗಾನ ಶಾಸ್ತ್ರೀಯ ಪದ್ಧತಿಯ ಹಿಮ್ಮೇಳದ ಲಯಬ್ರಹ್ಮ ದಿವಾಣ ಭೀಮ ಭಟ್ಟರ ಸ್ಮರಣಾರ್ಥ ದಿವಾಣ ಪ್ರಶಸ್ತಿ ಮತ್ತು ಯಕ್ಷಗಾನ ಮುಮ್ಮೇಳದ ಸರ್ವಾಂಗವನ್ನೂ ಬಲ್ಲವರಾಗಿದ್ದು, ಶ್ರೇಷ್ಠ ಸ್ತ್ರೀ ಪಾತ್ರಧಾರಿ, ಮೇರು ಯಕ್ಷಗಾನ ಕಲಾವಿದ ಕರ್ಗಲ್ಲು ಸುಬ್ಬಣ್ಣ ಭಟ್ಟರ ಸಂಸ್ಮರಣೆಯ ಕರ್ಗಲ್ಲು ಪ್ರಶಸ್ತಿ ಕೂಡಾ ಮೂರು ಪ್ರಶಸ್ತಿಗಳನ್ನು ಯಕ್ಷಗಾನ ಕ್ಷೇತ್ರದಲ್ಲಿ ಸೇವೆಯನ್ನು ಮಾಡಿದ ಮಹನೀಯರುಗಳಿಗೆ ನೀಡಿ ಗೌರವಿಸವುದೆಂದು ತೀರ್ಮಾನಿಸಿದಂತೆ ಪ್ರಥಮ ವರ್ಷ ಕುಕ್ಕಿಲ ಪ್ರಶಸ್ತಿಯನ್ನು ಶಿಮಂತೂರು ನಾರಾಯಣ ಶೆಟ್ಟರಿಗೂ, ದಿವಾಣ ಪ್ರಶಸ್ತಿಯನ್ನು ಗುರಿಕಾರ ನೆಡ್ಲೆ ನರಸಿಂಹ ಭಟ್ಟರಿಗೂ, ಕರ್ಗಲ್ಲು ಪ್ರಶಸ್ತಿಯನ್ನು ಕಡಂದೇಲು ಪುರುಷೋತ್ತಮ ಭಟ್ಟರಿಗೂ, 2000ನೇ ಇಸವಿಯಲ್ಲಿ ನೀಡಿ ಪುರಸ್ಕರಿಸಲಾಯಿತು. ಮುಂದಿನ ವರುಷಗಳಲ್ಲಿ ಕ್ರಮವಾಗಿ –

| | ಕುಕ್ಕಿಲ ಪ್ರಶಸ್ತಿ | ದಿವಾಣ ಪ್ರಶಸ್ತಿ | ಕರ್ಗಲ್ಲು ಪ್ರಶಸ್ತಿ |
|---|---|---|---|
| 2001 | ಕ.ಪು. ಸೀತಾರಾಮ ಕೆದಿಲಾಯ | ಕಡತೋಕ ಮಂಜುನಾಥ ಭಾಗವತರು ಪೆರುವಡಿ ನಾರಾಯಣ ಭಟ್ಟ ಹಾಸ್ಯಗಾರ | ಬಣ್ಣದ ಮಾಲಿಂಗ |
| 2002 | ಶೇಣಿ ಗೋಪಾಲಕೃಷ್ಣ ಭಟ್ಟ | ಬಲಿಪ ನಾರಾಯಣ ಭಾಗವತ | ಹೊಸಹಿತ್ತಲು ಮಹಾಲಿಂಗ ಭಟ್ಟ |
| 2003 | ಮಲ್ಪೆ ರಾಮದಾಸ ಸಾಮಗ | ಚಿಪ್ಪಾರು ಕೃಷ್ಣಯ್ಯ ಬಲ್ಲಾಳ | ಪಕಳಕುಂಜ ಕೃಷ್ಣ ನಾಯ್ಕ |
| 2004 | ಡಾ.ಅಮೃತ ಸೋಮೇಶ್ವರ | ಸರವು ಭಾಗವತ ಕೃಷ್ಣ ಭಟ್ಟ | ಹೆರಂಜಾಲು |

| | | ವೆಂಕಟ್ರಮಣ ಗಾಣಿಗ |
|---|---|---|
| 2005 ಡಾ. ವೆಂಕಟರಾಜ ಪುಣಿಂಚತ್ತಾಯ | ತೆಂಕಬೈಲು ತಿರ್ಮಲೇಶ್ವರ ಶಾಸ್ತ್ರಿ | ಕೋಳ್ಯೂರು ನಾರಾಯಣ ಭಟ್ಟ |
| 2006 ವಿ। ತಾಳ್ತಜೆ ಕೃಷ್ಣ ಭಟ್ಟ | ಅಗರಿ ರಘುರಾಮ ಭಾಗವತ | ಕುಡಾಣ ಗೋಪಾಲಕೃಷ್ಣ ಭಟ್ಟ |
| 2007 ತುದಿಯಡ್ಕ ವಿಷ್ಣುಯ್ಯ | ಹಿರಿಯಡ್ಕ ಗೋಪಾಲ ರಾವ್ | ಕೊಡಕ್ಕಲ್ಲು ಗೋಪಾಲಕೃಷ್ಣ ಭಟ್ಟ |
| 2008 ಅಂಬಾತನಯ ಮುದ್ರಾಡಿ | ತಲೆಂಗಳ ಗೋಪಾಲಕೃಷ್ಣ ಭಟ್ಟ | |
| 2010 ಡಾ. ಎಂ. ಪ್ರಭಾಕರ ಜೋಷಿ | ಪದ್ಯಾಣ ಶಂಕರನಾರಾಯಣ ಭಟ್ಟ | ಬೇತ ಕುಂಞ ಕುಲಾಲ್ |

ಇವರುಗಳಿಗೆ ನೀಡಿ ಸನ್ಮಾನಿಸಲಾಯಿತು. ತೆಂಕುತಿಟ್ಟಿನ ಅಗ್ರಮಾನ್ಯ ಕಲಾವಿದ ಶ್ರೀ ಕೆ. ಗೋವಿಂದ ಭಟ್ಟರಿಗೆ ದಶಮಾನೋತ್ಸವದ ಶುಭ ಸಂದರ್ಭದಲ್ಲಿ ಅವರ ಜೀವನದ ಸಾಧನೆಯನ್ನು ಗುರುತಿಸಿ ಹುಟ್ಟೂರಾದ ಕೋಡ ಪದವಿನಲ್ಲಿ 'ಜೀವಮಾನ ಸಾಧನ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು.

ಪ್ರತಿಷ್ಠಾನದ ಪ್ರಾರಂಭದಿಂದ ಎಲ್ಲ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿ ಕೊಂಡಿದ್ದ ಮುಳಿಯ ಗೋವಿಂದ ಭಟ್ಟರು ಒಬ್ಬ ವಿಶ್ವಸ್ಥರಾಗಿದ್ದು, ಅವರ ಅಕಾಲಿಕ ಮರಣದಿಂದಾಗಿ ಪ್ರತಿಷ್ಠಾನವು 2009ನೇ ವರುಷದ ಕಾರ್ಯಕ್ರಮವನ್ನು ಕುಂಠಿತಗೊಳಿಸಿತು.

ಪ್ರಸ್ತುತ ಪ್ರತಿಷ್ಠಾನದ ವತಿಯಿಂದ 'ಶ್ರೀ ವೀರಾಂಜನೇಯ ಸ್ವಾಮಿ ಕಲಾ ಸಾಧನ ಪ್ರಶಸ್ತಿ' ನೀಡುತ್ತಿದ್ದೇವೆ. ಅದನ್ನು ಗುರು ಮಾಂಬಾಡಿ ಸುಬ್ರಹ್ಮಣ್ಯ ಭಟ್ಟರಿಗೆ, ಕಲಾವಿದ ಬೊಮ್ಮಾರು ಐತಪ್ಪ ಗೌಡರಿಗೆ ಮತ್ತು ಅಗ್ರಮಾನ್ಯ ಸ್ತ್ರೀ ವೇಷಧಾರಿ ಕಡೆಂಗೋಡ್ಲು ಈಶ್ವರ ಭಟ್ ಕೊಕ್ಕಡ ಇವರಿಗೆ ನೀಡಿ ಪುರಸ್ಕರಿಸಲಾಯಿತು. ಪ್ರಶಸ್ತಿಯು ನಗದಿ ಹಣ, ಪ್ರಶಸ್ತಿ ಪತ್ರ, ಸ್ಮರಣಿಕೆ ಸುವಸ್ತುಗಳನ್ನು ಒಳಗೊಂಡಿದೆ.

**ವಿಶ್ವಸ್ಥ ಮಂಡಳಿ**



## ಸರಣಿ ಕಾರ್ಯಕ್ರಮಗಳು

| | ತಾರೀಕು | ಸ್ಥಳ | ಗೌರವಾರ್ಪಣೆ | ಸಹಯೋಗ |
|---|---|---|---|---|
| 1. | 23.03.14 | ಕೋಡಪದವು | ಶ್ರೀ ತಿರುಮಲೇಶ್ವರ ಭಟ್ಟ | ಶ್ರೀ ವೀರಾಂಜನೇಯ ಪ್ರತಿಷ್ಠಾನ ಯಕ್ಷಕಲಾ ವಿಶ್ವಸ್ತ ಮಂಡಳಿ |
| 2. | 30.3.14 | ಕಲ್ಮಡ್ಕ | ಶ್ರೀ ಸುಬ್ಬನ್ ಚೆಟ್ಟಿಯಾರ್ | ಸಂಗಮ ಕಲಾ ಸಂಘ, ಕಲ್ಮಡ್ಕ |
| 3. | 6.4.2014 | ದೇಲಂತಬೆಟ್ಟು | ಶ್ರೀ ಪೆರ್ವಡಿ ನಾರಾಯಣ ಭಟ್ | ಶ್ರೀಮತಿ ಲಕ್ಷ್ಮೀ ಅಮ್ಮ ಮತ್ತು ಮಕ್ಕಳು, ದೇಲಂತಬೆಟ್ಟು |
| 4. | 13.4.14 | ಯುಗಪುರುಷ ಕಿನ್ನಿಗೋಳಿ | ಶ್ರೀ ಅಂಬರೀಶ ಶೆಟ್ಟಿ | ಯುಗಪುರುಷ – ಯಕ್ಷಲಹರೀ ಕಿನ್ನಿಗೋಳಿ |
| 5. | 20.4.14 | ಪಣಂಬೂರು ನಂದನೇಶ್ವರ ದೇವಸ್ಥಾನ | ಶ್ರೀ ಪದ್ಮನಾಭ ಉಪಾಧ್ಯಾಯ | ಪಣಂಬೂರು ಪದ್ಮನಾಭಯ್ಯ ಶ್ಯಾನುಭೋಗ್ ಕಲಾ ಪರಿಷತ್ |
| 6. | 27.4.14 | ನಟರಾಜ ವೇದಿಕೆ ಪುತ್ತೂರು | ಶ್ರೀ ಕುರಿಯ ಗಣಪತಿ ಶಾಸ್ತ್ರಿ | ಯಕ್ಷರಂಗ ಪುತ್ತೂರು, ಶ್ರೀ ಮಹಾಲಿಂಗೇಶ್ವರ ದೇವಸ್ಥಾನ ಪುತ್ತೂರು |
| 7. | 4.5.2014 | ರಾಜಾಂಗಣ | ಶ್ರೀ ಗಣೇಶ ಕೊಲೆಕಾಡಿ | ಶ್ರೀಕೃಷ್ಣ ಮಠ ಉಡುಪಿ, ಯಕ್ಷ ಕಲಾರಂಗ (ರಿ) ಉಡುಪಿ |
| 8. | 10.3.2014 | ಮೂಡುಬಿದಿರೆ | ಶ್ರೀ ಮುರಳೀಧರ್ ಭಟ್ ಕಟೀಲು | ಶ್ರೀ ಯಕ್ಷದೇವ ಮಿತ್ರ ಕಲಾ ಮಂಡಳಿ (ರಿ) ಬೆಳುವಾಯಿ |
| 9, | 30.4.2014 | ಮಾದಕಟ್ಟೆ | ಶ್ರೀಮತಿ ಲೀಲಾವತಿ ಬೈಪಡಿತ್ತಾಯ | ಮಾದಕಟ್ಟೆ ಶ್ರೀ ವಿಷ್ಣುಮೂರ್ತಿ ದೇವಸ್ಥಾನ |
| 10. | 14.5.2014 | ಎಡನೀರು ಶ್ರೀಮಠ | ಶ್ರೀ ದೇಲಂತಮಜಲು ಸುಬ್ರಹ್ಮಣ್ಯ ಭಟ್ | ಶ್ರೀ ಎಡನೀರು ಮಠ |
| 11. | 12.7.2014 | ಕುಳಾಯಿ ದೇವಸ್ಥಾನ | ಎಂ. ಸದಾಶಿವ | ಪಣಂಬೂರು ಪದ್ಮನಾಭಯ್ಯ ಶ್ಯಾನುಭೋಗ್ ಕಲಾಪರಿಷತ್ |
| 12. | 17.1.2015 | ಶ್ರೀಕ್ಷೇತ್ರ ಕಟೀಲು | ಶ್ರೀ ಪುಚ್ಚಕೆರೆ ಕೃಷ್ಣ ಭಟ್ | ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಕಟೀಲು |

## ದಿವಾಣ ಭೀಮ ಭಟ್ಟರ ವಂಶವೃಕ್ಷ

ತಂದೆ : ದಿವಾಣ ದಿ। ಅಣ್ಣಪ್ಪ ಯಾನೆ ಸಂಕಣ್ಣ ಭಟ್
ತಾಯಿ : ದ್ರೌಪದಿ ಅಮ್ಮ

- ದಿವಾಣ ಭೀಮ ಭಟ್ಟ
  - ಮೊದಲ ಪತ್ನಿ ಪಾರ್ವತೀ
    - ಶ್ರೀಮತಿ ಲಕ್ಷ್ಮಿ–ದೇಲಂತಬೆಟ್ಟು ರಾಮ ಭಟ್ಟ
      - ಮಹಾಬಲೇಶ್ವರ
      - ಭೀಮಪ್ರಕಾಶ
      - ರಾಜೇಶ
      - ಉದಯನಾರಾಯಣ
      - ಶ್ಯಾಮಪ್ರಸಾದ
      - ಬಾಲಕೃಷ್ಣ
      - ಪಸನ್ನಾಶ್ರೀ
  - ಎರಡನೇ ಪತ್ನಿ ತಿರುಮಲೇಶ್ವರೀ ಅಮ್ಮ
    - ಶಂಕರ ಭಟ್ಟ–ಮೋಹಿನಿ
      - ಈಶ್ವರಿ
      - ಗಣೇಶ
      - ಸುಬ್ರಹ್ಮಣ್ಯ
    - ಈಶ್ವರ ಭಟ್ಟ–ಶಂಕರೀ
      - ವಿನಯ
      - ನಯನ
    - ಕೃಷ್ಣ ಭಟ್ಟ–ವಿಜಯಲಕ್ಷ್ಮಿ
      - ಶರಣ್ಯ
      - ಲಾವಣ್ಯ
    - ದ್ರೌಪದಿ–ಡಾ. ಶ್ಯಾಮ ಭಟ್ ಕೆರೆಕ್ಕೋಡಿ
      - ಗಣೇಶ
      - ಪೂರ್ಣಿಮ
    - ರಾಮಚಂದ್ರ–ಪರಮೇಶ್ವರಿ
      - ಕೃಷ್ಣಪ್ರಸಾದ
    - ಪರಮೇಶ್ವರಿ–ಡಾ. ರಾಮಕೃಷ್ಣ ಭಟ್
      - ರಮಾ
      - ಉಮಾ
      - ಸುಮಾ
    - ಗೋವಿಂದ–ಅನಿತಾ
      - ಅನನ್ಯ
    - ಶಾರದಾ–ರಾಘವೇಂದ್ರ ಅಧಿಕಾರಿ
      - ಶಾಂಭವಿ
- ದಿವಾಣ ನಾರಾಯಣ ಭಟ್ಟ



## ದಿವಾಣ ಭೀಮ ಭಟ್ಟ ಜನ್ಮಶತಮಾನೋತ್ಸವ ಸಮಿತಿ


'ಅನನ್ಯ', ಕುಂಟಲ್ಪಾಡಿ, ಶಕ್ತಿನಗರ, ಮಂಗಳೂರು – 575 016 (ದ.ಕ.)

ದೂರವಾಣಿ : 0824 2221364, 09448367645


ಗೌರವ ಅಧ್ಯಕ್ಷರು :

**ಶ್ರೀ ರಮಾನಾಥ ರೈ**

ಮಾನ್ಯ ಅರಣ್ಯ ಮತ್ತು ಪರಿಸರ ಸಚಿವರು ಮತ್ತು ಜಿಲ್ಲಾ ಉಸ್ತುವಾರಿ ಸಚಿವರು,
ದಕ್ಷಿಣಕನ್ನಡ, ಕರ್ನಾಟಕ ಸರಕಾರ

ಅಧ್ಯಕ್ಷರು :

**ಶ್ರೀ ಪ್ರದೀಪಕುಮಾರ ಕಲ್ಕೂರ**

ಅಧ್ಯಕ್ಷರು, ದ.ಕ. ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು

ಉಪಾಧ್ಯಕ್ಷರು :

**ವೇ.ಮೂ. ಲಕ್ಷ್ಮೀನಾರಾಯಣ ಅಸ್ರಣ್ಣರು**

ಶ್ರೀಕ್ಷೇತ್ರ, ಕಟೀಲು

**ಶ್ರೀ ಕುಂಬಳೆ ಸುಂದರ್ ರಾವ್**

ಮಾಜಿ ಅಧ್ಯಕ್ಷರು, ಕರ್ನಾಟಕ ಯಕ್ಷಗಾನ ಅಕಾಡೆಮಿ

**ಶ್ರೀ ಮೋನಪ್ಪ ಭಂಡಾರಿ**

ಮಾನ್ಯ ವಿಧಾನ ಪರಿಷತ್ತು ಸದಸ್ಯರು

**ಶ್ರೀ ಆರ್.ಡಿ. ಶಾಸ್ತ್ರಿ**

ಲೆಕ್ಕ ಪರಿಶೋಧಕರು, ಮಂಗಳೂರು

**ಡಾ. ವಸಂತಕುಮಾರ ಪೆರ್ಲ**

ನಿರ್ದೇಶಕರು, ಆಕಾಶವಾಣಿ, ಮಂಗಳೂರು

**ಶ್ರೀ ಗಣೇಶ ಕೊಲೆಕಾಡಿ**

**ಶ್ರೀ ಪುಂಡಿಕಾಯಿ ವೆಂಕಟರಮಣ ಭಟ್**

**ಶ್ರೀ ಗುರು ಕರ್ಗಲ್ಲು ವಿಶ್ವೇಶ್ವರ ಭಟ್**

ಕಾರ್ಯದರ್ಶಿ :

**ದಿವಾಣ ಗೋವಿಂದ ಭಟ್**

ಕೋಶಾಧಿಕಾರಿ :

**ದಿವಾಣ ಕೃಷ್ಣ ಭಟ್**

ಸಂಸ್ಮರಣ ಗ್ರಂಥದ ಸಂಪಾದಕರು :

**ಡಾ. ಎಂ. ಪ್ರಭಾಕರ ಜೋಷಿ**

**ವೇ.ಮೂ. ಹಿರಣ್ಯ ವೆಂಕಟೇಶ್ವರ ಭಟ್**


ದಿವಾಣ ಸಂಪದ / 200









ದಿವಾಣ ಭೀಮ ಭಟ್ಟರು ಮತ್ತು ಶ್ರೀಮತಿ ತಿರುಮಲೇಶ್ವರಿ ಅಮ್ಮ



ದಿವಾಣ ಭೀಮ ಭಟ್ಟರು ಹೆಂಡತಿ, ಸೊಸೆ ಮತ್ತು ಮೊಮ್ಮಗಳೊಂದಿಗೆ



ಕರ್ಗಲ್ಲು ಸುಬ್ರಹ್ಮಣ್ಯ ಭಟ್ಟರು, ಕರ್ಗಲ್ಲು ವಿಶ್ವೇಶ್ವರ ಭಟ್ಟರು ದಿವಾಣ ಅಳಿಯ ಡಾ. ಶ್ಯಾಮ ಭಟ್ಟರೊಂದಿಗೆ



ದಿವಾಣ-ಬಲಿಪ-ನೆಡ್ಲೆ, ಡಾ. ಮಾರ್ತಾ, ಗಣನಾಥ ಶೆಟ್ಟಿ, ಲಕ್ಷ್ಮೀನಾರಾಯಣ ಅಸ್ರಣ್ಣ



ಸಂಗಮ ಕಲಾಸಂಘ (ರಿ.) ಗೌರವ



ಆರ್.ಆರ್.ಸಿ. ಉಡುಪಿಯ ಕಾರ್ಯಕ್ರಮವೊಂದರಲ್ಲಿ ಭೀಮ ಭಟ್ಟರು ಭಾಗವತರಾಗಿ



ಆರ್.ಆರ್.ಸಿ. ಉಡುಪಿಯ ಕಾರ್ಯಕ್ರಮವೊಂದರಲ್ಲಿ ಮಂದಾರ ಕೇಶವ ಭಟ್ಟರೊಂದಿಗೆ ಚೆಂಡೆವಾದಕರಾಗಿ



ಆರ್.ಆರ್.ಸಿ. ಉಡುಪಿಯ ಕಾರ್ಯಕ್ರಮವೊಂದರಲ್ಲಿ<br>ದಿವಾಣ ಭೀಮ ಭಟ್ಟರು ಮದ್ದಳೆಗಾರರಾಗಿ ನೆಡ್ಲೆ ಮತ್ತು ಬಲಿಪರೊಂದಿಗೆ



ಪದ್ಯಾಣ ಜಯರಾಮ, ಭಾಗವತ ಪದ್ಯಾಣ ಗಣಪತಿ ಭಟ್ಟರು ದಿವಾಣರ ಜೊತೆ
ಕಲ್ಮಡ್ಕ ಸಂಗಮ ಕಲಾಸಂಘದ ಕಾರ್ಯಕ್ರಮದಲ್ಲಿ



ದಿವಾಣ ಭೀಮ ಭಟ್ಟರು ಸನ್ಮಾನ ಸ್ವೀಕರಿಸುತ್ತಿರುವುದು



ದಿವಾಣ ಪ್ರಶಸ್ತಿ ಕೊಡಪದವಿನಲ್ಲಿ - ಎಡನೀರು ಶ್ರೀಗಳವರಿಂದ ನೆಡ್ಲೆಯವರಿಗೆ ಗೌರವ



ದಿವಾಣ ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀ ಕಡತೋಕ ಮಂಜುನಾಥ ಭಾಗವತರು



ಕೋಡಪದವಿನಲ್ಲಿ ದಿವಾಣ ಪ್ರಶಸ್ತಿ ಸ್ವೀಕರಿಸುತ್ತಿರುವ ಶ್ರೀ ಚಿಪ್ಪಾರು ಕೃಷ್ಣಯ್ಯ ಬಲ್ಲಾಳರು



ದಿವಾಣ ಪ್ರಶಸ್ತಿ ತೆಂಕಬೈಲು ತಿರುಮಲೇಶ್ವರ ಶಾಸ್ತ್ರಿಗಳಿಗೆ





ಶ್ರೀ ವೀರಾಂಜನೇಯ ಸ್ವಾಮಿ ಪ್ರತಿಷ್ಠಾನ ಕೋಡಪದವಿನಲ್ಲಿ 2000ನೇ ಇಸವಿಯಲ್ಲಿ ಕೊಡಮಾಡಿದ ಪ್ರಶಸ್ತಿಪಾತ್ರರು





ಬಲಿಪ ಭಾಗವತರಿಗೆ ದಿವಾಣ ಪ್ರಶಸ್ತಿ



ದಿವಾಣ ಭೀಮ ಭಟ್ಟರು
ಯಕ್ಷಗಾನದ ಕುರಿತು,
ವಾದನದ ಕುರಿತು ನಿತ್ಯಚಿಂತಕ.
ವಾದನವನ್ನು, ರಂಗವನ್ನು ಹೇಗೆ ಇನ್ನಷ್ಟು
ಬೆಳೆಸಬಹುದೆಂಬುದರ ಕುರಿತು
ಸದಾ ಯೋಚನೆ ಮತ್ತು ಪ್ರಯೋಗಗಳಲ್ಲಿ ನಿರತರು.
ಪ್ರದರ್ಶನದ ರಸಾಸ್ವಾದನೆಯಲ್ಲೂ
ಅವರು ಓರ್ವ ಆದರ್ಶ ಸಹಕಲಾವಿದರಾಗಿದ್ದವರು.

ದಿ। ವಿದ್ವಾನ್ ಮುಂದಾರ ಕೇಶವ ಭಟ್ಟರು
ಮಂಗಳೂರಿನಲ್ಲಿ ಭಾಷಣವೊಂದರಲ್ಲಿ.



ಬೆಲೆ:
ರೂ. 300

ದಿವಾಣ ಭೀಮ ಭಟ್ಟ ಜನ್ಮ ಶತಮಾನೋತ್ಸವ ಸಮಿತಿ
ಮಂಗಳೂರು